

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

ಎಂ. ಫಿಲ್ ಪದವಿಯ ನಿಬಂಧ



ನಿಬಂಧದ ವಿಷಯ

# "ಕೊಡಗಿನ ಗೌರಮ್ಮನ ಸಣ್ಣ ಕಥೆಗಳ ಒಂದು ವಿಶ್ಲೇಷಣೆ"

ನೋಂದಣಿ ಸಂಖ್ಯೆ

BMSBKS - 00523




## ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
## ಎಂ. ಫಿಲ್ ಪದವಿಯ ನಿಬಂಧ

### ನಿಬಂಧದ ವಿಷಯ

**"ಕೊಡಗಿನ ಗೌರಮ್ಮನ ಸಣ್ಣ ಕಥೆಗಳ ಒಂದು ವಿಶ್ಲೇಷಣೆ"**

**ನೋಂದಣಿ ಸಂಖ್ಯೆ**

**BMSBKS – 00523**

# ಕೊಡಗಿನ ಗೌರಮ್ಮನ ಸಣ್ಣ ಕಥೆಗಳ ಒಂದು ವಿಶ್ಲೇಷಣೆ.

ಪರಿವಿಡಿ

ವಿಷಯ

## ಅಧ್ಯಾಯ – I

ಕ್ರಮ ಸಂಖ್ಯೆ



## ಅಧ್ಯಾಯ – II ಅಧ್ಯಾಯನದ ಸಮೀಕ್ಷೆಗಳು



## ಅಧ್ಯಾಯ – III ಸಮಾನತೆಗಾಗಿ ಹೋರಾಟ



## ಅಧ್ಯಾಯ – IV

## ಪೀಠಿಕೆ

ಮಹಿಳೆಯರಿಂದ ರಚಿತಗೊಂಡ ಕನ್ನಡ ಸಾಹಿತ್ಯವನ್ನು ಕುರಿತು ಚರ್ಚಿಸಬೇಕಾದರೆ, ಜಾನಪದ ಸಾಹಿತ್ಯದತ್ತಲೆ ದೃಷ್ಟಿ ಹರಿಸಬೇಕಾಗಿದೆ. ತಾಯಿಯರಿಂದ ಮಕ್ಕಳಿಗೆ ಹಾಗೂ ಮೊಮ್ಮಕ್ಕಳಿಗೆ ವಂಶ ಪಾರಂಪರ್ಯವಾಗಿ ಬಳುವಳಿಯಾಗಿ ಬಂದ ಜಾನಪದ ಹಾಡುಗಳನ್ನು ನೋಡುತ್ತೇವೆ. ಇದನ್ನು ಭಾಷೆಯ ಸನ್ನಿವೇಶಕ್ಕೆ ಅನುಸಾರವಾಗಿ ತೆಗೆದುಕೊಂಡರೆ, ತ್ರಿಪದಿ, ಚೌಪದಿ, ಸಾಂಗತ್ಯ, ಮತ್ತು ಛಂದಗಳಲ್ಲಿ ಹೊರಹೊಮ್ಮಿರುವುದನ್ನು ನೋಡಬಹುದು. ಕನ್ನಡದ ಪ್ರಥಮ ಕವಿಯತ್ರಿಯಾಗಿ 'ಕಂತಿ' ಯನ್ನು ನೋಡಬಹುದು. ಹಾಗೆಯೇ ಕನ್ನಡ ಸಾಹಿತ್ಯಕ್ಕೆ ಅಮೋಘವಾದ ಕೊಡುಗೆಯನ್ನು ಕೊಟ್ಟ ಅಕ್ಕಮಹಾದೇವಿಯನ್ನು ಕಾಣುತ್ತೇವೆ, ಸಂಚಿ ಹೊನ್ನಮ್ಮ, ಹದಿನೆಂಟನೇ ಶತಮಾನದ ಹೆಳವನಕಟ್ಟೆ ಗಿರಿಯಮ್ಮ ಇವರೆಲ್ಲರೂ ಮಹಿಳಾ ಸಾಹಿತ್ಯಕ್ಕೆ ಒಂದು ಉತ್ತಮ ವೇದಿಕೆಯನ್ನು ಒದಗಿಸಿಕೊಟ್ಟರು.

ಇಪ್ಪತ್ತನೇಯ ಶತಮಾನದ ಆರಂಭಿಕ ಕಾಲಘಟ್ಟದಲ್ಲಿ ಅನೇಕ ಬರಹಗಾರ್ತಿಯರು ಸಾಹಿತ್ಯದ ವಿವಿಧ ಪ್ರಾಕಾರಗಳಲ್ಲಿ ಅಭಿವ್ಯಕ್ತಿ ಕಂಡುಕೊಂಡಿದ್ದಾರೆ. ಹೊಸತನಗಳಿಗೆ ಸ್ಪಂದಿಸಿದ್ದಾರೆ. ವೈಚಾರಿಕತೆಯ ಚಿಂತನೆಗಳನ್ನು ಬಿಂಬಿಸಿದ್ದಾರೆ. ಇಷ್ಟಾದರು ಸಹ ಕಥಾ ವಿಮರ್ಶೆ, ಕಾವ್ಯ ಶತಮಾನದ ಮಾಲಿಕೆಗಳಲ್ಲಿ ಸೇರ್ಪಡೆಯಾಗಿಲ್ಲದಿರುವುದು ವಿಷಾದದ ಸಂಗತಿ ಹಾಗಾದರೆ, ಮಹಿಳಾ ಬರಹ ಮೌಲ್ವಿಕತೆಯನ್ನು ಕಂಡಿಲ್ಲವೆ, ಹಾಗಾದರೆ ಸ್ತ್ರೀ ಬರಹದ ಮಿತಿಗಳೇನು ಎಂಬುದನ್ನು ತಿಳಿಯಬೇಕು, ಸ್ತ್ರೀ ಸಾಹಿತ್ಯವನ್ನು ಭಿನ್ನಮಾನದಂಡಗಳಿಂದ ನೋಡಬೇಕು. ಮಹಿಳಾ ಅಧ್ಯಯನವು ಪ್ರತ್ಯೇಕತೆ, ರಿಯಾಯಿತಿ ಇವುಗಳ ಬದಲು ಭಿನ್ನತೆಯನ್ನು ಗುರುತಿಸಬೇಕು.

ಆಧುನಿಕ ಕನ್ನಡದ ಮೊದಲ ಬರಹಗಾರ್ತಿ ತಿರುಮಲಾಂಬ, ಕಲ್ಯಾಣಮ್ಮ, ಶ್ಯಾಮಲಾಬೆಳಗಾಂವಕರ್, ಕೊಡಗಿನ ಗೌರಮ್ಮ, ಸೀತಾದೇವಿ, ಸತ್ಯಭಾಮಾದೇವಿ, ಜಯಲಕ್ಷ್ಮಿ, ವಾಣಿ, ಮುಂತಾದವರ ಸಾಹಿತ್ಯವನ್ನು ಕಾಣುತ್ತೇವೆ. ಇದರಲ್ಲಿ ಕೊಡಗಿನ ಗೌರಮ್ಮನವರ ಕಂಬನಿ ಮತ್ತು ಚಿಗುರು ಕಥಾಸಂಕಲನವನ್ನು ನೋಡಿದಾಗ, ಅವರ ಸಾಹಿತ್ಯದಲ್ಲಿ ಕಂಡು ಬರುವ ಅಂಶವೆಂದರೆ, ಸಮಾಜದಲ್ಲಿ ಮಹಿಳೆಯ ಧನಿಯಾಗಿಯೇ ಪುರುಷ ಕೇಂದ್ರಿತ ಒಂದು ಹಂತದವರೆಗೆ ಮುಂದುವರೆದಿತ್ತು. ಸ್ತ್ರೀ ನಿಧಾನವಾಗಿ, ಏಕಾಂಗಿಯಾಗಿ ಕ್ರಮೇಣ ಹಂತ, ಹಂತವಾಗಿ ಬಹುಧನಿಯಾದಳು. ಗೌರಮ್ಮನ ಕಥೆಗಳಲ್ಲಿ ಕಾಣುವ ಬಹುಮುಖ್ಯವಾದ ಅಂಶವೆಂದರೆ ಕೌಟುಂಬಿಕ ಪರಿಸರದಲ್ಲಿ ಎಲ್ಲಾ ಮೌಲ್ಯಗಳನ್ನು ಎತ್ತಿಹಿಡಿದಿರುವವರು ಅದನ್ನು ಪೋಷಿಸುತ್ತಿರುವವರು ಮಹಿಳೆಯರೇ ಎಂಬುದನ್ನು ಇವರ ಕತೆಗಳಲ್ಲಿ ನಾವು ಕಾಣುತ್ತೇವೆ. ಬಾಲ್ಯವಿವಾಹ, ವಿಧವಾ ವಿವಾಹ, ವೈದವ್ಯ, ಬಾಲ ವೈದವ್ಯ, ವಿಧುರ ವಿವಾಹ, ವಿವಾಹದ ನಂತರ ಗಂಡು ಹೆಣ್ಣಿನ ಸ್ಥಾನಮಾನ, ವಿವಾಹ ವಿಚ್ಛೇದನ, ವರದಕ್ಷಿಣೆ ಹೀಗೆ ಹಲವಾರು ಸಮಸ್ಯೆಗಳನ್ನು ಕಾಣುತ್ತೇವೆ.

ಉದಾ : 'ವಾಣಿಯ ಸಮಸ್ಯೆ',

ಅಂತರ್ ಧರ್ಮಿಯ ವಿವಾಹಕ್ಕೆ ಉದಾಹರಣೆ : 'ಮುನ್ನಾದಿನ' ಹೀಗೆ ಗೌರಮ್ಮನವರ ಎಲ್ಲಾ ಕತೆಗಳು ಪ್ರೀತಿಯ ಸಾಕ್ಷಾತ್ಕಾರ ಮಾಡುವುದರ ಜೊತೆಗೆ, ಇಲ್ಲಿ ಆಗಬೇಕಾದ ಮಾನವೀಯತೆಯ ಬದಲಾವಣೆಯನ್ನು ಗೌರಮ್ಮನವರ ಕಥೆಗಳಲ್ಲಿ ನಾವು ನೋಡುತ್ತೇವೆ, ಹಾಗೂ ಮುಂದಿನ ಅಧ್ಯಯನದಲ್ಲಿ ಈ ವಿಚಾರದ ಬಗ್ಗೆ ಕೂಲಂಕುಷವಾಗಿ ಚರ್ಚಿಸಿದ್ದೇವೆ.

# ಅಧ್ಯಾಯ - ೧.೨

## ಉದ್ದೇಶ ಮತ್ತು ವ್ಯಾಪ್ತಿ

ಕನ್ನಡದ ಪ್ರಥಮ ಕಥೆಗಾರ್ತಿ ಕೊಡಗಿನ ಗೌರಮ್ಮ ಭಾರತದಾದ್ಯಂತ ಸ್ವಾತಂತ್ರ್ಯ ಆಂದೋಲನ ತೀವ್ರಗತಿಯಲ್ಲಿ ವ್ಯಾಪಿಸಿಕೊಂಡಿದ್ದಂತಹ ಕಾಲದಲ್ಲಿ ಬರವಣಿಗೆಯಲ್ಲಿ ತೊಡಗಿದ್ದವರು. ಸ್ತ್ರೀಯರ ಬದುಕನ್ನು ಮನಮುಟ್ಟುವಂತೆ ಚಿತ್ರಿಸಿದವರು.

ಇಂತಹವರ ಕೃತಿಯ ಅನನ್ಯತೆ ಆಶಯವನ್ನು ಗುರುತಿಸಬೇಕು. ಈ ಅಧ್ಯಯನದಲ್ಲಿ ಗೌರಮ್ಮನವರ 'ಕಂಬನಿ' ಮತ್ತು 'ಚಿಗುರು' ಎಂಬ ಕಥಾ ಸಂಕಲನದ ಕಥೆಗಳ ವಸ್ತುವಿನ್ಯಾಸದ ನೆಲೆಯಲ್ಲೇ ಅವುಗಳ ವಿಶ್ಲೇಷಣೆ ಕೈಗೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಗೌರಮ್ಮನವರ ಕಥೆಗಳ ಸಾಮಾಜಿಕ ಸಾಂಸ್ಕೃತಿಕ ರಾಜಕೀಯ ಹಾಗೂ ಲಿಂಗತಾರತಮ್ಯದ ಫಲಿತಗಳ ಅಭಿವ್ಯಕ್ತಿ ವಿನ್ಯಾಸಗಳನ್ನು ಗ್ರಹಿಸಲಾಗುವುದು.

ಗೌರಮ್ಮನವರ ಕಥೆಗಳಲ್ಲಿ ಸಾಹಿತ್ಯೇತರ ಅಭಿವ್ಯಕ್ತಿಯ ಮಹತ್ವದ ಚಿಂತನೆಗಳಿವೆ. ಸಾಂಸ್ಕೃತಿಕ ಒಳನೋಟಗಳಿವೆ. ವೈಚಾರಿಕ ಹೊಳಹುಗಳಿವೆ. ಮನೋವಿಶ್ಲೇಷಣೆಯ ನೆಲೆಗಳಿವೆ. ಅವುಗಳ ಮಹತ್ವ ಮತ್ತು ವೈಶಿಷ್ಟ್ಯತೆಯನ್ನು ಈ ಅಧ್ಯಯನದಲ್ಲಿ ಗುರುತಿಸ ಬೇಕಾಗಿದೆ. ಇವರ "ಕತೆಗಳಲ್ಲಿ ಕಟುತ್ವವಿದ್ದರೂ ರೊಚ್ಚಿಲ್ಲ. ಅವಾಸ್ತವದ ಆರ್ಭಟನೆ ಇಲ್ಲ ಕಲೆಯು ನೈಜವನ್ನು ಮರೆಮಾಚಿಲ್ಲ ಎಲ್ಲೆಲ್ಲಿಯೂ ಹೆಣ್ಣಿನ ಹೃದಯದ ಸಾಕ್ಷಿಯನ್ನು ಸಾರುವ ಹೃದಯಂಗಮ ಚಿತ್ರಣವಿದೆ" ಎಂದು ಬೇಂದ್ರೆಯವರೆ ಹೇಳಿದ್ದಾರೆ.

ಸಾಹಿತ್ಯ ಕ್ಷೇತ್ರಕ್ಕೆ ಮಹಿಳೆಯರು ಪ್ರವೇಶ ಮಾಡುವುದೇ ದುಸ್ತರವಾಗಿದ್ದ ಪರಿಸ್ಥಿತಿಯಲ್ಲಿ ಮಹಿಳಾ ಸಾಹಿತ್ಯಕ್ಕೆ ಒಂದು ಉತ್ತಮ ವೇದಿಕೆಯನ್ನು ಒದಗಿಸಿಕೊಟ್ಟ ಕಂತಿಯನ್ನು ನಾವಿಲ್ಲಿ ಕಾಣಬಹುದು. ಕನ್ನಡ ಸಾಹಿತ್ಯದ ಮೊದಲ ಕವಿಯತ್ರಿಯಾಗಿ ವಚನಕಾರ್ತಿಯಾದ ಅಕ್ಕಮಹಾದೇವಿಯನ್ನು ಕಾಣುತ್ತೇವೆ. ಅಕ್ಕಮಹಾದೇವಿಯು ಕನ್ನಡ ಸಾಹಿತ್ಯಕ್ಕೆ ಕೊಟ್ಟ ಕೊಡುಗೆ ಅಮೋಘವಾದದ್ದು. ಅವರ ವಚನ ಸಾಹಿತ್ಯದಿಂದಲೇ ಸ್ತ್ರೀಯರಿಗೆ ಬೌದ್ಧಿಕ ಹಾಗೂ ಆಧ್ಯಾತ್ಮಿಕ ಬೆಳವಣಿಗೆಗೆ ಸ್ವಾತಂತ್ರ ವ್ಯಕ್ತಿತ್ವ ಎಷ್ಟರ ಮಟ್ಟಿಗೆ ಅಗತ್ಯ ಎನ್ನುವುದನ್ನು ತೋರಿಸುವುದರ ಜೊತೆಗೆ ತಾವೇ ಪುರುಷರಿಗೆ ಸರಿಸಮಾನದ ಸ್ಥಾನವನ್ನು ಅನುಭವ ಮಂಟಪದಲ್ಲಿ ಆ ಕಾಲದಲ್ಲೇ ಪಡೆದುಕೊಂಡರು, ನಂತರ ಬಂದ ಸಂಚಿ ಹೊನ್ನಮ್ಮ ಈಕೆಯಲ್ಲಿದ್ದ ಕಾವ್ಯಶಕ್ತಿಯನ್ನು ಮೆಚ್ಚಿಕೊಂಡ ಗುರುಗಳು "ಹೊನ್ನಿ, ಸರಸ ಸಾಹಿತ್ಯದ ವರದೇವತೆ, ಹೊರದೇವತೆ, ಕಾವ್ಯಾಲಂಕಾರ, ನಾಟಕಗಳ ಪವಣಿಗೆಯ ಬಲ್ಲಳು" ದೊರೆಯ ಮುಂದೆ ನುಡಿದಾಗ ಆಗ ಚಿಕ್ಕ ದೇವರಾಜ ಒಡೆಯರು, ಹೊನ್ನಮ್ಮನಿಂದ 'ಹದಿಬಧೆಯ ಧರ್ಮ' ವನ್ನು ರಚಿಸಿದರು. ೧೮ನೇ ಶತಮಾನದಲ್ಲಿ ಹೆಳವನಕಟ್ಟೆ ಗಿರಿಯಮ್ಮ 'ಸೀತಾ ಕಲ್ಯಾಣ' ವನ್ನು ಹಾಡಿನ ರೂಪದಲ್ಲೂ ಮಕ್ಕಳಿಗಾಗಿ ಸಾಲಿರಾಮ, ಚಂದ್ರರಾಯರ ಸರಳ ಸುಂದರ ಛಂದದಲ್ಲಿ ರಾಮಾಯಣ ರಚಿಸಿದ್ದಾರೆ. ಹೀಗೆ ಪ್ರಾರಂಭಿಕ ಬರಹಗಾರ್ತಿ ಯರನ್ನು ನಾವಿಲ್ಲಿ ಕಾಣುತ್ತೇವೆ.

ಇನ್ನು ಸ್ವಾತಂತ್ರ ಪೂರ್ವದ ಕಾಲದಲ್ಲಿ ಜಯದೇವಿ ತಾಯಿ ಲಿಗಾಡೆ, ತಿರುಮಲೆ ರಾಜಮ್ಮ, ಲೀಲಾಬಾಯಿ ಕಾಮತ್, ಜಯಲಕ್ಷ್ಮಿಯವರ ಸಾಕಷ್ಟು ಸಾಹಿತ್ಯ ಸೇವೆಯನ್ನು ಕಾಣುತ್ತೇವೆ.

ಇದೇ ಕಾಲದಲ್ಲಿ ಸಣ್ಣಕತೆಗೆ ಹೆಸರಾದ ಲೇಖಕಿಯರು ಬೆಂಗಳೂರಿನ ಕಲ್ಯಾಣಮ್ಮ, ನಂಜನಗೂಡು ತಿರುಮಲಾಂಬಾ, ಉತ್ತರ ಕರ್ನಾಟಕದ ಶ್ಯಾಮಲಾ ಬೆಳಗಾಂವಕರ್, ದಕ್ಷಿಣ ಕನ್ನಡದ ಗಿರಿಬಾಲೆ, ಕೊಡಗಿನ ಗೌರಮ್ಮ, ಬೆಳಗೆರೆ ಜಾನಕಮ್ಮ ಮೊದಲಾದವರ ಸಾಹಿತ್ಯವನ್ನು ನಾವು ಈ ಕಾಲದಲ್ಲಿ ನೋಡುತ್ತೇವೆ. ಇವರುಗಳನ್ನೆಲ್ಲ ಆಧುನಿಕ ಯುಗದ ಮಹಿಳಾ ಕಥಾ ಸಾಹಿತಿಗಳು ಎಂದು ಕರೆಯುತ್ತೇವೆ. ಇವರ ಕಥಾ ಸಾಹಿತ್ಯವನ್ನು ನೋಡಿದಾಗ ಅದರಲ್ಲಿ ಕಾಣಿಸಿಕೊಳ್ಳುವ ಅತಿ ಮುಖ್ಯವಾದ ಅಂಶವೆಂದರೆ, ಸ್ತ್ರೀ ಶಿಕ್ಷಣ ಸ್ತ್ರೀ ಜಾಗ್ರತಿ ಸ್ತ್ರೀ ಸುಧಾರಣೆ. ಆದರೆ ಇವರ ಬರಹಗಳಲ್ಲಿ ಅತ್ಯಂತ ಸಾಂಪ್ರದಾಯಿಕ ಸ್ತ್ರೀ ಮೌಲ್ಯಗಳನ್ನೇ ಪ್ರತಿಪಾದಿಸುವವರಂತೆ ಕೆಲವು ಕಡೆ ತೋರಿದರೂ ಮತ್ತೆ ಕೆಲವು ಕಡೆ ಸ್ತ್ರೀಯರು ಎಲ್ಲದಕ್ಕೂ ಪುರುಷಾವಲಂಬಿಗಳಾಗಿರುವುದನ್ನು ಬಿಟ್ಟು ತಮ್ಮ ತನ, ತಮ್ಮ ಬುದ್ಧಿ ವಿವೇಕಗಳನ್ನು ಬೆಳೆಸಿಕೊಳ್ಳುವ ಮೂಲಕ ಸ್ತ್ರೀ ಜಗತ್ತಿಗೆ ಎಚ್ಚರಿಕೆ ಮೂಡಿಸಲು ಪ್ರಯತ್ನಿಸಿದ್ದಾರೆ ಎಂಬ ಅಂಶವನ್ನು ಮನಗಾಣಬಹುದು. ಇವರುಗಳೆಲ್ಲರು ಗೌರಮ್ಮನವರ ಸಮಕಾಲೀನರಾಗಿದ್ದರು. ಇವರುಗಳು ಕಥೆ ಬರೆಯಲು ಆರಂಭಿಸಿದ್ದು ಚಾರಿತ್ರಿಕ ಸಂಗತಿ. ಈ ಹಿನ್ನೆಲೆಯಲ್ಲಿ ಕೊಡಗಿನ ಗೌರಮ್ಮನ ಕಥೆಗಳನ್ನು ತೆಗೆದುಕೊಂಡು ಅಧ್ಯಯನ ಮಾಡಿದ್ದೇನೆ.

ಗೌರಮ್ಮನವರ ಕಂಬನಿ (೧೯೩೬) ಮತ್ತು ಚಿಗುರು (೧೯೪೨) ಕಥಾ ಸಂಕಲನಗಳಲ್ಲಿ ಒಟ್ಟು ೨೧ ಕಥೆಗಳಿವೆ.

ಕಂಬನಿ ಕಥೆಯಲ್ಲಿ ಒಟ್ಟು ೧೨ – ಕಂಬನಿ ಕಥಾಸಂಕಲನದಲ್ಲಿ

ಚಿಗುರು ಕಥೆಯಲ್ಲಿ ಒಟ್ಟು ೯ – ಚಿಗುರು ಕಥಾಸಂಕಲನದಲ್ಲಿ

ಹೀಗೆ ಕಂಬನಿ ಮತ್ತು ಚಿಗುರು ಎಂಬ ಕಥಾಸಂಕಲನಗಳ ಎಲ್ಲ ಕಥೆಗಳಲ್ಲೂ ಸರಳ ನಿರೂಪಣೆ, ವಾಸ್ತವದ ನೈಜ ಚಿತ್ರಣ ಮನ ಮಿಡಿವ ಸನ್ನಿವೇಶಗಳಿಂದ ಕೂಡಿದ ಇವರ ಕತೆಗಳನ್ನು ನಾನು ಮೊಟ್ಟಮೊದಲ ಬಾರಿಗೆ ಎಂ.ಫಿಲ್ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದೇನೆ.

# ಅಧ್ಯಾಯ – II

# ಅಧ್ಯಾಯನದ ಸಮೀಕ್ಷೆಗಳು

ಸಣ್ಣಕತೆ

ಆಧುನಿಕ ಮಹಿಳಾ ಸಣ್ಣ ಕಥಾ ಸಾಹಿತ್ಯ

ಗೌರಮ್ಮನ ವೈಯಕ್ತಿಕ ಹಿನ್ನೆಲೆ

ಗೌರಮ್ಮನ ಕಥೆಗಳಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ

ಗೌರಮ್ಮನ ಕಥೆಗಳಲ್ಲಿ ಸ್ತ್ರೀಯ ಅಸಹಾಯಕತೆ

ಗೌರಮ್ಮನ ಕಥೆಗಳ ಭಾವ ಸಂಘರ್ಷ

## ಅಧ್ಯಾಯ – ೨.೧ ಸಣ್ಣ ಕಥೆ

ಆಧುನಿಕ ಕನ್ನಡದಲ್ಲಿ ಸಣ್ಣ ಕಥಾ ಸಾಹಿತ್ಯದ ಇತಿಹಾಸವು ಪಾಶ್ಚಿಮಾತ್ಯ ಸಾಹಿತ್ಯದಿಂದ ಆರಂಭವಾಗುತ್ತದೆ. ಹಲವು ಹೊಸ ಪ್ರಕಾರಗಳ ಜೊತೆಗೆ ರೂಪಿತವಾದ ಈ ಆಧುನಿಕ ಪರಿಕಲ್ಪನೆ ಪಾಶ್ಚಿಮಾತ್ಯ ಸಂಪರ್ಕದಿಂದ ಬಂದದ್ದು. ೨೦ನೇ ಶತಮಾನದ ಸಮಯದಲ್ಲಿ ಕನ್ನಡ ಸಾಹಿತ್ಯದಲ್ಲಿ ಅನೇಕ ಹೊಸ ಪ್ರಕಾರಗಳು ರೂಪುಗೊಂಡವು. ಅವುಗಳೆಂದರೆ ಭಾವಗೀತೆ, ಸಾನೆಟ್, ಸಣ್ಣಕತೆ, ಕಾದಂಬರಿ, ನಾಟಕ, ವಿಮರ್ಶೆ, ಜೀವನಚರಿತ್ರೆ, ಆತ್ಮಚರಿತೆ, ಪ್ರಬಂಧ, ಲಲಿತಪ್ರಬಂಧ ಇತ್ಯಾದಿ. ಆಧುನಿಕ ಸಾಹಿತ್ಯದಲ್ಲಿ ರೂಪುಗೊಂಡ ಸಾಹಿತ್ಯ ಪ್ರಕಾರಗಳಲ್ಲಿ ಸಣ್ಣಕತೆಯು ಒಂದು [೧]"ಸಣ್ಣಕತೆ ಅತ್ಯಂತ ಹುಲುಸಾಗಿ ಬೆಳೆದಿರುವ ಸಾಹಿತ್ಯ ಪ್ರಕಾರವಾಗಿದೆ. ಕಾಲಕಾಲಕ್ಕೆ ಬದಲಾಗುತ್ತ, ಬೆಳೆಯುತ್ತ, ಹೊಸಹೊಸ ಆಹ್ವಾನಗಳಿಗೆ ತನ್ನನ್ನು ತಾನು ಒಡ್ಡಿಕೊಳ್ಳುತ್ತ ತನ್ನ ಜೀವಂತಿಕೆಯನ್ನು ಕಾಪಾಡಿಕೊಂಡು ಬಂದಿದೆ."[೧]

'ಸಣ್ಣಕತೆ'ಯು ಪ್ರಬಂದ, ಲಲಿತ ಪ್ರಬಂಧ, ಇವುಗಳಿಗಿಂತ ಹೆಚ್ಚು ಜನಪ್ರಿಯತೆಯನ್ನು ಗಳಿಸಿದೆ. ಏಕೆಂದರೆ ಸಣ್ಣಕತೆಯಲ್ಲಿ ಬಳಸುವ ಭಾಷಾ ಸ್ವರೂಪ, ವಿಷಯ ಜನಸಾಮಾನ್ಯರಿಗೆ ಹತ್ತಿರವಾಗಿರುತ್ತದೆ. ಕನ್ನಡದ ಸಣ್ಣಕತೆಗೆ ೧೦೦ ವರ್ಷಗಳ ಇತಿಹಾಸವಿದೆ. ಸಣ್ಣಕತೆಯ ಬೆಳವಣಿಗೆಯನ್ನು ಪ್ರಮುಖವಾಗಿ ಐದು ಹಂತಗಳಲ್ಲಿ ಗುರುತಿಸಬಹುದು ನವೋದಯ, ಪ್ರಗತಿಶೀಲ, ನವ್ಯ ದಲಿತ ಮತ್ತು ಬಂಡಾಯ. ಈ ಐದು ಹಂತಗಳು ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯ ಮುಖ್ಯಹಂತಗಳು ಹೌದು. ಎಂದರೆ, ಕನ್ನಡದ ಸಣ್ಣಕತೆಯು ನಮ್ಮ ಆಧುನಿಕ ಸಾಹಿತ್ಯದ ಎಲ್ಲ ಪ್ರಮುಖ ಚಳವಳಿಗಳಲ್ಲೂ ಕ್ರಿಯಾಶೀಲವಾಗಿ ಬೆಳೆದಿದೆ ಎನ್ನಬಹುದು. ಈ ಎಲ್ಲ ಹಂತಗಳಿಗೂ ಅವುಗಳದೇ ಆದ ವಿಶಿಷ್ಟ ಲಕ್ಷಣಗಳಿವೆ.

ಆದರೆ ಅವು; ಏಕಕಾಲಕ್ಕೆ ಜಾರಿಯಲ್ಲಿದ್ದವು ಎನ್ನುವುದನ್ನು ಅಲ್ಲಗಳೆಯುವಂತಿಲ್ಲ. ನವೋದಯ ಕಾಲದ ನಂತರ ಪ್ರಗತಿಶೀಲ, ನವ್ಯ ಬಂಡಾಯ ಹಾಗೂ ದಲಿತ ಕಾಲ ಪ್ರಾರಂಭವಾದರೂ ನವೋದಯ ಕಾಲದ ಕತೆಗಳು ಇಂದಿಗೂ ಬರುತ್ತಲೇ ಇವೆ. ಪ್ರಗತಿ ಶೀಲ ಚಳವಳಿ ನಿಯಮಾನುಸಾರವಾಗಿ ಆರಂಭವಾಗುವದಕ್ಕಿಂತ ಬಹಳ ಮುಂಚೆಯೇ ಆ ಲಕ್ಷಣದ ಕತೆಗಳು ಬರತೊಡಗಿದ್ದವೆಂಬುದನ್ನು ಗುರುತಿಸಬಹುದು. ಹಾಗೆಯೇ ಬಂಡಾಯದ ದಾಳಿಯನ್ನು ಎದುರಿಸಿಯೂ ನವ್ಯ ಕಥೆಗಳು ಮುಂದುವರಿಯುತ್ತಲೇ ಇರುವುದನ್ನು ನೋಡುತ್ತೇವೆ. ಇತ್ತೀಚಿನ ದಿನಗಳಲ್ಲಿ ಕೇವಲ ಬಂಡಾಯದ ಕಥೆ ಎಂದು ಮಾತ್ರ ನಿರ್ಧರಿಸದೆ, ದಲಿತ ಬಂಡಾಯ ಕಥೆ ಎಂದು ಕರೆಯುವುದನ್ನು ಗಮನಿಸಬಹುದಾಗಿದೆ. ಅಲ್ಲದೆ, ಹೊಸ ಚಳುವಳಿಗಳ ಪ್ರಭಾವದಿಂದ ಹಳೆಯ ಮಾರ್ಗಗಳಿಗೂ ಹೊಸತಿರುವು ಬರುತ್ತಿರುವ ಉದಾಹರಣೆಗಳನ್ನು ನೋಡಬಹುದು.

೧೯೦೦ರಲ್ಲಿ ದಿ. ಪಂಜೆ ಮಂಗೇಶರಾಯರ 'ಸುವಾಸಿನಿ' ಎಂಬ ಪತ್ರಿಕೆಯಲ್ಲಿ

---

[೧] ಡಾ. ಗಿರಡಿ ಗೋವಿಂದರಾಜ್ : ಕಲ್ಪಿತ ವಾಸ್ತವ ಕನ್ನಡ ಸಣ್ಣಕತೆ, ಸಾಹಿತ್ಯ ಪ್ರಕಾಶನ : ಕನ್ನಡ ಸಣ್ಣಕಥೆ. ಪುಟ-೧೨

ಪ್ರಕಟವಾದ 'ನನ್ನ ಚಿಕ್ಕತಾಯಿ', 'ಭಾರತ ಶ್ರವಣ' 'ಕಮಲ ಪುರದ ಹೊಟ್ಲಿನಲ್ಲಿ' ಇವು ಆರಂಭದ ಸಣ್ಣಕತೆಗಳು ಎಂದು ಗುರುತಿಸಬಹುದು. ಈ ಕತೆಗಳಲ್ಲಿ ಆಧುನಿಕ ಸಣ್ಣ ಕತೆಯ ಸ್ವರೂಪ ಇನ್ನು ಖಚಿತವಾಗಿ ಮೂಡಿಬಂದಿರಲಿಲ್ಲ. ಆದರೆ ಕತೆಯಲ್ಲಿ ಹಾಸ್ಯ ಪೂರ್ಣವಾದ ಪ್ರಸಂಗಗಳನ್ನು ನಿರೂಪಿಸಲಾಗಿದೆ. ಮಂಗಳೂರಿನ ಎಂ. ಎನ್. ಕಾಮತ್, ಉತ್ತರ ಕರ್ನಾಟಕದಲ್ಲಿ ವಾಸುದೇವಚಾರ್ಯರು ಸಣ್ಣಕತೆಗೆ ಒಂದು ಘನತೆಯನ್ನು ತಂದು ಕೊಟ್ಟರು. ಇವರಿಬ್ಬರಲ್ಲಿ ಐತಿಹಾಸಿಕ ಮಹತ್ವವನ್ನು ಮೀರಿದ ಸತ್ವ ಕೆರೂರ ಕತೆಗಳಲ್ಲಿ ಮಾತ್ರ ಕಾಣುತ್ತೇವೆ. ಈ ಆರಂಭದ ಸಮಾಜದಲ್ಲಿ ಕೆರೂರರ 'ಮಲ್ಲೇಶಿಯಾ ನಲ್ಲೆಯರು' ಕತೆಯನ್ನು ಒಂದು ಉತ್ತಮ ಉದಾಹರಣೆ ಎಂದು ಆಯ್ಕೆ ಮಾಡಿಕೊಳ್ಳಲಾಗಿದೆ. ಮಾಸ್ತಿಯವರದ್ದು ೧೯೧೧ ರಲ್ಲಿ ಮಧುರವಾಣಿ ಎಂಬ ಪತ್ರಿಕೆಯಲ್ಲಿ ಮೊದಲ ಕತೆಯನ್ನು ಪ್ರಕಟಿಸಲಾಯಿತು.

ನಂತರ ೧೯೨೦ರಲ್ಲಿ ಅವರ ಮೊದಲ ಕಥಾ ಸಂಗ್ರಹ ಕೆಲವು ಸಣ್ಣ ಕತೆಗಳು ಪ್ರಕಟವಾಯಿತು. ಇದೇ ಕನ್ನಡದ ಮೊದಲ ಕಥಾಸಂಗ್ರಹ. ಈ ಸಂಗ್ರಹದೊಂದಿಗೆ ಕನ್ನಡದ ಸಣ್ಣಕತೆ ಪ್ರಬುದ್ಧಾವಸ್ಥೆಗೆ ಬರಲು ಆರಂಭಿಸಿತು.

ಕಾವ್ಯ, ಕಾದಂಬರಿ, ಮತ್ತು ನಾಟಕ, ಅಭಿವ್ಯಕ್ತಿಗೆ ಸೂಕ್ತ ಮಾಧ್ಯಮಗಳು ಎಂದು ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ. ಒಬ್ಬ ಲೇಖಕನ ಸಮಗ್ರ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಒಳಗೊಳ್ಳುವ ಶಕ್ತಿ ಸಣ್ಣಕತೆಗಳಲ್ಲಿ ಇಲ್ಲ ಎಂದರು. ಆದರೆ ಮಾಸ್ತಿಯವರ ಸಣ್ಣಕತೆಗೆ ಆ ಶಕ್ತಿ ಇದೆ ಎಂದು ತೋರಿಸಿಕೊಟ್ಟರು. ಜೊತೆಗೆ ಆಧುನಿಕ ಸಣ್ಣಕತೆಗೆ ಮಹತ್ವವನ್ನು ತಂದು ಕೊಟ್ಟರು. ಇವರು ೧೦೦ಕ್ಕೂ ಹೆಚ್ಚು ಕತೆಗಳನ್ನು ಬರೆದಿದ್ದಾರೆ, ಜಗತ್ ಸಾಹಿತ್ಯಕ್ಕೆ ಹೋಲಿಸಬಹುದಾದ ಹತ್ತಾರು ಕತೆಗಳನ್ನು ಮಾಸ್ತಿಯವರು ನೀಡಿದ್ದಾರೆ. ಅವರ 'ಗೌತಮಿ ಹೇಳಿದ ಕಥೆ' 'ಒಂದು ಹಳೆಯ ಕತೆ' 'ವೆಂಕಟಸ್ವಾಮಿಯ ಪ್ರಣಯ' 'ವಿಚಿತ್ರ ಪ್ರೇಮ' 'ಮೊಸರಿನ ಮಂಗಮ್ಮ' 'ವಸುಮತಿ' 'ವೆಂಕಟಿಗನ ಹೆಂಡತಿ' ಈ ಎಲ್ಲ ಕತೆಗಳು ಅತ್ಯಂತ ಮಹತ್ವದ ಕತೆಗಳಾಗಿವೆ. ಜೀವನದ ಅನುಭವವೇ ಮಾಸ್ತಿಯವರ ಕತೆಯ ಪ್ರಧಾನತೆ. ಮಾಸ್ತಿಯವರ ಈಡೀ ಸಾಹಿತ್ಯದ ಮುಖ್ಯಗುರಿ ತಾಳುವಿಕೆ ಇದರೊಡನೆ ಇವರ ಕತೆಗಳಲ್ಲಿ ಹಲವು ಪ್ರಮುಖ ಅಂಶಗಳನ್ನು ಗುರಿತಿಸಬಹುದು. ಹೀಗೆ ಅವರ ಯಶಸ್ವಿ ಕಥೆಗಳ ಸಾಲೇ ಇದೆ.

ಮಾಸ್ತಿಯವರದ್ದು ಸಾಂಪ್ರದಾಯಿಕ ದೃಷ್ಟಿ ಎಂಬ ಮಾತು ಈಗಾಗಲೇ ನಮ್ಮ ವಿಮರ್ಶೆಯಲ್ಲಿ ಪ್ರಚಲಿತವಾಗಿದೆ ಮತ್ತು ಅವರ ಸಾರ್ಥಕ ಕಥೆಗಳ ಶಕ್ತಿ ಸಂಪ್ರದಾಯದ ಶಕ್ತಿಯಿಂದ ಬಂದುದು ಎಂಬ ಮಾತು ಇದೆ. [1]"ಒಂದು ಸಂಕೀರ್ಣವಾದ ಸಾಮಾಜಿಕ ವ್ಯವಸ್ಥೆಯಲ್ಲಿ ಅನ್ಯಾಯಕ್ಕೆ ಒಳಗಾದವರಬಗೆಗೆ ಮಾಸ್ತಿಯವರಿಗೆ ಸಹಾನುಭೂತಿ ಇದೆ. ಆದರೆ ಇಂಥ ಅನ್ಯಾಯದ ವಿರುದ್ಧ ಉದ್ವೇಗದಿಂದ ಆಕ್ರೋಶಿಸುವುದರಿಂದಾಗಲಿ ಬಂಡೇಳುವದರಿಂದಾಗಲಿ, ಬದುಕು ಚೆನ್ನವಾದೀತೆಂದು ಅವರಿಗೆ ಅನ್ನಿಸುವುದಿಲ್ಲ. ಆಕ್ರೋಶ, ಬಂಡಾಯಗಳು ಅಂಥ ದೊಡ್ಡ ಗುಣಗಳೆಂದೂ ಅವರು ತಿಳಿಯುವುದಿಲ್ಲ. ಬದಲಿಗೆ

---

[1] ಡಾ. ಗಿರಡಿ ಗೋವಿಂದರಾಜ್, ಕಲ್ಪಿತ ವಾಸ್ತವ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ಪಟ–೧೭

ಸಂಯಮದಿಂದ, ಅಂತಃ ಶಕ್ತಿಯಿಂದ ವೈಯಕ್ತಿಕ ನೋವನ್ನು ಗೆಲ್ಲಬಲ್ಲ ಧೀರೋದ್ಧಾರತೆ ಅವರಿಗೆ ಹೆಚ್ಚು ದೊಡ್ಡದಾಗಿ ಕಾಣುತ್ತದೆ"[3].

ಇವರು ಸಾಮಾನ್ಯ ಜನರಲ್ಲಿಯೂ ಒಂದು ಸಂಸ್ಕೃತಿಯ ಗುಣಗಳನ್ನು ನಿರೂಪಿಸುತ್ತಾರೆ. ಮಾಸ್ತಿಯವರು ಸಹಜಕತೆಗಾರರು. ಏಕೆಂದರೆ, ಇವರು ಜೀವನದ ಅನುಭವವನ್ನು ಕತೆಯ ನಿರೂಪಣಾಂಶವನ್ನಾಗಿಟ್ಟುಕೊಂಡು, ಅವರ ಮುಖ್ಯಗುರಿಯಾದ ತಾಳುವಿಕೆಯನ್ನು ಸಹಜವಾಗಿ ತಮ್ಮ ಕಥನದಲ್ಲಿ ಜನಸಾಮಾನ್ಯರಿಗೆ ಮನಮುಟ್ಟುವಂತೆ ನಿರೂಪಿಸಿದ್ದಾರೆ. ಮಾಸ್ತಿಯವರ ಮೊದಲ ಸಂಗ್ರಹ ಪ್ರಕಟವಾಗುತ್ತಿದ್ದಂತೆಯೇ ಅದು ಅನೇಕ ಹೊಸಲೇಖಕರ ಮೇಲೆ ಪ್ರಭಾವ ಬೀರಿತು.

ಹೀಗೆ ಆನಂದ, ಕೆ. ಗೋಪಾಲಕೃಷ್ಣರಾವ್, ಗೊರೂರು, ಭಾರತೀಪ್ರಿಯ ಮುಂತಾದವರು ಸಣ್ಣಕತೆಗಳ ಬೆಳವಣಿಗೆಗೆ ಹೆಚ್ಚಿನ ಸಹಾಯವನ್ನು ನೀಡಿದರು. ಆನಂದ, ಆನಂದ ಕಂದ, ಬೆಟ್ಟಗೇರಿ ಕೃಷ್ಣಶರ್ಮ ಇವರು ಕೂಡ ಸಣ್ಣಕತೆಗಳನ್ನು ರಚಿಸಿದ್ದಾರೆ. ಕುವೆಂಪುರವರು' 'ಸಾಲದ ಮಗು' 'ಆದರ್ಶ ಸಾಧನೆ' ಇತ್ಯಾದಿ ಸಣ್ಣಕತೆಗಳನ್ನು ಬರೆದಿದ್ದಾರೆ. ಎ.ಆರ್. ಕೃಷ್ಣ ಶಾಸ್ತ್ರಿಯವರು ಕೂಡ ಸಣ್ಣಕತೆಗಳನ್ನು ಬರೆದಿದ್ದಾರೆ. ಪು.ತಿ.ನ ಅವರ ಸ್ವಾತಂತ್ರ್ಯಕಾಲದ ವಸ್ತುವುಳ್ಳ 'ಧ್ವಜ ರಕ್ಷಣೆ' ಕಥೆ, ಕಾರಂತ ರಸಜೀವನಬದ್ಧ ದೃಷ್ಟಿಕೋನವುಳ್ಳ ಕತೆಗಳು, ಸಮೃದ್ಧ ಸೃಷ್ಟಿಯ ದ್ಯೋತಕಗಳಾಗಿವೆ. ಹೀಗೆ ನವೋದಯದ ಸಣ್ಣಕತೆಗಳು ಖಚಿತವಾದ ತಾತ್ವಿಕ ಹಿನ್ನೆಲೆಯಿಂದ ರೂಪುಗೊಂಡ ರಚನೆಗಳಾಗಿವೆ. ಆ ಸಮಯದಲ್ಲಿ ಬಂದ ಬರವಣಿಗೆಯಲ್ಲಿ ಆಶಾವಾದ, ಆದರ್ಶೀಕರಣ ಅದರ ಅಂಕಿತವಾಯಿತು. ದೇಶದ ಇತಿಹಾಸ, ಸಂಸ್ಕೃತಿಗಳ ಬಗ್ಗೆ ಹೊಸ ಅಭಿಮಾನವನ್ನು ಪ್ರಕಟಿಸಿತು. ಅಂದಿನ ಕತೆಗಾರರು ಅಲೌಖಿಕ ದೃಷ್ಠಿಕೋನ ಧಾರ್ಮಿಕ ಶ್ರದ್ಧೆ, ನಿಸರ್ಗ ಪ್ರೇಮ, ಮಾನವತಾವಾದ ಜೀವನದ ದೃಷ್ಠಿಯಿಂದ ಕತೆಗಳನ್ನು ರಚಿಸಿದರು. ಇವುಗಳ ಜೊತೆ ಸಮಕಾಲಿನ ಬದುಕಿಗೆ ಎದುರಾಗುವ ಅಂಶಗಳನ್ನು ಲೇಖಕರು ಗುರುತಿಸಿದರು. ಹಳೆಯ ಮೌಲ್ಯಗಳ ಬಗೆಗೆ ಸಂದೇಹಗಳು ವ್ಯಕ್ತವಾದವು. ಆದರೂ ಹೆಚ್ಚಿನವರು ಸುಧಾರಣೆ ಮತ್ತು ಹೊಂದಾವಣಿಕೆಯ ಕಡೆ ಒಲವು ತೋರಿದರು. ಏನೇ ಆದರೂ ಅವರದು ಕ್ರಾಂತಿಕಾರಿ ದೃಷ್ಟಿಯಲ್ಲ. ಹೆಚ್ಚು ಸಮಾಜ ಮುಖಿಯಾಗಿವೆ ಎಂದು ಹೇಳಬಹುದು.

ಪ್ರಗತಿಶೀಲ ಕಥನ ಸಾಹಿತ್ಯವನ್ನು ಪ್ರಧಾನ ಮಾಧ್ಯಮ ಎಂದು ಹೇಳಬಹುದು. ಇದರಲ್ಲಿ ಕಾವ್ಯ, ನಾಟಕ ಇತರ ಪ್ರಕಾರಗಳು ಅಷ್ಟಾಗಿ ಕಾಣಿಸಿಕೊಳ್ಳುವುದಿಲ್ಲ. ಪ್ರಮುಖವಾಗಿ ಕಾಣುವುದು ಕಾದಂಬರಿ ಮತ್ತು ಕಥೆಗಳು, ಪ್ರಗತಿಶೀಲ ಸಾಹಿತ್ಯದಲ್ಲಿ ಮೊದಲಿಗೆ ಅ.ನ.ಕೃರವರ 'ಕಥಾಂಜಲಿ' ಮತ್ತು 'ಕಾಮನ ಬಿಲ್ಲು' ಎಂಬ ಸಣ್ಣಕತೆಯನ್ನು ರಚಿಸಿದರು. ಅನಂತರ ತ.ರಾ.ಸು. ನಿರಂಜನ, ಬಸವರಾಜ ಕಟ್ಟಿಮನಿ ಮುಂತಾದವರು ಸಣ್ಣಕತೆಯನ್ನು ಪ್ರಕಟಿಸಿದರು. ತ.ರಾ.ಸು ರವರ ಸಣ್ಣ ಕತೆಯಾದ ೦-೦=೦? ಎಂಬ ಕತೆಯನ್ನು ಬರೆದರು. ಇವರ ಸಣ್ಣಕತೆಯಲ್ಲಿ ನಾವು ನವ್ಯತೆಯ ಅಂಶವನ್ನು ಸ್ಥೂಲವಾಗಿ ಕಾಣಬಹುದು. ನಿರಂಜನರವರ 'ಕೊನೆಯ ಗಿರಾಕಿ' ಸಣ್ಣಕತೆ ಸಾಹಿತ್ಯದಲ್ಲಿ ಪ್ರಮುಖವಾದ ಪ್ರಗತಿಶೀಲ ಆಶಯವನ್ನು ಪ್ರತಿನಿದಿಸುವ ಪ್ರಮುಖ ಕತೆಯಾಯಿತು. ಅದೇ ರೀತಿಯಲ್ಲಿ ಬಸವರಾಜ ಕಟ್ಟೀಮನಿ

'ಗಿರಿಜಕಂಡ ಸಿನಿಮಾ' ಈ ಕಥನ ಸಾಹಿತ್ಯ ಪ್ರಗತಿಶೀಲದ ಬಹುಪಾಲು ಶೋಷಣೆ, ಅಸಮಾನತೆ, ಕೆಳವರ್ಗದವರ ನೊಂದ ಧ್ವನಿ ಇತ್ಯಾದಿಗಳನ್ನು ಪ್ರತಿನಿಧಿಸುತ್ತದೆ. ಇದು ಬದುಕಿನ ದುರಂತ ಕಥೆಯ ವಿವಿಧ ಸ್ವರೂಪಗಳನ್ನು ಹೇಳುತ್ತದೆ. "ಈ ಕಾಲದ ಲೇಖಕರು ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ಒಪ್ಪಿಕೊಳ್ಳಬೇಕು. ದಲಿತರ ವಾಣಿಯಾಗಬೇಕು. ನಮ್ಮ ಸಂಸ್ಕೃತಿಯ ಇಂದಿನ ಮೋಸ, ಶೋಷಣೆಗಳನ್ನು ಬಯಲಿಗೆಳೆಯಬೇಕೆಂದು ಪ್ರತಿಪಾದಿಸಿದರು. ಒಂದೇ ಮಾತಿನಲ್ಲಿ ಹೇಳುವುದಾದರೆ, ಲೇಖಕ ಸಾಮಾಜಿಕ ಕ್ರಾಂತಿಯ ಹರಿಕಾರನಾಗಬೇಕೆಂದು ಪ್ರಗತಿ ಶೀಲರು ಸಾರಿ ಹೇಳಿದರು"[೩].

ನವೋದಯದ ಸಣ್ಣಕತೆಗಳಲ್ಲಿ ಕಾಣುತ್ತಿದ್ದ ಭಿನ್ನ ಹಾಗೂ ಹೊಸ ದೃಷ್ಟಿ ಧೋರಣೆಗಳನ್ನು ಪ್ರಗತಿಶೀಲರು ತಮ್ಮ ಸಣ್ಣ ಕತೆಗಳಲ್ಲಿ ನಿರೂಪಿಸಿದವರು. ಆದರೂ ಈ ಘಟ್ಟದಲ್ಲಿ ಸಣ್ಣಕತೆಯ ಬಂಧ ಸ್ವಲ್ಪ ಸಡಿಲವಾಗಿದ್ದು ಗಮನಾರ್ಹವಾದದ್ದು. ಪ್ರಗತಿಶೀಲ ಕಥೆಯಲ್ಲಿ ಸಾಮಾಜಿಕ ಪ್ರಜ್ಞೆಯೇ ಮುಖ್ಯ ಲಕ್ಷಣವಾಗಿದ್ದರೆ, ನವ್ಯ ಕತೆಯಲ್ಲಿ ತಾತ್ವಿಕ, ಅಂತರ್ಮುಖತೆಯೇ ಮುಖ್ಯವಾಗುತ್ತದೆ. ಈ ಸೂಕ್ಷ್ಮ ಉದ್ದೇಶಗಳಿಗೆ ಅನುಗುಣವಾಗಿ ಸಣ್ಣ ಕತ ಕಾವ್ಯದ ಸ್ವರೂಪಕ್ಕೆ ಹೆಚ್ಚು ಹೆಚ್ಚು ಸಮೀಪ ಬರತೊಡಗಿತು.

[೪]"ಈ ಕೊರತೆಯನ್ನು ಮುಂದೆ ಬಂದ ನವ್ಯ ಕಾಲದ ಕವಿಗಳು ತುಂಬಿಕೊಟ್ಟರು, ವಸ್ತು, ತಂತ್ರ, ಭಾಷೆ, ಬಂಧಗಳನ್ನು ಅತ್ಯುತ್ತಮವಾಗಿ ಬಿಗಿದುಕಟ್ಟಿದ ನವ್ಯರು, ಸಣ್ಣಕತೆಗೆ ಅದ್ಭುತವಾದ ಹೊಳಪು, ಅಮೋಘವಾದ ಸಂವಹನ, ಆಯಾಮ, ಕಲಾತ್ಮಕತೆಯನ್ನು ತಂದುಕೊಟ್ಟರು. ಆದ್ದರಿಂದಲೇ ಅವರ ಸಣ್ಣಕತೆಗಳು ನಿಜಕ್ಕೂ ಭಾವಗೀತೆಯ ಅನುಭವವನ್ನು ತನ್ಮಯತೆಯನ್ನು ನೀಡತೊಡಗಿದವು"[೪]

ನವ್ಯಕಾಲದವರು ವ್ಯಕ್ತಿಕೇಂದ್ರಿತವಾದ ಅಧ್ಯಯನವನ್ನು ಮಾಡಿದರು. ಈ ಕಾಲದ ಶ್ರೇಷ್ಠ ಸೃಜನಶೀಲ ಪ್ರತಿಭೆಗಳು ಎಂದರೆ ಪಿ. ಲಂಕೇಶ್, ಅನಂತಮೂರ್ತಿ, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲರು, ತೇಜಸ್ವಿ ಮುಂತಾದವರು ಈ ನವ್ಯ ಕಥೆ ಸಾಹಿತ್ಯದಲ್ಲಿ ಸಣ್ಣಕತೆಯನ್ನು ಉತ್ತುಂಗದ ಶಿಖರಕ್ಕೆ ಏರಿಸಿದರು. ಪಿ. ಲಂಕೇಶ್‌ರವರು ಪ್ರಮುಖವಾಗಿ ಕಾದಂಬರಿಕಾರರಾದರೂ, ಅವರನ್ನು ಎಲ್ಲಿಯೂ ಕಾದಂಬರಿಕಾರರು ಎಂದು ಗುರುತಿಸದೆ ಹೆಚ್ಚಾಗಿ ಸಣ್ಣ ಕತೆಯಲ್ಲೇ ಗುರುತಿಸುತ್ತೇವೆ. ಅನಂತ ಮೂರ್ತಿಯವರು ಒಂದು ಸಣ್ಣಕತೆಗೂ ಹಾಗೂ ಕವಿತೆಗೂ ವ್ಯತ್ಯಾಸ ಇಲ್ಲವೆಂದು ತೋರಿಸುತ್ತಾರೆ.

ಡಿ.ಆರ್. ನಾಗರಾಜು ಈ ನವ್ಯವನ್ನು ೨ ವಿಧಗಳಲ್ಲಿ ಗುರುತಿಸುತ್ತೇವೆ. ಅವುಗಳೆಂದರೆ, ೧) ಮೂಲ ನವ್ಯಸಾಹಿತ್ಯ ೨) ಪರಿವರ್ತನಶೀಲ ನವ್ಯಸಾಹಿತ್ಯ. ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು' ಎಂಬ ಸಣ್ಣ ಕತೆಯನ್ನು ಪರಿವರ್ತನ ಶೀಲ ಸಾಹಿತ್ಯದಲ್ಲಿ ಗುರುತಿಸುತ್ತೇವೆ.

---

[೩]ಡಾ. ಗಿರಡಿ ಗೋವಿಂದರಾಜ್, ಕಲ್ಪಿತ ವಾಸ್ತವ, ಸಾಹಿತ್ಯ ಪ್ರಕಾಶನ, ಪುಟ-೨೩
[೪]ಡಾ. ಎಸ್. ಪ್ರಸಾದ್‌ಸ್ವಾಮಿ, ಪಾರಂಪರೆ ವಿಕ್ಷಿಪ್ತತೆ, ಕಣ್ವ ಪ್ರಕಾಶನ, ಬೆಂಗಳೂರು. ಪುಟ-೨೩೩.

'ಹುಲಿಯೂರಿನ ಸರಹದ್ದು' ಮತ್ತು 'ಸ್ವರೂಪ' ಇವೆರಡೂ ಅನುಕರಣ ಶೀಲ ಕೃತಿಗಳಾದವು ಇಂಥ ಅನುಕರಣ ಶೀಲತೆಯಿಂದ ತಪ್ಪಸಿಕೊಳ್ಳಲಿಕ್ಕೆ ತೇಜಸ್ವಿಯವರಿಗೆ ಅಭಿವ್ಯಕ್ತಿಯಲ್ಲಿ ಅಮೂಲಗ್ರವಾದ ಬದಲಾವಣೆ ಅಗತ್ಯವಾಗಿತ್ತು. ನವ್ಯಮಾರ್ಗದ ವಿರುದ್ಧ ದಿಕ್ಕಿನಲ್ಲಿ ಅವರು ಈ ಬದಲಾವಣೆಯನ್ನು ಸಾಧಿಸಿಕೊಂಡರು 'ಅಬಚೂರಿನ ಪೋಸ್ಟಾಫೀಸು' ಇದುಕಲಾವಿದನ ಪ್ರಜ್ಞೆಯೊಳಗೆ ವಿಕಾಸವಾಗುವ ಅಥವಾ ಸಾಹಿತಿಯೇ ನಾಯಕನಾದ ಆತ್ಮನಿಷ್ಠೆಯನ್ನು ತೋರಿಸುವ ಕತೆ.

ಆದರೆ, ತೇಜಸ್ವಿಯವರು ಮುಖ್ಯವಾಗಿ ತಾಂತ್ರಿಕ ಮಟ್ಟದಲ್ಲಿ ತಮ್ಮ ಬರವಣಿಗೆಯ ಭಿನ್ನತೆಯನ್ನು ಎತ್ತಿ ತೋರಿಸುವಂತೆ ಕಾಣುತ್ತದೆ. ನವ್ಯ ಬರವಣಿಗೆಯಲ್ಲಿ ಸಾಮಾನ್ಯವಾಗಿದ್ದ ನಾಯಕ ಕೇಂದ್ರಿತ ದೃಷ್ಟಿಕೋನ ಹಾಗೂ ಪ್ರಜ್ಞಾ ಪ್ರವಾಹದ ರೀತಿಗಳನ್ನು ಬಿಟ್ಟುಕೊಟ್ಟು ಸರ್ವಸಾಕ್ಷಿತ್ವ ದೃಷ್ಟಿಕೋನವನ್ನು ಅವರು ತಮ್ಮ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ.

ಪಿ. ಲಂಕೇಶ್‌ರವರು ಕನ್ನಡ ಸಣ್ಣಕತೆಗೆ ಭಾವಗೀತೆಯ ತೀವ್ರತೆಯನ್ನು ಸೂಕ್ಷ್ಮತೆಯನ್ನು ತಂದುಕೊಟ್ಟರು. 'ಕೆರೆಯ ನೀರನು ಕೆರೆಗೆ ಚೆಲ್ಲಿ', 'ಕಲ್ಲುಕರಗುವ ಸಮಯ' ಇವುಗಳ ನಡುವೆ ಬಹಳ ವ್ಯತ್ಯಾಸವನ್ನು ಗುರುತಿಸಬಹುದು. ಇದೇ ರೀತಿಯಲ್ಲಿ ಬಿರುಕು, 'ಮುಸ್ಸಂಜೆಯ ಕಥಾ ಪ್ರಸಂಗ' ಈ ಕತೆಗಳನ್ನು ನೋಡಿದಾಗ ಒಂದಕ್ಕೊಂದು ಸಂಬಂಧವಿಲ್ಲದ ರೀತಿಯಲ್ಲಿವೆ. ಈ ಕಥೆಯನ್ನು ನೋಡಿದಾಗ ಈ ಎಲ್ಲಾ ಕಥನಗಳು ಒಬ್ಬರಿಂದಲೇ ರಚಿಸಲ್ಪಟ್ಟಿವೆ ಎಂಬ ಅನುಮಾನ ಮೂಡುತ್ತದೆ.

ಚಿತ್ತಾಲರ ಸಂದರ್ಶನದ ಕೆಲವು ಕತೆಗಳು ಮತ್ತು ನವ್ಯ ಕವಿಗಳೆಂದೆ ಪ್ರಸಿದ್ಧರಾಗಿರುವ ರಾಮಚಂದ್ರಶರ್ಮರ 'ಏಳನೆಯ ಜೀವ' ಎಂಬ ಸಂಕಲನದಲ್ಲಿ ಕೆಲವು ನವ್ಯಕತೆಗಳಿವೆ. 'ಸಂಗಮ' 'ಸೆರಗಿನ ಕೆಂಡ' ಸಂಗಮದಲ್ಲಿ ಭಿಕ್ಷುಕರ ಸಂಗವೊಂದರ ಕರುಣ ಚಿತ್ರವಿದೆ. 'ಸೆರಗಿನ ಕೆಂಡ' ದಲ್ಲಿ ಮದುವೆಯಾಗುವ ಮೊದಲು ಕಾಲುಜಾರಿದ ಮೀನಾಕ್ಷಿಯ ಪೂರ್ವಜೀವನದ ರಹಸ್ಯ, ವರ್ತಮಾನದ ಅವಸ್ಥೆ, ಭವಿಷ್ಯದ ಅಸ್ಥಿರತೆಯನ್ನು ಧ್ವನಿಗೊಳಿಸುತ್ತದೆ.

ಯು.ಆರ್. ಅನಂತಮೂರ್ತಿಯವರ 'ಎಂದೆಂದೂ ಮುಗಿಯದ ಕತೆ' ನವ್ಯಕತೆಗಳ ಇನ್ನೊಂದು ಪ್ರಾತಿನಿಧಿಕ ಸಂಗ್ರಹವಾಗಿದೆ. 'ಪ್ರಶ್ನೆ' ಸಂಕಲನದ ಕಥೆಗಳ ಮೂಲಕ ಅನಂತಮೂರ್ತಿಯವರು ಕನ್ನಡ ಸಣ್ಣಕತೆಯ ವೈಚಾರಿಕ ಮತ್ತು ಕಲಾತ್ಮಕ ಸ್ವರೂಪವನ್ನೇ ಬದಲಿಸಿದರು. ಶಾಂತಿನಾಥ ದೇಸಾಯಿಯವರ 'ಮಂಜುಗೆಡ್ಡೆ'ಯ ಕತೆಗಳು ವಸ್ತುವಿನ ದೃಷ್ಟಿಯಿಂದ ನವ್ಯವಾಗಿದೆ. ವ್ಯಕ್ತಿಗಳ ಮನಶ್ಚಿತ್ರಣವೇ ಇಲ್ಲಿಯ ವಿಷಯವಾಗಿದ್ದು, ಅದಕ್ಕೆ ಪ್ರಜಾಪ್ರವಾಹದ ಶೈಲಿಯನ್ನು ಅವರು ಆಶ್ರಯಿಸಿದ್ದಾರೆ. ಆಧುನಿಕತೆಯ ಫಲವಾಗಿಯೇ ಜೀವನದ ಮೌಲ್ಯಗಳನ್ನು ಕಳೆದುಕೊಳ್ಳುತ್ತಿರುವ ತರುಣರು, ಕಾಮದ ಅರಿವಿನಿಂದ ದಿಕ್ಕೆಟ್ಟ ತರುಣಿಯರು, ಚಿಕ್ಕಹುಡುಗರು ಹೀಗೆ ಆಂತರಿಕ ಸಮಸ್ಯೆಗಳನ್ನು ಎದುರಿಸಿದ ಪಾತ್ರವರ್ಗ ಇಲ್ಲಿದೆ. ನವ್ಯಕಾಲದ ಅಂತರ್ಮುಖಿ ಧೋರಣೆ ಮಾತ್ರ ಒಳಗೊಂಡಿತ್ತು. ಹೀಗೆ ನವ್ಯಕ್ಕಿಂತ

ಭಿನ್ನವಾದ ಬರವಣಿಗೆ ಎಪ್ಪತ್ತರ ದಶಕದ ಆರಂಭದಲ್ಲೇ ಬರತೊಡಗಿದರು. ಅದಕ್ಕೊಂದು ಚಳುವಳಿಯ ಸ್ವರೂಪ ಬಂದದ್ದು 'ಬಂಡಾಯ ಸಂಘಟನೆ' ಆರಂಭವಾದ ಮೇಲೆ ಈ ಸಂಘಟನೆಯೊಂದಿಗೆ ನವ್ಯದ ಮೇಲಿನ ಹಲ್ಲೆ ಇನ್ನು ತೀವ್ರ ತರವಾಯಿತು. ಈ ಹೊತ್ತಿಗೆ ದೇಶದ ರಾಜಕೀಯದಲ್ಲಿ ನಡೆದ ಬದಲಾವಣೆಗಳು ಹೊಸ ಶಕ್ತಿಯಾಗಿ ದಲಿತ ವರ್ಗದ ಬೆಳವಣಿಗೆಗೆ ತರುಣರಲ್ಲಿ ವಿಶೇಷವಾಗಿ ಆಸಕ್ತಿ ಮೂಡಿಸಿದ ಸಮಾಜವಾದಿ ಸಿದ್ಧಾಂತಗಳು ಹೊಸದೊಂದು ದೃಷ್ಟಿಕೋನದ ಉದಯಕ್ಕೆ ಕಾರಣವಾದವು. ಅದೇ ದಲಿತ ಬಂಡಾಯದ ಚಳುವಳಿ ಇದರ ಪ್ರಭಾವದಿಂದ ನವ್ಯಕಾಲದ ಅಂತರ್ಮುಖಿದೋರಣೆಗಳು ಮರೆಯಾಗಿ, ಸಮಾಜ ಮುಖಿ ಹಾಗೂ ಜನಮುಖಿ ದೋರಣೆಗಳು ಉದಯವಾಗತೊಡಗಿದವು. ಈ ಕಾಲದಲ್ಲಿ ಕಾಣಿಸಿಕೊಳ್ಳುವ ಕತೆಗಾರರು ಎಂದರೆ, ಬೆಸಗರ ಹಳ್ಳಿ ರಾಮಣ್ಣ, ಬರಗೂರು ರಾಮಚಂದ್ರಪ್ಪ ಕುಂ. ವೀರಭದ್ರಪ್ಪ, ಅಬ್ದುಲ್‌ರಷೀದ್, ಸುಧಾಕರ ಮುಂತಾದವರ ಕಥೆಯಲ್ಲಿನ ಬಂಡಾಯ ತಿರುವುಗಳು ಸ್ವಾಗತಾರ್ಹವಾಗಿವೆ. ನವ್ಯದ ತಲೆಮಾರಿನಿಂದ ಹೊರಳಿಬಂದ ತಲೆಮಾರಿನ ಲೇಖಕರು ದಲಿತ-ಬಂಡಾಯ ಚಳುವಳಿಯಲ್ಲಿ ಪ್ರಮುಖರಾದರು ಕನ್ನಡ ಬಂಡಾಯದ ಬೇರುಗಳು ಭಾರತೀಯ ಹಾಗೂ ರಷ್ಯನ ಕಥೆಗಾರವರೆಗೂ ಹರಡಿದೆ.

ಕುಂ.ವೀ, ಆಲನಹಳ್ಳಿ ಕೃಷ್ಣ ಇವರು ದಲಿತ ಶೋಷಿತರ ಬಡತನ, ಆರ್ಥಿಕ ಅಸಮಾನತೆ ಶಿಕ್ಷಣದ ಕೊರತೆ, ಶ್ರೀಮಂತರ ದಬ್ಬಾಳಿಕೆ, ದೇವರು ಧರ್ಮದ ಪ್ರಭಾವ ಮುಂತಾದ ವಿಷಯಗಳ ಬಗ್ಗೆ ತಮ್ಮ ಬಂಡಾಯ ಸಾಹಿತ್ಯದಲ್ಲಿ ಬೆಳಕು ಚೆಲ್ಲಿದ್ದಾರೆ. ಕುಂ.ವೀ ತಮ್ಮ ಕತೆಗಳಿಂದ ಬಂಡಾಯ ಚಳುವಳಿಯ ಮುಖ್ಯ ಕಥೆಗಾರರಾಗಿ ಗಮನ ಸೆಳೆಯುತ್ತಾರೆ.

ವೀರಭದ್ರ, ಅಮರೇಶ ನುಗಡೋಣಿ, ಚಂದ್ರಕಾಂತ ವಡ್ಡು, ಮೊಗಳೀ ಗಣೇಶ್ ಮೊದಲಾದ ಕತೆಗಾರರು ಸಣ್ಣಕತೆಗೆ ಪ್ರಾದೇಶಿಕ ಆಯಾಮವನ್ನು ದೇಸೀ ಸೊಗಡಿನ ವಿಶೇಷತೆಯನ್ನು ತಂದು ಕೊಟ್ಟವರಲ್ಲಿ ಮುಖ್ಯರು. ಸಾಹಿತ್ಯದ ಸಾಮಾಜಿಕ ಬದ್ಧತೆಯನ್ನು ಒಪ್ಪಿಕೊಂಡು ಬರೆಯುತ್ತಿರುವ ಇನ್ನೊಬ್ಬ ಕತೆಗಾರ ದೇವನೂರು ಮಹಾದೇವ, ಕನ್ನಡದಲ್ಲಿ ಮಹತ್ವದ ದಲಿತ ಲೇಖಕ ತನ್ನ ಜನಾಂಗದ ನೋವನ್ನು ಮೊದಲಸಲ ನೈಜ್ಯವಾದ ಧ್ವನಿಯಲ್ಲಿ ಪ್ರಕಟಿಸಿದವರು. ದಲಿತ ಸಾಹಿತ್ಯ ಸಂದರ್ಭದಲ್ಲಿ ಮೂಡಿಬಂದ ಈ ಅಪೂರ್ವ ಕತೆ 'ದ್ಯಾವನೂರು ಕತೆಗಳು'. ನಂಜನ ಗೂಡಿನ ದಲಿತ ವರ್ಗದ ಆಡುನುಡಿಗಟ್ಟಿನಲ್ಲಿ ಬರೆದಿರುವ ಕಥೆಗಳಾಗಿವೆ. ಶತಮಾನಗಳಿಂದ ಶೋಷಣೆಗೆ ಒಳಗಾದವರನ್ನು ಕುರಿತು ಬರೆದಿದ್ದಾರೆ. ಶೋಷಣೆಗೆ ಒಳಗಾದ ವ್ಯಕ್ತಿಗೆ ಅದರ ಅರಿವು ಇರಲಾರದು ಎಂಬುದು ಕಥೆಗಳಲ್ಲಿ ಕಾಣಿಸುತ್ತದೆ. ಅಬ್ಬರ, ಆವೇಶ ಇಲ್ಲದೆ, ಇವರ ಭಾಷೆಯ ನಡಿಗೆ ಮಾತ್ರ ಇದೆ. ನೊಂದವರ ನೋವ ನೋಯದವರೆತ್ತ ಬಲ್ಲರು, ದಟ್ಟ ದರಿದ್ರ ಬದುಕಿನ ಆಂತರ್ಯವನ್ನು ಮೊಟ್ಟಮೊದಲ ಬಾರಿಗೆ ಬಿಚ್ಚಿ ಕೊಡವಿ ಶಿಷ್ಟ ಸಮಾಜದ ಎದುರು ತಮ್ಮ ಒಡಲಾಳ ಮತ್ತು ಕುಸುಮ ಬಾಲೆ ಕಥೆಯ ಮುಖಾಂತರ ಇಟ್ಟವರು ದೇವನೂರು ಮಹಾದೇವರು.

'ಬರಗೂರು ರಾಮಚಂದ್ರಪ್ಪನವರ' 'ಕ್ಷಾಮ', 'ಅವನು ನಪುಂಸಕ'

'ಸುಂಟರಗಾಳಿಯ' ಕಥೆಗಳಲ್ಲೂ ನವ್ಯ ಮಾರ್ಗದ ಚೌಕಟ್ಟಿನಲ್ಲೇ, ಸಾಮಾಜಿಕ ಶೋಷಣೆಯ ವಿರುದ್ಧ ಪ್ರತಿಭಟನೆಯ ದನಿ ಸೇರಿಸುವ ಪ್ರಯತ್ನವಿದೆ. ಇವರಲ್ಲಿಯೂ ಕೇಂದ್ರಪಾತ್ರದ ಪ್ರಜ್ಞೆಯನ್ನೇ ಅನುಸರಿಸುವ ತಂತ್ರವಿದೆ'

[೫]"ಮಹಾದೇವ ಮತ್ತು ರಾಮಚಂದ್ರಪ್ಪನವರ ಬರವಣಿಗೆಯನ್ನು ನೋಡಿದಾಗ ನವ್ಯವಾಗಿ ಉಳಿದು ಸಮಾಜಪ್ರಜ್ಞೆಗೆ ಅಭಿವ್ಯಕ್ತಿ ಕೊಡುವುದು ಸಾಧ್ಯ ಎಂದು ಸ್ಪಷ್ಟವಾಗುತ್ತದೆ. ಮುಖ್ಯ ವಿಷಯ ನವ್ಯವಾಗಿ ಉಳಿಯಬೇಕೋ, ಉಳಿಯಬಾರದೋ ಎಂಬುದಲ್ಲ. ಸಮಾಜದ ಪ್ರಜ್ಞೆಯನ್ನು ಯಾವ ರೀತಿಯಲ್ಲಿ ಪರಿಣಾಮಕಾರಿಯಾಗಿ ಸಾಹಿತ್ಯದಲ್ಲಿ ಅಭಿವ್ಯಕ್ತಿಸಬೇಕೆಂಬುದಾಗಿದೆ."[೫]

೧೯೦೦ ರಿಂದ ಪ್ರಾರಂಭವಾದ ಸಣ್ಣಕತೆಯ ಹುಟ್ಟು, ಬೆಳವಣಿಗೆ ಬಹಳ ಆಶ್ಚರ್ಯಕರವಾದದ್ದು. ಈ ಸಣ್ಣಕಥೆಯ ವಸ್ತು, ಅದರ ಭಾಷೆ, ಬಳಸಿಕೊಂಡ ತಂತ್ರ, ಕಾಲಕಾಲಕ್ಕೆ ಅದು ಬದಲಾದ ರೀತಿ, ಹೊಸತಿರುವುಗಳನ್ನು ಪಡೆದುಕೊಳ್ಳುವ.ಈ ಸಣ್ಣಕತೆ ತಾನು ಬೆಳೆದು ಬಂದ ದಾರಿಯನ್ನು ತೋರಿಸುತ್ತದೆ. ಸ್ವಾತಂತ್ರಪೂರ್ವ ಕಾಲದಿಂದ ಈ ವರೆಗಿನ ಸಮಕಾಲೀನ ಬದುಕು ಈ ಕಥೆಗಳ ವಸ್ತುವಾಗಿದೆ. ಬಗೆಬಗೆಯ ಅಭಿವ್ಯಕ್ತಿ ಇಲ್ಲಿದೆ. ಇಂತಹ ಘಟಾನುಘಟಿಗಳ ಮುಂದೆ ಮಹಿಳಾ ಸಾಹಿತ್ಯ ಸ್ಪರ್ಧಿಸಲು ಎಲ್ಲೋ ಹಿಂದೇಟು ಹಾಕಿತ್ತು. ಎಷ್ಟೇ ಅತ್ಯುತ್ತಮವಾದ ಸಾಹಿತ್ಯವನ್ನು ನೀಡಿದೆವು ಎಂದರೂ ಪುರುಷ ಸಾಹಿತ್ಯದ ಮುಂದೆ ಸಪ್ಪೆ ಎನ್ನಿಸಲು ಶುರುವಾಯಿತು.

ಪರಾಮರ್ಶನ ಗ್ರಂಥಗಳು :

ಡಾ. ಗಿರಡ್ಡಿ ಗೋವಿಂದರಾಜು : ಕಲ್ಪಿತ ವಾಸ್ತವ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ. ಪುಟ–೧೭, ೩೧, ೨೯೨, ೨೯೩, ೨೯೬, ೨೯೭, ೧೨, ೨೩
ಡಾ. ಎಸ್. ಪ್ರಸಾದ್‌ಸ್ವಾಮಿ : ಪರಂಪರೆ ವಿಕ್ಷಿಪ್ತತೆ, ಕಣ್ವ ಪ್ರಕಾಶನ, ಬೆಂಗಳೂರು – ಪುಟ ೨೩೩.

[೫]ಡಾ.ಗಿರಡಿ ಗೋವಿಂದರಾಜರು : ಕಲ್ಪಿತ ವಾಸ್ತವ : ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ ಪುಟ : ೨೯೬, ೨೯೭

## ಅಧ್ಯಾಯ – ೨.೨ ಆಧುನಿಕ ಮಹಿಳಾ ಸಣ್ಣ ಕಥಾ ಸಾಹಿತ್ಯ :

೨೦ನೇ ಶತಮಾನದ ಆರಂಭಿಕ ಕಾಲಘಟ್ಟದಲ್ಲಿ ಮಹಿಳೆಯರು ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ, ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಎಷ್ಟರ ಮಟ್ಟಿಗೆ ಪಾಲ್ಗೊಂಡಿದ್ದಾರೆ, ಹೊಸತನಗಳಿಗೆ ಹೇಗೆ ಸ್ಪಂದಿಸಿದ್ದಾರೆ, ವೈಚಾರಿಕ ಚಿಂತನೆಗಳನ್ನು ಹೇಗೆ ಪ್ರತಿಬಿಂಬಿಸಿದ್ದಾರೆ, ಎನ್ನುವುದನ್ನು ತಿಳಿಯಬೇಕಾದರೆ ಮಹಿಳೆಯರಿಗೆ ಎದುರಾದ ಸಮಸ್ಯೆಗಳನ್ನು ಅರಿಯಬೇಕು, ಅವರ ಸಾಹಿತ್ಯವನ್ನು ಅಧ್ಯಯನ ಮಾಡಬೇಕು.

ಭಾರತೀಯ ಇತಿಹಾಸದಲ್ಲಿ ರಾಜಕೀಯ ಸಾಂಸ್ಕೃತಿಕ ಹಾಗೂ ಸಾಮಾಜಿಕ ಘಟನೆಗಳು ಇಲ್ಲಿನ ಮಹಿಳೆಯರ ಬದುಕನ್ನು ನೇರವಾಗಿ ಮತ್ತು ಪರೋಕ್ಷವಾಗಿ ಪ್ರಭಾವಿತಗೊಳಿಸುತ್ತಲೇ ಇವೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲೇ ಮಹಿಳೆಯರಿಗೆ ಪರಿಪೂರ್ಣ ಸ್ವಾತಂತ್ರ್ಯ ದೊರೆತಿಲ್ಲ. ಆದರೆ ಭಾರತದಲ್ಲಿ ವಾಸಿಸುವ ಎಲ್ಲ ಸ್ತ್ರೀಯರಿಗೂ ಸ್ವಾತಂತ್ರ್ಯ ಒಂದೇ ಸಮನಾಗಿ ದೊರೆತಿಲ್ಲ ಎಂದಾಗ, ಇವರ ಮುನ್ನಡೆಯಲ್ಲಿ ಏಕರೂಪತೆಯನ್ನು, ಸಮತೋಲನವನ್ನು ಕಾಣುವುದು ಅಸಾಧ್ಯ.

ತಮ್ಮ ಸುತ್ತಮುತ್ತ ಇರುವ ಸಂಪ್ರದಾಯದ ಕಟ್ಟಳೆಯನ್ನು ಒಮ್ಮೆಲೆ ಮುರಿದು ಹೊರಬರಲು ಸ್ತ್ರೀಗೆ ಸಾಧ್ಯವಾಗದಿದ್ದರೂ, ಸ್ತ್ರೀ ವಿಮೋಚನೆಗಾಗಿ ನಡೆಸಲಾದ ಪ್ರಥಮ ಪ್ರಯತ್ನ ಎಂದು ಹೇಳಬಹುದು. ಸ್ತ್ರೀಯರನ್ನು ಸಾಂಸಾರಿಕ ಬಂದನದಲ್ಲೇ ಬಿಗಿದು ಅವರನ್ನು ಸಾಮಾಜಿಕ ಪರಿಸರದಿಂದ ದೂರವೇ ಉಳಿಸಿದ್ದಲ್ಲಿ ಸಮಾಜದ ಒಂದು ಅಂಗವೇ ಊನಗೊಂಡಂತಾಗುತ್ತದೆ ಎಂಬ ಸತ್ಯವನ್ನು ಮನಗೊಂಡು ಅನೇಕರು, ಮಹಿಳೆಯರಿಗೆ ಸಾರ್ವಜನಿಕ ಜೀವನದಲ್ಲಿ ಪಾಲ್ಗೊಳ್ಳುವ ಅವಕಾಶವನ್ನು ಕೊಟ್ಟರು.

ಇಂಥ ಸವಲತ್ತಗಳು ಕರ್ನಾಟಕದ ಮಹಿಳೆಯರಿಗೂ ದೊರೆಯಿತು. ಸಾಮಾಜಿಕ ಚಟುವಟಿಕೆಗಳಲ್ಲಿ ಪುರುಷರಿಗೆ ಸರಿಸಾಟಿಯಾಗಿ ಕಾರ್ಯನಿರ್ವಹಿಸಲು ಅವರಿಗೂ ಅವಕಾಶ ನೀಡಲಾಯಿತು. ಈ ಅವಕಾಶವನ್ನು ಸರಿಯಾಗಿ ಬಳಸಿಕೊಂಡ ಮಹಿಳೆಯರು ಬರಹದಲ್ಲಿ ತೊಡಗಿಸಿಕೊಂಡರು. ಬರಹಕ್ಕೆ ಮೊದಲು ಮೌಖಿಕ ಪಾರಂಪರೆಯಲ್ಲಿ ಸ್ತ್ರೀಯರೇ ಮೊದಲಿಗರು. [೧]"ಅಕ್ಷರಸ್ಥೇಯರೆಲ್ಲರೂ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಹಂಬಲಿಸ ಬೇಕೆಂಬುದೇನೂ ಇಲ್ಲ. ಸ್ವಾತಂತ್ರ್ಯಪೂರ್ವ ಮಹಿಳೆಯರಲ್ಲಿ ಕೇವಲ ನಾಲ್ಕಕ್ಷರ ಕಲಿತ ಮಹಿಳೆಯರೇ ಹೆಚ್ಚು, ಆದರೆ ಆಧುನಿಕ ದೃಷ್ಟಕೋನದಿಂದ ವಿದ್ಯಾವಂತೆಯರು ಎಂದು ಎನ್ನಿಸಿಕೊಳ್ಳದಿದ್ದರೂ ತಮ್ಮ ಸ್ವಂತ ಬದುಕನ್ನು ಸುತ್ತ ಮುತ್ತಲಿನ ಘಟನೆಗಳನ್ನು ಆಸಕ್ತಿಯಿಂದ ಗಮನಿಸಿ, ಅವನ್ನು ಜೀರ್ಣಿಸಿಕೊಂಡು ಅವುಗಳ ಬಗ್ಗೆ ತಮ್ಮದೇ ಸಿದ್ಧಾಂತಗಳನ್ನು ಸ್ಥಾಪಿಸಿ ತಮ್ಮ ಸಂವೇದನೆಗಳಿಗೆ ಬರವಣಿಗೆಯನ್ನು ಆಶ್ರಯಿಸಿದ್ದಂತಹ ಮಹಿಳೆಯರು ಕಡಿಮೆ ಪ್ರಮಾಣದಲ್ಲಿ ಸ್ವಾತಂತ್ರ್ಯಪೂರ್ವ ಕರ್ನಾಟಕದಲ್ಲಿದ್ದರು"[೧].

ಈ ಮಹಿಳೆಯರು ಬರವಣಿಗೆಯನ್ನು ಪ್ರಾರಂಭಿಸಿದ್ದ ಕಾಲದಲ್ಲಿ, ದೇಶದ ಎಲ್ಲೆಡೆಗಳಲ್ಲಿ ಸ್ವಾತಂತ್ರ್ಯಾಭಿಮಾನ ಹಾಗೂ ಪರಕೀಯರ ದಬ್ಬಾಳಿಕೆಯಿಂದ ವಿಮೋಚನೆ

---

[೧]ಬಿ.ಎಸ್. ವೆಂಕಟಲಕ್ಷ್ಮಿ, ಕನ್ನಡ ಲೇಖಕಿಯರ ನೆಲೆ ಬೆಲೆ, ಶ್ಯಾಂ ಪ್ರಕಾಶನ, ಪುಟ : ೪೯–೫೦

ಗೊಳ್ಳಬೇಕೆಂಬ ಹಂಬಲ ದಟ್ಟವಾಗಿತ್ತು. ಸ್ವಾತಂತ್ರ್ಯಕ್ಕೆ ಹೋರಾಡಿದ ಮಹಾತ್ಮಾಗಾಂಧೀ ಹಾಗೂ ಇತರ ದೇಶದ ನಾಯಕರು ಜನರಿಗೆ ನೀಡಿದ ಕರೆಯಿಂದಾಗಿ ಪ್ರಚೋದನೆಗೊಂಡ, ಪ್ರೇರಣೆಗೊಂಡ ಮಹಿಳೆಯರು ತಮ್ಮ ಶಕ್ತಿಗೆ ಅನುಗುಣವಾಗಿ ದೇಶದ ಒಳಿತಿಗಾಗಿ ಸಾಹಿತ್ಯದ ಕೃಷಿಯನ್ನು ಆರಂಭಿಸಿದರು. ಮಹಿಳೆಯರು ಬರಹದಲ್ಲಿ ತೊಡಗಿದರು. ಬರವಣಿಗೆಯನ್ನು ರೂಢಿಸಿಕೊಂಡ [1]"ಮಹಿಳೆಯರು ಪ್ರಾರಂಭದಲ್ಲಿ ಕಾದಂಬರಿ, ಕಾವ್ಯ, ನಾಟಕ, ಸಾಹಿತ್ಯ ಎಲ್ಲ ಪ್ರಕಾರಗಳಲ್ಲೂ ಕೃತಿ ರಚನೆ ಮಾಡಿದರು. ಕ್ರಮೇಣ ಅವರಿಗೆ ಹೆಚ್ಚು ಒಲಿದಿದ್ದು ಕಥಾರಚನೆ"[1]. ಕಥೆ ಎಂದರೆ ಮಹಿಳೆಯರಿಗೆ ಎಲ್ಲಿಲ್ಲದ ವ್ಯಾಮೋಹ ಎಂದೇ ಹೇಳಬಹುದು. ಮೊದಲು ಈ ಸಣ್ಣಕತೆಗಳು ಪತ್ರಿಕೆಗಳಲ್ಲಿ ಪ್ರಕಟವಾಯಿತು. ಕೆಲವು ಪತ್ರಿಕೆಗಳು ಈ ಸಣ್ಣ ಕತೆಗಳಿಗೆ ಕಥಾ ಸ್ಪರ್ಧೆಯನ್ನು ಏರ್ಪಡಿಸಿದರು. ಈ ಸ್ಪರ್ಧೆಯಲ್ಲಿ ನಂಜನಗೂಡಿನ ತಿರುಮಲಾಂಭ, (೧೮೮೭–೧೯೮೨), ಆರ್.ಕಲ್ಯಾಣಮ್ಮ (೧೮೯೪–೧೯೬೫), ಶ್ಯಾಮಲಾ ಬೆಳಗಾಂವಕರ (೧೯೧೦–೧೯೪೩) ಗಿರಿಬಾಲೆ (೧೯೧೩–೧೯೯೪), ಸೀತಾದೇವಿ ಪಡುಕೋಣೆ (೧೯೦೩–೧೯೬೯) ಕೊಡಗಿನ ಗೌರಮ್ಮ(೧೯೧೨–೧೯೩೯), ಬೆಳಗೆರೆ ಜಾನಕಮ್ಮ (೧೯೧೨–೧೯೪೮) ಜಯದೇವಿ ತಾಯಿ ಲಿಗಾಡೆ (೧೯೧೨–೧೯೮೬) ಇತ್ಯಾದಿ ಹೀಗೆ, ಮಹಿಳೆಯರಿಗೂ ಕತೆಗೂ ಅವಿನಾಭಾವ ಸಂಬಂಧವಿರುವುದನ್ನು ನೋಡುತ್ತೇವೆ.

ಸಾಹಿತ್ಯದ ನಿರ್ಮಾಣ ವೈಯಕ್ತಿಕವೂ ಹೌದು, ಸಾಮುದಾಯಿಕವೂ ಹೌದು. ಲೇಖಕ ತನಗೆ ಹೇಗೆ ಗೊತ್ತಿದೆಯೋ ಹಾಗೆ ಒಂದು ಸಾಹಿತ್ಯವನ್ನು ರಚಿಸಿದರೆ ಓದುಗ ಅದನ್ನು ಭಿನ್ನರೀತಿಯ ನೆಲೆಯಲ್ಲಿ ಆಲೋಚಿಸಿರುತ್ತಾನೆ. ಹೀಗೆ ಮಹಿಳೆಯರು ತಾವು ಕಂಡ ಸಮಾಜವನ್ನು ತಮ್ಮ ಬರವಣಿಗೆಯ ಮುಖಾಂತರ ತೋರಿಸುತ್ತಾರೆ.

ಆಧುನಿಕ ಕನ್ನಡದ ಮೊದಲ ಬರಹಗಾರ್ತಿ ತಿರುಮಲಾಂಬಾ ಅವರು ಪುರಾಣದ ಏಳು ಜನ ತ್ಯಾಗಿಗಳ ವಿವರಗಳನ್ನು ಆಧರಿಸಿ ಏಳು ಕತೆಗಳನ್ನು ರಚಿಸಿದ್ದಾರೆ. ಅವು ಮೊದಲು ಸನ್ಮಾರ್ಗದರ್ಶಿಯಲ್ಲಿ ಪ್ರಕಟಗೊಂಡಿವೆ.

"ನಾನು ವಿದ್ಯಾಗಂಧವನ್ನೇ ತಿಳಿಯದ ಅಲ್ಪಮತಿಯಾದ ಸಾಮಾನ್ಯಸ್ತ್ರೀ. ನವನಾಗರಿಕತೆಯ ಸುಳಿವಾಗಲಿ, ತಿಳಿವಳಿಕೆಯ ತಿರುಳಾಗಲಿ, ತಿಳಿಯದ ಬಾಲಕಿ, ಆದರೂ ನಮ್ಮ ಸೋದರಿ ವರ್ಗಕ್ಕೆ ನನ್ನ ಕೈಯಲ್ಲಾಗುವ ಸೇವೆಯನ್ನು ಮಾಡಬೇಕೆಂಬ ಅತ್ಯುತ್ಕಟೇಚ್ಛೆಯು ನನ್ನನ್ನು ಬಿಡಲೊಲ್ಲದು". ತಿರುಮಲಾಂಭನವರೇ ಹೇಳಿರುವಂತಹ ಹೇಳಿಕೆ.

ಕಲ್ಯಾಣಮ್ಮನವರ ಮುಖ್ಯ ಕಾಳಜಿ ಸ್ತ್ರೀಪರವಾದುದು ಹಾಗೂ ಸ್ತ್ರೀಪರತೆಯ ಕಾಳಜಿಯಿಂದಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಳಿಂದ ಸ್ತ್ರೀ ಸಮಸ್ಯೆಯನ್ನು ಎತ್ತಿ ತೋರ್ಪಡಿಸುವುದೇ ಅವರ ಕತೆಗಳ ಮುಖ್ಯ ಉದ್ದೇಶ. ಅದರಲ್ಲೂ ಗಾಂಧೀತತ್ವದ ಪ್ರಭಾವವನ್ನು ಕಲ್ಯಾಣಮ್ಮನವರಲ್ಲಿ ಕಾಣುತ್ತೇವೆ 'ಮುರಿದ ರೆಂಬೆ', 'ದೇವನೆಲ್ಲಿ', 'ನನ್ನ ಧನವನ್ನು ನನಗೆ ತಾ', 'ಒಲ್ಲದ ಹೆಂಡತಿ' 'ಅಂಜುಬುರುಕಿ', ದೈವೇಚ್ಛೆ' ಕತೆಗಳಲ್ಲಿ ಮೊದಲ ಮೂರು ಕತೆಗಳ ವಿನ್ಯಾಸ ಭಿನ್ನವಾಗಿದ್ದರೂ ಕತೆಗಾರ್ತಿಯ ಮುಖ್ಯ ಕಾಳಜಿ ವಿಧವಾ

[1] ಡಾ. ಗೀತಪ್ರಸಾದ್, ಅಸ್ಮಿತೆ, ಕಣ್ವ ಪಬ್ಲಿಕೇಷನ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು – ಪುಟ–೪೦.

ಸಮಸ್ಯೆಯ ಕಡೆಗಿರುವುದು ಗಮನಾರ್ಹ. ಅದರಲ್ಲೂ, ಮುರಿದ ರೆಂಬೆ ಕತೆಯಲ್ಲಿ ಬಾಲವೈಧವ್ಯದ ಇನ್ನೊಂದು ಮುಖವನ್ನು ಬಿಂಬಿಸಿರುವುದನ್ನು ಕಾಣಬಹುದು. ಈ ಕತೆಯ ನಾಯಕಿ ಮೀನಾಕ್ಷಿ–ಬಾಲವಿಧವೆ. ಗಂಡ ಸತ್ತನಂತರ ತವರಿನಿಂದ ಕಡೆಗಣಿಸಲ್ಪಟ್ಟು ತನ್ನ ಗಂಡನ ಅಕ್ಕ ವೆಂಕುವಿನ ಮನೆಯಲ್ಲಿ ಆಶ್ರಯ ಪಡೆಯುತ್ತಾಳೆ. ವೆಂಕು ಮೀನಾಕ್ಷಿಗೆ ಪ್ರೀತಿ ವಿಶ್ವಾಸದಿಂದಲೇ ಆಶ್ರಯ ನೀಡಿದಂತೆನಿಸಿದರೂ, ವೆಂಕುವಿನ ಮನೆಯ ಸದಸ್ಯರು ಒಂದಿಲ್ಲೊಂದು ರೋಗರುಜಿನಗಳಿಂದ ನರಳುತ್ತಿರುವವರು. ಅವರ ಆರೈಕೆ ಮಾಡಿದ್ದಲ್ಲದೇ, ತನ್ನ ಆಭರಣಗಳನ್ನೆಲ್ಲ ಮಾರಿ ಅವರ ಸೇವೆ ಮಾಡುತ್ತಾಳೆ ಮೀನಾಕ್ಷಿ. ಆದರೆ ವೆಂಕುವಿನ ಮಗಳು ಶಾರದೆ, ಮೀನಾಕ್ಷಿಯನ್ನು ನಿಕೃಷ್ಟವಾಗಿ ಕಾಣುತ್ತಾಳೆ. ಬೇಸತ್ತ ಮೀನಾಕ್ಷಿ ಏನೋ ನೆವ ಹೇಳಿ ಶಾರದಾಳಿಂದ ದೂರಾಗುತ್ತಾಳೆ. ಆದರೆ ಶಾರದೆ ಪನಃ ಗರ್ಭಿಣಿಯಾದಾಗ ಮನೆಕೆಲಸದಾಕೆಯಾಗಿ ಬಂದ ಮೀನಾಕ್ಷಿ ಅಂಟಿಯೂ ಅಂಟದಹಾಗೆ ತಮ್ಮಿಬ್ಬರ ಸಂಬಂಧ ಎಂದೂ ಬೆಸೆಯುವುದಕ್ಕೆ ಸಾಧ್ಯವಿಲ್ಲ ಎಂದು 'ಮುರಿದ ರೆಂಬೆ' ಯನ್ನು ಮತ್ತೆ ಹೇಗೆ ಅಂಟಿಸೋದು? ಹಾಗೆ ನಮ್ಮ ಸಂಬಂಧ ಎಂದು ಮೀನಾಕ್ಷಿ ಸೀಮಿತಗೊಳಿಸುತ್ತಾಳೆ.

'ಸರಸ್ವತಿ' ಕತೆಯಲ್ಲಿ ಸರಸ್ವತಿ ಮತ್ತು ವಿಶ್ವನಾಥ ದಂಪತಿಗಳು ವಕೀಲಿ ವೃತ್ತಿಯನ್ನು ಬಿಟ್ಟು ಚರಕದಲ್ಲಿ ನೂಲುನೇಯುವ ಕಾಯಕದಲ್ಲಿ ನಿರತರಾಗುತ್ತಾರೆ. ದಂಪತಿಗಳು ಬಹಳ ಅನ್ಯೋನ್ಯವಾಗಿ ಬಾಳುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಪೋಲಿಸ್ ಇನ್ಸ್‌ಪೆಕ್ಟರ್ ವಿಶ್ವನಾಥ ಹೆಂಡದಂಗಡಿಯಲ್ಲಿ ಗಲಾಟೆಯಾದ ಜಾಗದಲ್ಲಿ ಇರುವುದು ನಿಜವೇ ಎಂದು ಕೇಳಿದಾಗ, ವಿಶ್ವನಾಥ ನಿಜವನ್ನೇ ಹೇಳಿ ಪೋಲಿಸರ ಜೊತೆ ಹೊರಡುತ್ತಾನೆ. ಹೊರುಡುವಾಗ ಸರಸ್ವತಿಗೆ ಸ್ವದೇಶಿ ವ್ರತ ದೀಕ್ಷೆ ತೆಗೆದುಕೊಳ್ಳಲು ತಿಳಿಸುತ್ತಾನೆ. ಸರಸ್ವತಿ ಮತ್ತು ಆಕೆಯ ಸ್ನೇಹಿತೆಯರು ಮಾತೃ ಸೇವಾ ದೀಕ್ಷೆ ಪಡೆದು ಚರಕದಲ್ಲಿ ನೂಲು ತೆಗೆಯುತ್ತಾರೆ. ಸರಸ್ವತಿಯ ಮುಖಂಡತ್ವದಲ್ಲಿ ಚರಕ ಸಂಘ, ಖಾದೀ ಭಂಡಾರಗಳು ಸ್ಥಾಪಿತವಾಗುತ್ತವೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲ್ಗೊಳ್ಳುವ ಭಾರತೀಯ ಸ್ತ್ರೀ ಪುರುಷ ಪಾತ್ರಗಳಿಗೆ ಈ ಕತೆಯ ದಂಪತಿಗಳ ವ್ಯಕ್ತಿತ್ವ ಮಾದರಿಯಾಗುತ್ತದೆ.

'ಕುಂಟಕರು' ಕತೆಯಲ್ಲಿ ಮಗನ ಕಾಲು ಕುಂಟಾಗಿದ್ದರೆ ಆತನನ್ನು ಮನೆಯಿಂದ ಹೊರದೂಡಲಾಗದೋ ಹಾಗೆ ಕುಂಟಾದ ಕಾಲಿನ ಕರುವನ್ನು ಮಾರಬಾರದು ಎಂದು ತಾಯಿ ಮಗುವನ್ನು ದೂರಮಾಡಿದ ಪಾಪವೇ ಇಲ್ಲಿ ಕಾಣಿಸುತ್ತದೆ. ಹೀಗೆ ಮಾನಸಿಕವಾಗಿ ತೊಳಲಾಡುವ ವ್ಯಕ್ತಿ ಚಿತ್ರಣವನ್ನು ಶರ್ಮನ ಪಾತ್ರದ ಮೂಲಕ ಕಟ್ಟಿಕೊಟ್ಟಿದ್ದಾರೆ ಕಲ್ಯಾಣಮ್ಮನವರು.

[೩]"ಶ್ಯಾಮಲಾ ಬೆಳಗಾಂವಕರ (೧೯೧೧–೧೯೪೭) ಸುಭದ್ರಾ ಎಂಬ ಹೆಸರಿನವರಾದ ಈ ಕತೆಗಾರ್ತಿ ರಾಮಚಂದ್ರರಾಯರನ್ನು ವಿವಾಹವಾದ ಮೇಲೆ ಬೆಳಗಾವಿ ಶ್ಯಾಮಲಾದೇವಿ ಎಂಬ ಹೆಸರುಗಳಿಂದ ಕತೆಗಳನ್ನು ಬರೆಯುತ್ತಾರೆ. ಇವರ ಕಥಾ ಸಂಕಲನ 'ಹೂಬಿಸಿಲು', 'ಹೊಂಬಿಸಿಲು', ಕೆಲವು ಬಿಡಿ ಕತೆಗಳು ಉಂಟು"[೩]. ಇವರ 'ನೀಲೆಯ ಸಂಸಾರ' ಕತೆಯನ್ನು ನೋಡಿದಾಗ ನೀಲೆಯನ್ನು ಅವರ ತಂದೆ ಪೇಟೆಯಲ್ಲಿ ಓದಲು ಬಿಡುತ್ತಾರೆ. ಅಲ್ಲಿ ನೀಲಾ ತನ್ನ

[೩]ಡಾ. ಗೀತಪ್ರಸಾಧ್, ಆಧುನಿಕ ಮಹಿಳಾ ಅಭಿವ್ಯಕ್ತಿ, ದಾತ್ರಿ ಪುಸ್ತಕ, ಬೆಂಗಳೂರು– ಪುಟ : ೧೧೫

ಅತ್ತೆಯ ಮಗ ಶಂಕರನನ್ನು ಪ್ರೀತಿಸುತ್ತಾಳೆ. ಆಕೆಯನ್ನು ತಮ್ಮ ಮಗನಿಗೆ (ಶಂಕರನಿಗೆ) ತಂದುಕೊಳ್ಳಲು ಅವಳ ಅತ್ತೆ-ಮಾವಂದಿರು, ಮದುವೆಯಾಗಲು ಶಂಕರನು ತುಂಬು ಪ್ರೀತಿಯಿಂದ ಒಪ್ಪುತ್ತಾರೆ. ಅಲ್ಲದೆ ನೀಲಾ ತನ್ನ ಅತ್ತೆ-ಮಾವನ ಜೊತೆ ಸಿನಿಮಾಕ್ಕೆ ಹೋಗಿದ್ದು, ಅತ್ತೆ ಮಾವನಿಗೆ ಸರಿಸಮಾನವಾಗಿ ಕುಳಿತ್ತಿದ್ದು, ಇವುಗಳೆಲ್ಲವೂ ನೀಲಳ ತಂದೆ ಮನೆಯ ಮರ್ಯಾದೆಯನ್ನು ಮೂರು ಕಾಸಿಗೆ ಹರಾಜು ಹಾಕುವ ಕೆಲಸ ಎಂದು ಬಗೆದು, ನೀಲಳನ್ನು ಪೇಟೆಗೆ ಓದಲು ಕಳುಹಿಸಿದ್ದೇ ತಪ್ಪಾಯಿತು ಎಂದು ಆಕ್ಷೇಪಿಸಿ ನೀಲಾಳ ತಂದೆಯೇ ಇಷ್ಟಪಟ್ಟ ಒಬ್ಬ ಕಡ್ಡಿ ಪುಡಿ ಕೆಂಚನೊಡನೆ ನೀಲೆಯ ಮದುವೆಯನ್ನು ಮಾಡುತ್ತಾನೆ. ಮಗಳ ಆಧುನಿಕ ನಡವಳಿಕೆಯನ್ನು ವಿರೋಧಿಸಿ ಸಂಪ್ರ ದಾಯಸ್ಥ ತಂದೆಯ ಮನೋಭಾವಕ್ಕೆ ನೀಲಾ ಬಲಿಯಾಗುತ್ತಾಳೆ.

ಹೀಗೆ ಇವರ ಕತೆಯಲ್ಲಿ ವಿವಾಹ ಪೂರ್ವ ಮತ್ತು ವಿವಾಹೇತರ ಸಂಬಂಧದಲ್ಲಿ ಸಿಲುಕಿ ನಲುಗುವ ಸ್ತ್ರೀ ಪುರುಷರನ್ನು ನಾವು ಈ ಪಾತ್ರಗಳ ಮುಖಾಂತರ ನೋಡಬಹುದು. ಹೀಗೆ ಶ್ಯಾಮಲಾ ಚಿತ್ರಿಸಿರುವ ಸ್ತ್ರೀ ಪುರುಷರುಗಳು ಎಲ್ಲ ಪಾತ್ರಗಳು ಪಲಾಯನವಾದಿಗಳು ಅಲ್ಲ. ತಮ್ಮದೇ ತಪ್ಪಿದ್ದರೂ ದುರಂತವನ್ನು ಹೊಂದುವುದಿಲ್ಲ ಸಂದರ್ಭ ಬಂದರೆ ವ್ಯವಸ್ಥೆಯನ್ನು ಬುಡಮೇಲು ಮಾಡುವಂತವರು, ಅಷ್ಟೇ ಅಲ್ಲದೆ ದುಡಿಮೆಯಿಂದಲೇ ಗಟ್ಟಿ ವ್ಯಕ್ತಿತ್ವವನ್ನು ಹಾಗೂ ಆ ವ್ಯಕ್ತಿತ್ವಕೊಂದು ಅರ್ಥ ತಂದುಕೊಂಡಂತಹ ಮಹಿಳಾ ಪಾತ್ರಗಳನ್ನು ನೀಡುತ್ತಾರೆ.

ಇನ್ನು ತಮ್ಮ 'ಚಂಡ ಶಾಸನ' ಪದ್ಯದ ಸ್ತ್ರೀವಾದಿ ನಿಲುವುಗಳಿಂದಲೇ ಗಮನ ಸೆಳೆದವರು ಬೆಳಗೆರೆ ಜಾನಕಮ್ಮನವರು.

ಸರಸ್ವತಿ ರಾಜವಾಡೆ (ಗಿರಿಬಾಲೆ) :

[೧]"ಗಿರಿಬಾಲೆಯವರ ಕತೆಗಳು ವಿವಾಹದ ನಡವಳಿಕೆಗಳೂ ಪಿತೃ ಸಂಸ್ಕೃತಿ ನಿರ್ಧರಿಸುವ ನಿಯಮಗಳ ಜೊತೆ, ವರದಕ್ಷಿಣೆ, ಶ್ರೀಮಂತಿಕೆಯ ಅಹಂಕಾರ, ಮೊದಲಾದ ಕ್ರೌರ್ಯಗಳು ಅನಾವರಣಗೊಂಡು ಬಡವರ ಪ್ರತಿರೋಧ, ಪ್ರತೀಕಾರದೊಂದಿಗೆ ಕೊನೆಗೊಳ್ಳುವ ಚಿತ್ರಣವಿದೆ"[೧] ಉದಾಃ ಪ್ರತೀಕಾರ ಉಗ್ರ ಬಂಡಾಯ ನೆಲೆಯಿದ್ದು, ಇವರ ಕತೆಗಳಲ್ಲಿ ಸಂಗಾತಿಯ ಆಯ್ಕೆಯ ಸ್ವಾತಂತ್ರ್ಯವಿಲ್ಲದ ಸಂದರ್ಭದಲ್ಲಿ ಗಂಡು ಹೆಣ್ಣಿಗೆ ವಿವಾಹ ಬಂಧನದ ಅಗತ್ಯವಾದರೂ ಏನಿದೇ? ಎಂದು ಪ್ರತಿಪಾದಿಸಿದ್ದಾರೆ.

ಬಡವರ ಕಣ್ಣೀರಿನ ಇಂತಹ ಪ್ರತೀಕಾರ ಶಕ್ತಿಯೇ ಎಂಬ ಉದ್ಧಾರದೊಂದಿಗೆ ಕತೆ ಮುಗಿಯುತ್ತದೆ ಬಡವರಿಗೆ ಅನ್ಯಾಯ ಮಾಡಿದವರಿಗೆ ಆ ಭಗವಂತನೇ ಶಿಕ್ಷಿಸುತ್ತಾನೆ. ಇದು ಸಹಾ ಒಂದು ರೀತಿಯ ಪ್ರತೀಕಾರದ ಶೋಷಣೆಗೆ ಯಾರು ಗುರಿಯಾಗುತ್ತಾರೋ ಅವರೇ ಬಂಡಾಯ ಹೇಳ ಬೇಕೆಂದೇನಿಲ್ಲ. ಹೀಗಾಗಿ ಸುಧಾರಣವಾದೀ ಸಮಾಜದ ಆಶಯವನ್ನು ಕತೆಗಾರ್ತಿ ಹೇಳುತ್ತಾರೆ.

---

[೧]ಡಾ. ಗೀತಪ್ರಸಾಧ್, ಅಸ್ಮಿತೆ, ಕಣ್ವ ಪಬ್ಲಿಕೇಷನ್ ಪ್ರೈವೇಟ್ ಲಿ. ಬೆಂಗಳೂರು – ಪುಟ : ೪೩

ಬದುಕನ್ನು ಕಲಾತ್ಮಕ ದೃಷ್ಟಿಯಿಂದ ನೋಡುವಲ್ಲಿ ಇವರು ಸಾಧಿಸಿರುವ ಯಶಸ್ಸು ಹೆಮ್ಮೆ ತರಿಸುವಂತಹದು. ಇವರುಗಳ ಸಾಲಿನಲ್ಲೇ ಬರುವ ಕೊಡಗಿನ ಗೌರಮ್ಮನವರು ಸಹಾ ಆಧುನಿಕ ಮಹಿಳಾ ಸಣ್ಣಕಥೆಯಲ್ಲಿ ಕಾಣಿಸುತ್ತಾರೆ.

ಹೀಗೆ ಆಧುನಿಕ ಮಹಿಳಾ ಸಣ್ಣಕಥೆಯಲ್ಲಿ ಇನ್ನು ಹಲವಾರು ಸ್ತ್ರೀಯರು ಕಾಣಿಸಿಕೊಳ್ಳುತ್ತಾರೆ. ಉದಾ: ವಾಣಿ, ಎಂ.ಕೆ. ಇಂದಿರಾ, ಅನುಪಮಾನಿರಂಜನ್ ರಾಜಲಕ್ಷ್ಮಿ ಎನ್. ರಾವ್. ವೀಣಾಶಾಂತೇಶ್ವರ ವೈದೇಹಿ ಈಚನೂರು ಜಯಲಕ್ಷ್ಮಿ ಎಚ್.ಎಸ್. ಪಾರ್ವತಿ, ನೀಳಾದೇವಿ, ಪ್ರೇಮಾಭಟ್, ಎಂ.ಕೆ. ಜಯಲಕ್ಷ್ಮಿ, ಗೀತಾಕುಲಕರ್ಣಿ, ಕಮಲಾ ಹಂಪನ, ಟಿ. ಸುನಂದಮ್ಮ ಶಾಂತಾದೇವಿ ಮಾಳವಾಡ, ಪ್ರಮೀಳ ದೇಶಪಾಂಡೆ, ಸಾರಾ ಅಬೂಬಕ್ಕರ್ ಎಚ್.ಎಸ್. ಶ್ರೀಮತಿ ಇತ್ಯಾದಿ ಮಹಿಳಾ ಬರಹಗಾರರನ್ನು ನಾವು ಸಾಹಿತ್ಯ ಕ್ಷೇತ್ರದಲ್ಲಿ ಕಾಣುತ್ತೇವೆ, ಇವರ ಸೇವೆ ಅಪಾರ.

ತ್ರಿವೇಣಿಯವರು ಸ್ತ್ರೀಪಾತ್ರಗಳನ್ನು ಹೆಚ್ಚಾಗಿ ಸೃಷ್ಟಿಸಿ, ಪುರುಷ ದ್ವೇಷಿ ಎಂಬುದನ್ನು ತಮ್ಮ ಬರಹದಲ್ಲಿ ಬಿಂಬಿಸಿದ್ದಾರೆ. ಮಧ್ಯಮ ವರ್ಗದ ಸ್ತ್ರೀಯರಿಗೆ ಸಾಂಸಾರಿಕ ಜೀವನದಲ್ಲಿ ಗಟ್ಟಿ ಧ್ವನಿಯನ್ನು ತುಂಬಿಸಿದವರು ಅನುಪಮಾ ನಿರಂಜನರವರು, ಪೌರಾಣಿಕ ಪಾತ್ರಗಳನ್ನು ಸ್ತ್ರೀ ಸಂವೇಧನೆಯ ದೃಷ್ಟಿಯಲ್ಲಿ ಕಂಡವರು ಇವರು ಎಲ್ಲ ಬರಹರದಲ್ಲೂ ಶೋಷಣೆಗೆ ಒಳಗಾದ ಸ್ತ್ರೀಯ ಧ್ವನಿಯನ್ನು ಎತ್ತಿ ಹಿಡಿಯುತ್ತಾರೆ.

ತಮ್ಮ ಲವಲವಿಕೆಯ ಶೈಲಿಯಲ್ಲಿ ಉತ್ತಮ ಸಂಭಾಷಣಾ ಕ್ರಮದಲ್ಲಿ ಜನರ ಮೆಚ್ಚುಗೆಗಳಿಸಿರುವ ಉಷಾನವರತ್ನಾರಾಮ್, ಸಾಯಿಸುತೆ ಇವರ ಬರಹದಲ್ಲೂ ಬದುಕನ್ನು ಮೇಲಿಂದ ಮೇಲೆ ನೋಡಿ ಮುಂದೆ ಸಾಗುವ ಸಮಸ್ಯಗಳಿಗೆ ಬಹುಬೇಗ ಪರಿಹಾರ ಸೂತ್ರವನ್ನು ಹುಡುಕುವ ಕ್ರಮ ವಿಶಿಷ್ಟವಾಗಿದೆ. ಆದರೆ ಇವರ ಬರಹದಲ್ಲಿ ಯಾವ ರೀತಿಯ ತಿರುಳು ಇಲ್ಲ. ಇವರು ವಾಸ್ತವದ ಬದುಕನ್ನು ಕಟ್ಟಿಕೊಡದೆ ಕಲ್ಪನಾ ಸಮಾಜವನ್ನು ಓದುಗರಿಗೆ ಕಟ್ಟಿಕೊಡುತ್ತಾರೆ.

ಎಂ. ಕೆ ಇಂದಿರಾ ಅವರ ಉತ್ತರಾಧಿಕಾರಿಯೇನೋ ಎನ್ನುವ ರೀತಿಯಲ್ಲಿ ಸಾಹಿತ್ಯವನ್ನು ರಚಿಸಿದ ಮತ್ತೊಬ್ಬ ಲೇಖಕಿ ವೈದೇಹಿಯವರು. ಇವರು ಎಲ್ಲಾ ಪ್ರಕಾರದ ಸಾಹಿತ್ಯವನ್ನು ರಚಿಸಿ ಎಲ್ಲ ಜನಸಾಮಾನ್ಯರಿಗೂ ಅರ್ಥವಾಗವ ರೀತಿಯಲ್ಲಿ ಸಾಹಿತ್ಯ ರಚನೆ ಮಾಡಿದರು.

ಇವರೆಲ್ಲರಿಗಿಂತಲೂ ಮತ್ತೊಂದು ವರ್ಗ ಸ್ವಲ್ಪ ಭಿನ್ನದಾರಿಯಲ್ಲಿ ನಡೆಯಿತು. ಅಲ್ಪ ಸಂಖ್ಯಾತರು ಹಾಗೂ ದಲಿತ ವರ್ಗದ ಸಂವೇದನೆಗಳನ್ನು ಮುಕ್ತವಾಗಿ ಹರಿಯಬಿಟ್ಟಿರುವ ಬಿ.ಟಿ. ಲಲಿತಾನಾಯಕ್, ಸಾ.ರಾ. ಅಬೂಬಕರ್ ಲೇಖಕಿಯರು ಬಂಡಾಯ ಧ್ವನಿಯ ಮೂಲಕ ಹೆಣ್ಣಿನ ಚಿತ್ರಣ ಮಾಡಿದ್ದಾರೆ. ಸಮಾಜದಲ್ಲಿ ಸ್ತ್ರೀಯರಿಗೆ ಇರುವ ಸ್ಥಾನಮಾನ ಅವಳನ್ನು ನಡೆಸಿಕೊಳ್ಳುವ ರೀತಿ, ಮೂಲೆ ಗುಂಪುಮಾಡಿ ಪೌರುಷ ತೋರುವ ಗಂಡಿನ ದರ್ಪ, ಈ ಶೋಷಣೆಗಳಿಗೆ ಒಳಗಾಗುವ ಹೆಣ್ಣಿನ ನಾನಾ ಸ್ತರಗಳನ್ನು ಹೆಣ್ಣು ಎಂದರೆ ಮನೆಯ ಪಾತ್ರೆಯ ತೊಳೆಯುವಳು, ತೊಟ್ಟಿಲು ತೂಗಲಷ್ಟೆ ಯೋಗ್ಯಳು, ಎಂದು

ಮೂಲೆಗುಂಪು ಮಾಡಿರುವ ಸಂದರ್ಭದಲ್ಲಿ ಸಾಹಿತ್ಯ ರಚನೆಯಲ್ಲಿ ಸ್ತ್ರೀಯರು ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡರು. ತಮ್ಮ ನೋವು ನಲಿವುಗಳನ್ನು ಹಂಚಿಕೊಳ್ಳಲಾಗದ ಸಂದರ್ಭದಲ್ಲಿ ಬರವಣಿಗೆಯ ಮೂಲಕ ತಮ್ಮ ದುಃಖವನ್ನು ತೋಡಿಕೊಂಡರು. ಮಹಿಳಾ ಸಾಹಿತ್ಯ ಅಡಿಗೆ ಮನೆ ಸಾಹಿತ್ಯ ಎಂದಾಗದೆ ಉತ್ತಮ ಸಾಹಿತ್ಯ ರಚನೆಯನ್ನು ಮಾಡಿದರು. ಹೆಣ್ಣಿನ ಶೋಷಣೆಯ ಮೇಲ್ದರವನ್ನು, ಆಂತರಿಕ ನೆಲೆಯನ್ನು ವಿವಿಧ ಮಜಲುಗಳಾಗಿ ಚಿತ್ರಣಮಾಡಿ, ಬೇರೊಬ್ಬರ ಅನುಭವಕ್ಕೆ ಸರಿಯಾಗಿ ದಕ್ಕದ, ಸ್ತ್ರೀಯರು ಮಾತ್ರವೇ ಅನುಭವಿಸಿದ ವೈಚಿತ್ರ ಅನುಭವಗಳನ್ನು ಇಲ್ಲಿ ಕಟ್ಟಿಕೊಟ್ಟಿದ್ದಾರೆ.

ಪರಾಮರ್ಶನ ಗ್ರಂಥಗಳು :

ಕನ್ನಡ ಲೇಖಕಿಯರ ನೆಲೆ ಬೆಲೆ. ಬಿ.ಎಸ್. ವೆಂಕಟಲಕ್ಷ್ಮಿ, ಎನ್.ಟಿ. ಶ್ಯಾಂ ಪ್ರಕಾಶನ, ಬೆಂಗಳೂರು. ಪುಟ : ೪೯,೫೦,೫೧

ಡಾ. ಗೀತಾ ಪ್ರಸಾದ್. ಡಾ. ಎಸ್. ಪ್ರಸಾದಸ್ವಾಮಿ, ಅಸ್ಮಿತೆ, ಕಣ್ಣವ ಪಬ್ಲಿಕೇಷನ್ಸ್ ಪ್ರೈವೇಟ್ ಲಿ. ಬೆಂಗಳೂರು– ಪುಟ : ೪೦–೪೫

ಆಧುನಿಕ ಮಹಿಳಾ ಅಭಿವ್ಯಕ್ತಿ ಡಾ. ಗೀತಾಪ್ರಸಾದ್, ಧಾತ್ರಿ ಪುಸ್ತಕ, ಬೆಂಗಳೂರು– ಪುಟ : ೧೦೬, ೧೧೨, ೧೧೪, ೧೧೫, ೧೧೭, ೧೧೮, ೧೩೩

ದಲಿತ ಬಂಡಾಯ ಚಳುವಳಿ, ಮಹಿಳಾ ಸಾಹಿತ್ಯ, ಮಾನಸ ಗಂಗೋತ್ರಿ, ಮೈಸೂರು. ಪುಟ– ೩೬–೩೭

## ಅಧ್ಯಾಯ –೨.೩ ಗೌರಮ್ಮನ ವೈಯಕ್ತಿಕ ಹಿನ್ನೆಲೆ :

ಕನ್ನಡದ ಪ್ರಥಮ ಕಥೆಗಾರ್ತಿ ಕೊಡಗಿನ ಗೌರಮ್ಮ ಭಾರತದಾದ್ಯಂತ ಸ್ವಾತಂತ್ರ್ಯ ಆಂದೋಲನ ತೀವ್ರಗತಿಯಲ್ಲಿ ವ್ಯಾಪಿಸಿಕೊಂಡಿದ್ದಂತಹ ಕಾಲದಲ್ಲಿ ಬರವಣಿಗೆಯಲ್ಲಿ ತೊಡಗಿಸಿಕೊಂಡಿದ್ದರು.

ಇಂತಹ ಗೌರಮ್ಮನವರು ಜನಿಸಿದ್ದು ೧೯೧೨, ಮಡಿಕೇರಿಯಲ್ಲಿ. ಸ್ಥಳೀಯ ಶಾಲೆಯಲ್ಲೇ ಪ್ರಾರಂಭಿಕ ವ್ಯಾಸಂಗ ಮಾಡಿ ೧೯೨೮ರಲ್ಲಿ ತಮ್ಮ ಹತ್ತಿರದ ಸಂಭಂದಿ ಬಿ.ಟಿ. ಗೋಪಾಲಕೃಷ್ಣರನ್ನು ವಿವಾಹವಾದರು. ಜೊತೆಗೆ ಒಂದು ಗಂಡು ಮಗುವಿಗೆ ತಾಯಿಯು ಆದರು. ಕುಟುಂಬವನ್ನು ನೋಡಿಕೊಳ್ಳುವುದರ ಜೊತೆಗೆ ಸಿಕ್ಕ ಅಲ್ಪಸ್ವಲ್ಪ ಸಮಯದಲ್ಲಿ ಪುಸ್ತಕಗಳನ್ನು ಓದುವುದನ್ನು ಅಭ್ಯಾಸ ಮಾಡಿಕೊಂಡರು. ಈ ಅಭ್ಯಾಸದ ಸತತ ಪ್ರಯತ್ನದಿಂದಾಗಿ ಅನೇಕ ಪತ್ರಿಕೆಗಳಲ್ಲಿ ಅವರ ಕಥೆಗಳು ಪ್ರಕಟಣೆಗೊಂಡವು ನಂತರ ಅವರು ಮಿಸೆಸ್ ಬಿ.ಟಿ.ಜಿ ಕೃಷ್ಣ ಎಂಬ ಹೆಸರಿನಲ್ಲಿ ಕಥೆಗಳನ್ನು ಬರೆಯಲು ಪ್ರಾರಂಭಿಸಿದರು.

ಗೌರಮ್ಮನವರ ಈ ಬರವಣಿಗೆಯೇ ಕನ್ನಡ ಸಾಹಿತ್ಯದ ಕ್ಷೇತ್ರದಲ್ಲಿ ಒಂದು ಆರೋಗ್ಯಕರ ಬೆಳವಣಿಗೆ ಎಂದು ಭಾವಿಸಬಹುದು. ತಿರುಮಲೆ ರಾಜಮ್ಮ ತಮ್ಮ ವೀಣಾವಾದನದಿಂದ ಗಾಂಧೀಜಿಯವರ ಮನಸ್ಸನ್ನು ತಣಿಸಿದರು. ಹಾಗೆಯೇ ಕೊಡಗಿನ ಗೌರಮ್ಮನವರು ಸ್ವಾತಂತ್ರ್ಯ ಆಂದೋಲನ ಸಮಯದಲ್ಲಿ, ಮಹಾತ್ಮಾಗಾಂಧಿಯವರು ಕೊಡಗಿನಲ್ಲಿ ಪ್ರವಾಸಮಾಡಿ ಸತ್ಯಾಗ್ರಹ ನಡೆಸುತ್ತಿದ್ದಾಗ, ಅವರನ್ನು ತಮ್ಮ ಮನೆಗೆ ಬರಮಾಡಿಕೊಂಡು, ಉಪವಾಸ ವ್ರತವನ್ನು ಹಿಡಿದಿದ್ದ ಗಾಂಧೀಜಿಯವರಿಗೆ ತಮ್ಮ ಕೈಯಿಂದಲೇ ಕಿತ್ತಳೆ ರಸ ಕುಡಿಸಿ ಉಪವಾಸ ನಿಲ್ಲಿಸಲು ಕಾರಣರಾದರು. ಮತ್ತು ಅವರ ಮೆಚ್ಚುಗೆಗೆ ಪಾತ್ರರಾದರು. ಈ ಘಟನೆ ಐತಿಹಾಸಿಕವಾಗಿ ಮಹತ್ವದ್ದಾಗಿದೆ. ಇದೇ ಸಂದರ್ಭದಲ್ಲಿ ಗೌರಮ್ಮನವರು ತಮ್ಮ ಬಳಿ ಇದ್ದ ಒಡವೆಗಳನ್ನು ಹರಿಜನೋದ್ಧಾರಕ್ಕಾಗಿ ದಾನ ಮಾಡಿ ಆದರ್ಶ ಮಹಿಳೆ ಎನಿಸಿಕೊಂಡವರು. ಈ ಸಂದರ್ಭವು ಕೇರಳದ ಪುಟ್ಟ ಕೌಮುದಿಯು ಮಹಾತ್ಮ ಗಾಂಧೀಜಿಯವರು ಹೋರಾಟಕ್ಕೆ ನೀಡಿದ ಕೊಡುಗೆಯನ್ನು ಸ್ಮರಿಸುವಂತಿತ್ತು.

ಇಂತಹ ಆದರ್ಶ ಮಹಿಳೆಯ ತಂದೆ – ಎನ್.ಎಸ್. ರಾಮಯ್ಯ, ತಾಯಿ – ನಂಜಕ್ಕ, ಪತಿ – ಬಿ.ಟಿ.ಜಿ. ಕೃಷ್ಣ ಇವರ ವಿದ್ಯಾರ್ಹತೆ – ಪ್ರೌಢಶಾಲೆ. ಸ್ಥಳ – ಮಡಿಕೇರಿ, ತಾರುಣ್ಯದಲ್ಲೇ ಗಂಡನನ್ನು ಕಳೆದುಕೊಂಡರೂ, ಧೃತಿಗೆಡಲಿಲ್ಲ. ಗೌರಮ್ಮನ ಕಥೆಗಳನ್ನು ಸಂಕಲಿಸಿ ಚಿಗುರು ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಲು ದ.ಬಾ. ಕುಲಕರ್ಣಿ ಪ್ರಯತ್ನಿಸುತ್ತಿದ್ದಾಗಲೇ ಲೇಖಕಿ ತಮ್ಮ ಮನೆಯ ಸಮೀಪದ ಹೊಳೆಯಲ್ಲಿ ಈಜಲುಹೋಗಿ ಆಕಸ್ಮಿವಾಗಿ ಮುಳುಗಿ ೧೯೪೦ರಲ್ಲಿ ದುರಂತ ಸಾವಿಗೀಡಾದರು. ತಮ್ಮ ಜೀವಿತ ಕಾಲದಲ್ಲಿ ತಮ್ಮ ಕಥಾಸಂಕಲನ ಹೊರಬರುವುದನ್ನು ಕಾಣದೇ ಹೋದರೂ, ಉತ್ಸಾಹದ ಈ ಹುಡುಗಿ ತನ್ನ ೨೮ನೇ

ವಯಸ್ಸಿನಲ್ಲೇ ಅಕಾಲ ಮೃತ್ಯುವಿಗೆ ತುತ್ತಾದುದು ಕನ್ನಡ ಸಾಹಿತ್ಯಕ್ಕೆ ತುಂಬಲಾರದ ನಷ್ಟವಾಗಿ ಹೋಯಿತು.

೧೯೩೧ ರಿಂದ ೧೯೩೯ರವರೆಗೆ ಎಂಟು ವರ್ಷಗಳ ಕಾಲ ಸಾಹಿತ್ಯ ರಚನೆಯಲ್ಲಿ ತೊಡಗಿದ್ದ ಇವರು ರಚಿಸಿದ ಸಣ್ಣಕಥೆಗಳು ಒಟ್ಟು ೨೧. ಅದರಲ್ಲಿ ಕಂಬನಿ ಕಥಾ ಸಂಕಲನದಲ್ಲಿ ೧೨ ಕಥೆಗಳಿವೆ. ಚಿಗುರು ಕಥಾ ಸಂಕಲನದಲ್ಲಿ ೯ ಕಥೆಗಳಿವೆ. ಕಂಬನಿ ಕಥಾಸಂಕಲನ ೧೯೩೯ರಲ್ಲಿ ಪ್ರಕಟಗೊಂಡರೆ, ಚಿಗುರು ೧೯೪೨ ರಲ್ಲಿ ಪ್ರಕಟಗೊಂಡಿತ್ತು.

ಕಂಬನಿ ಕಥಾ ಸಂಕಲನದಲ್ಲಿ ಬರುವ ಕಥೆಗಳೆಂದರೆ : ವಾಣಿಯ ಸಮಸ್ಯೆ, ಸನ್ಯಾಸಿ ರತ್ನ, ಒಂದು ಪುಟ್ಟ ಚಿತ್ರ, ಅವಳ ಭಾಗ್ಯ ಕೌಸಲ್ಯಾನಂದನ, ನಾಲ್ಕು ಘಟನೆಗಳು, ಪ್ರಾಯಶ್ಚಿತ, ಅಪರಾಧಿಯಾರು? ಹೋಗಿಯೇ ಬಿಟ್ಟಿದ್ದ ! ಸುಳ್ಳು ಸ್ವಪ್ನ, ಯಾರು?, ಮನುವಿನರಾಣಿ. ಚಿಗುರು ಕಥಾಸಂಕಲನದಲ್ಲಿ ಬರುವ ಕಥೆಗಳೆಂದರೆ. ಪುನರ್ವಿವಾಹ ಕೆಲವು ಕಾಗದಗಳು, ಆಹುತಿ, ಒಂದು ಚಿತ್ರ, ಪಾಪನ ಮದುವೆ, ಅದೃಷ್ಟದ ಆಟ, ನನ್ನ ಮದುವೆ, ಮರದ ಗೊಂಬೆ ಮುನ್ನಾದಿನ.

[1]"ಪುನರ್ವಿವಾಹ ೧೯೩೧ರಲ್ಲಿ ಬರೆದ ಗೌರಮ್ಮನವರ ಮೊಟ್ಟಮೊದಲ ಕಥೆ. ಗೌರಮ್ಮನವರೇ ಹೇಳಿರುವ ಮಾತು : ಪುನರ್ವಿವಾಹ ಕಥೆ ಬರೆಯಲು ಕಾರಣವಾದ ಬಹುಶ: ನನ್ನ ಎಲ್ಲಾ ಕತೆಗಳಿಗೂ ಮೂಲಕಾರಣವಾದ ಅದೊಂದು ಉಪಕತೆ ಇದೆ. ಅದನ್ನು ತಾವು ಕೇಳಿದರೆ ನಾನು ಕೇವಲ ವಿಧವೆಯ ಕತೆಗಳಲ್ಲೇ ಹೆಚ್ಚಿನ ಪಕ್ಷಪಾತಿ ಏಕೆಂದು ತಮಗೆ ತಿಳಿಯಬಹುದು. ಆಗ ನನಗಿದು ಬಹಳ ಸೊಗಸಾಗಿದೆ ಎಂಬ ಭಾವನೆಯಿತ್ತು. ಆದರೆ ಈಗ ಓದಿದರೆ ಆಗಿನ ಭಾವನೆಗಳನ್ನೆಲ್ಲಾ ನೆನಸಿಕೊಂಡು ನಗು ಬರುತ್ತೆ ಆದರೂ ಇದು ನನ್ನ ಮೊಟ್ಟ ಮೊದಲಿನ ಪ್ರಯತ್ನ ನೋಡಿ, ಆದ್ದರಿಂದ ಸ್ವಲ್ಪ ಮಮತೆ"[1] ೧೪.೦೩.೧೯೩೮ ಗೌರಮ್ಮಎಂದು ತಿಳಿಸಲಾಗಿದೆ.

"ಕೆಲವು ಕಾಗದಗಳು"

[2]"ಇವು ಕೆಲವು ಕಾಗದ ಪತ್ರಗಳು ಮಾತ್ರವೆ ಆದರೂ, ಬರೆದವರ ಜಾಣ್ಮೆಯಿಂದಾಗಿ 'ಸಾಹಿತ್ಯ'ದ ಸಾಲಿನಲ್ಲಿ ಸೇರಿವೆ. ಕನ್ನಡದಲ್ಲಿ ಇದೊಂದು ಹೊಸದಾರಿ, ಬರೆದವರ ವಿಶಿಷ್ಟತೆ, ಪ್ರಾಯ ಮೊದಲಾದವನ್ನೇಣಿಸಿದರೆ ಇವರು ಬರಹಗಾರರೊಳಗೆ ಒಂದೆಡೆಯನ್ನು ಪಡೆದು ಕೊಳ್ಳುವರೆಂದು ತೋರುತ್ತದೆ. ಈ ಲೇಖನದಲ್ಲಿ ಬರಹಗಾರರ ಹೆಸರಿಲ್ಲ. ಆದ್ದರಿಂದ ಅವರೆಣಿಕೆಯನ್ನರಿಯದೆ ಅವರ ಹೆಸರನ್ನು ಪ್ರಕಟಿಸುವುದು ನನ್ನ ಹಕ್ಕಿನಿಂದಾಚೆಯ ಕೆಲಸವೆಂದು ಸುಮ್ಮನಾಗಿದ್ದೇನೆ. ಇವರು ತಮ್ಮ ಈ ಲೇಖನ ಕರ್ತವ್ಯವನ್ನು ಸಾಗಿಸುತ್ತ ಕನ್ನಡವನ್ನು ಬೆಳಗಿಸುವಂತಾಗಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸುವದಷ್ಟೆ ನನ್ನ ಕೆಲಸ ಎಂದು 'ಮುಳಿಯ ತಿಮ್ಮಪ್ಪಯ್ಯ' ಹೇಳಿದ್ದಾರೆ."[2]

---

[1] ಕೊಡಗಿನ ಗೌರಮ್ಮ : ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–ಪುಟ : ೧೩೬,

[2] ಕೊಡಗಿನ ಗೌರಮ್ಮ : ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–ಪುಟ : ೧೫೫.

“ಮುನ್ನಾದಿನ “

[೩]“ಇದು ಗೌರಮ್ಮನವರು ಹೊಳೆಯಲ್ಲಿ ಈಸಹೋಗಿ ತನ್ನ ಇಹಯಾತ್ರೆ ಕೊನೆಗಾಣಿಸಿದ ಮುನ್ನಾದಿನ ಬರೆದಿದ್ದ ಕಥಾಭಾಗ ಕಾಡ ನಮ್ಮ ಮೇಸ್ತ್ರಿ ಈಗಲೂ ಮೇಸ್ತ್ರಿಯಾಗಿ ಇದ್ದಾನೆ. ನಮ್ಮಲ್ಲಿ ಅವನ ಜೀವನದಲ್ಲಿ ಇದು ದ್ವಿತೀಯಾಂಕ ಮಾತ್ರ. ಈ ಕಥೆ ಇಷ್ಟಕ್ಕೆ ನಿಂತಿತು. ಇಲ್ಲಿಗೆ ಗೌರಮ್ಮನ ಕಥೆಯೂ ಅಷ್ಟೆ”[೩] (ಇಲ್ಲಿಗೆ ಗೌರಮ್ಮನ ಬದುಕು ಅಂತ್ಯವನ್ನು ಪಡೆಯಿತು)

ಕೊಡಗಿನ ಗೌರಮ್ಮನವರು ತಮ್ಮ ‘ಕಂಬನಿ’ ಸಂಕಲನದಲ್ಲಿ ‘ನನ್ನ ಸುಳ್ಳು ಸ್ವಪ್ನ’ ವೆಂಬ ಮೊದಲು ಪ್ರಕಟವಾದ ಕತೆಯನ್ನು ಒಬ್ಬ ಮಹನೀಯರು ಪ್ರಜಾಮತದ ೪.೧೨.೩೮ರ ಸಂಚಿಕೆಯಲ್ಲೂ, ‘ಸನ್ಯಾಸಿ ರತ್ನ’ ಎಂಬ ಕತೆಯನ್ನು ಮಹಾನುಭಾವರು ರಾಷ್ಟ್ರ ಬಂಧುವಿನ ೧೭೦೫ – ೩೭ರ ಸಂಚಿಕೆಯಲ್ಲೂ ಎತ್ತಿ ತಮ್ಮದಾಗಿ ಪ್ರಕಟಿಸಿದ್ದಾರೆ. ಇದಕ್ಕಾಗಿ ನಾನು ತುಂಬ ವಿಷಾದಿಸುತ್ತೇನೆ ಎಂದಿರುವ ಮಾತುಗಳು ಮಹಿಳಾ ಬರಹದ ಬರಹಗಾರ್ತಿಯರ ಸ್ಥಿತಿಗತಿಗಳನ್ನು ಬಿಂಬಿಸುತ್ತದೆ.

ಆಕರ ಗ್ರಂಥ :
ಕೊಡಗಿನ ಗೌರಮ್ಮ : ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು – ಪುಟ : ೧೩೯, ೧೫೫, ೨೪೫

ಪರಾಮರ್ಶನ ಗ್ರಂಥಗಳು :

ಬಿ.ಎಸ್. ವೆಂಕಟಲಕ್ಷ್ಮಿ : ಕನ್ನಡ ಲೇಖಕಿಯರ ನೆಲೆ–ಬೆಲೆ. ಎಸ್.ಬಿ. ಶ್ಯಾಂ. ಪ್ರಕಾಶನ. ಪುಟ: ೬೮

ಎಸ್.ವಿ. ಶ್ರೀನಿವಾಸರಾವ್ : ಕನ್ನಡ ಸಾಹಿತಿ ದರ್ಶನ ಸೌರಭ ಪ್ರಕಾಶನ, ಪುಟ : ೨೦೮.

[೩]ಡಾ. ಗೀತಪ್ರಸಾಧ್, ಅಸ್ಮಿತೆ, ಕಣ್ವ ಪಬ್ಲಿಕೇಷನ್ ಪ್ರೈವೇಟ್ ಲಿ. ಬೆಂಗಳೂರು – ಪುಟ : ೨೪೫

## ಅಧ್ಯಾಯ – ೨.೪ ಗೌರಮ್ಮನ ಕಥೆಗಳಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ

ಕನ್ನಡ ಸಾಹಿತ್ಯವನ್ನು ಸ್ಥೂಲವಾಗಿ ಅಧ್ಯಯನ ಮಾಡಿದಾಗ ಇಂದು ಎಲ್ಲಾ ಪ್ರಕಾರದ ಜನರ ಬರವಣಿಗೆಯನ್ನು ನಾವು ಕಾಣಬಹುದು.

ಉದಾ : ಮುಸ್ಲಿಮರು ಬರೆಯುತ್ತಿದ್ದಾರೆ, ದಲಿತರು ಬರೆಯುತ್ತಿದ್ದಾರೆ, ಹಾಗೆಯೇ ಸ್ತ್ರೀಯರು ಬರೆಯುತ್ತಿದ್ದಾರೆ. ಆದ್ದರಿಂದ ನಾವು ಮುಸ್ಲಿಂ ಸಂವೇದನೆ ಎಂದು, ದಲಿತ ಸಂವೇದನೆ ಎಂದು ಹಾಗೂ ಸ್ತ್ರೀ ಸಂವೇದನೆ ಎಚಿದು ಅನೇಕ ವಿಭಾಗವಾಗಿ ನಾವು ಗುರುತಿಸುತ್ತಿದ್ದೇವೆ. ಸ್ತ್ರೀಯರೇ ರಚಿಸಿರುವ, ರಚಿಸುತ್ತಿರುವ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ ಹೇಗಿದೆ? ಎಂದು ಹಾಗೂ ಎಷ್ಟರ ಮಟ್ಟಿಗೆ ದಿನ ನಿತ್ಯದ ಸಮಸ್ಯೆಗಳಿಗೆ ಲೇಖಕಿಯರು ಸ್ಪಂದಿಸಿದ್ದಾರೆ, ಎಂದು ಸಾಹಿತ್ಯವನ್ನು ಓದುಗನ ಅರಿವಿಗೆ ಓದಿದಾಗ ಮಾತ್ರ ಬರುತ್ತದೆ.

ಪ್ರಮುಖ ಲೇಖಕಿಯರಲ್ಲಿ ಕೊಡಗಿನ ಗೌರಮ್ಮನವರು ಒಬ್ಬರು. ಅವರು ತಮ್ಮ ಕಥೆಗಳಲ್ಲಿನ ಪಾತ್ರದಲ್ಲಿ ಹೇಗೆ ಸ್ತ್ರೀ ಸಂವೇದನೆಯನ್ನು ಗುರುತಿಸಿದ್ದಾರೆ ಎಂಬುದನ್ನು ಚರ್ಚಿಸೋಣ. ಇವರು ತಮ್ಮ ಕಥೆಗಳ ಮೂಲಕ ಕಾಗದ ಹಾಗೂ ಪತ್ರಿಕೆಯ ಮೂಲಕ ಶಿಕ್ಷಣದ ಅಗತ್ಯ ಮಹಿಳೆಯರಿಗೆ ಇದೆ ಎಂಬುದನ್ನು ಅವರು ಪ್ರತಿಪಾದಿಸಿದರು.

ಇವರೇ ಚಿತ್ರಿಸಿದ ಕಥೆಯಲ್ಲಿ ಸ್ತ್ರೀಯರದು ಪೂರಕ ಪಾತ್ರ ಮಾತ್ರ, ಹೀಗೇಕೆ ಮಾಡಿದರು ಇದಕ್ಕೆ ಕಾರಣಗಳೇನು? ಎಂದು ನೋಡಿದರೆ ಪಿತೃ ಪ್ರಧಾನ ರಾಷ್ಟ್ರದಲ್ಲಿ [೧]"ಮನೆಗೆ ಯಜಮಾನ ಗಂಡಸು. ಅವನು ಗಂಡನಿರಬಹುದು, ತಂದೆಯಿರಬಹುದು, ಮಗನಾಗಿರಬಹುದು, ಅಣ್ಣನಾಗಿರಬಹುದು, ಇವರೆಲ್ಲರಿಗೂ ದಿನನಿತ್ಯ ಬೆಳಗ್ಗೆಯಿಂದ ರಾತ್ರಿಯವರೆಗೆ ಸೇವೆಯನ್ನು ಮಾಡುವುದೆ ಸ್ತ್ರೀಯರ ಕರ್ತವ್ಯ. ಅದರಲ್ಲೇ ನಿಜವಾದ ತಾಯ್ತನವು ಅಡಗಿದೆ"[೧] ಎಂದು ಹೇಳುತ್ತಾರೆ. ಸಮಾಜದ ಬೆನ್ನೆಲುಬಾದ 'ಕುಟುಂಬ' ವೇ ಇವರ ಸ್ತ್ರೀತನದ ಜವಾಬ್ದಾರಿ. ಈ ಜವಾಬ್ದಾರಿಯನ್ನು ಮಹಿಳೆ ತನ್ನ ಮೇಲೆ ಹೊತ್ತುಕೊಂಡು ಸಾಗಬೇಕು. ಇನ್ನು ಅದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ ಇನ್ನೇನಾದರೂ ಮಹಿಳೆ ಬರೆದರೆ, ಆ ಬರಹದಲ್ಲಿ ಬರುವ ಪಾತ್ರಕ್ಕೆ ಕೋಮಲತೆ, ಮಾರ್ದವತೆ, ಭಯ, ಆತಂಕ, ತಲ್ಲಣ, ದುಗುಡ ಇವುಗಳಿಂದ ತುಂಬಿರುವ ವ್ಯಕ್ತಿತ್ವವೇ ಸ್ತ್ರೀಯರಿಂದ ಚಿತ್ರಣಗೊಳ್ಳಬೇಕು. ಎನ್ನುತ್ತಾರೆ.

ಈ ರೀತಿಯಲ್ಲೇ ಗೌರಮ್ಮನವರ ಎಲ್ಲಾ ಕಥೆಗಳು ಮೂಡಿಬಂದಿರುವುದನ್ನು ನೋಡುತ್ತೇವೆ. ಸ್ತ್ರೀ ಬದುಕಿನ ಮೇಲೆ ಸ್ವಲ್ಪ ಹೆಚ್ಚು ಎಂದು ಹೇಳಬಹುದಾದ, ನೀತಿ ನಿಯಮಾವಳಿಯ ಹಿಡಿತವನ್ನು ಸಾಧಿಸಿರುವುದನ್ನು ಇವರ ಕತೆಯಲ್ಲಿ ನೋಡುತ್ತೇವೆ. ಇವರ ಕಥೆಗಳಲ್ಲಿ ಕೇಂದ್ರ ಬಿಂದು ಸ್ತ್ರೀ. ಸ್ತ್ರೀ ಸಮಸ್ಯೆಯ ಅನಾವರಣ ಈ ಕತೆಗಳಲ್ಲಿ ಪುರುಷರ ಶೋಷಣೆಗೆ ಒಳಗಾಗಿರುವ ಸ್ತ್ರೀಯರೇ ಹೆಚ್ಚಾಗಿದ್ದಾರೆ. ಅದರ ಜೊತೆ ಜೊತೆಯಲ್ಲೇ

---

[೧] ಡಾ. ಎಸ್.ವಿ. ಪ್ರಭಾವತಿ, ಕನ್ನಡ ಸಾಹಿತ್ಯ ಮತ್ತು ಸ್ತ್ರೀ ವಾದಿ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಆಧುನಿಕ ಕನ್ನಡ ಮಹಿಳಾ ಕಥಾ ಸಾಹಿತ್ಯ ಪುಟ : ೯೩

ವ್ಯವಸ್ಥೆಯಲ್ಲಿ ಶೋಷಿತ ಸ್ತ್ರೀ ಪುರುಷ ಪಾತ್ರಗಳು ಅಧಿಕ ಸಂಖ್ಯೆಯಲ್ಲಿ ಇರುತ್ತವೆ. ಅವರೆ ಎಲ್ಲವನ್ನು ಪುರುಷ ಪರವಾದ ದೃಷ್ಟಿಯಿಂದ ನೋಡುವುದನ್ನು ಗಮನಿಸಬೇಕು. ಮಹಿಳೆಯು ಸಹ ಪುರುಷ ಪರವಾಗಿ ಇರಬೇಕು ಎಂಬುದೇ ಗೌರಮ್ಮನವರ ಆಶಯ. ಈ ಹಿನ್ನೆಲೆಯಲ್ಲಿ ಗೌರಮ್ಮನವರ ಸಂವೇದನೆಯಲ್ಲಿ 'ಸ್ತ್ರೀ'– ಸಮಾಜ ಸ್ತ್ರೀಗೆ ಕಲಿಸಿರುವುದು, ಸ್ತ್ರೀಯಿಂದ ನಿರೀಕ್ಷಿಸುವುದು ಎಂದರೆ ತಾಳ್ಮೆ, ಕರುಣೆ, ತ್ಯಾಗ, ಕೋಮಲತೆ, ಮಾನವೀಯ ಭಾವನೆಗಳ ದೃಷ್ಟಿಕೋನ ಇರುವುದನ್ನು ಗಮನಿಸಬಹುದು.

ಗೌರಮ್ಮನವರ ಕತೆಯಲ್ಲಿ ಬಾಲ ವಿಧವಾ ಸಮಸ್ಯೆಯನ್ನು ತೆಗೆದುಕೊಂಡಾಗ, ಅವರ ಮೊದಲ ಕಥೆಯಾದ 'ಪುನರ್ವಿವಾಹ' ಕತೆ, ಅದರ ಜೊತೆ 'ವಾಣಿಯ ಸಮಸ್ಯೆ' 'ಒಂದು ಪುಟ್ಟ ಚಿತ್ರ' ಈ ಕಥೆಗಳಲ್ಲಿ ಬರುವ ಎಲ್ಲ ನಾಯಕಿಯರು ಸಹ ವೈವಿಧ್ಯವಾದ ವ್ಯಕ್ತಿತ್ವವನ್ನು ಹೊಂದಿರುತ್ತಾರೆ. ಅದರಲ್ಲಿ ರಾಜಿ, ಇಂದು, ಶಾಂತ, ಈ ಮೂವರು ಬಾಲ ವಿಧವೆಯರು, ತಕ್ಕಮಟ್ಟಿಗೆ ಶಿಕ್ಷಣಾಭ್ಯಾಸವನ್ನು ಮಾಡಿರುವವರು. 'ಪುನರ್ವಿವಾಹದಲ್ಲಿ' ಬರುವ ರಾಜಿಗೆ, ತಾಯಿಯೇ ಜೊತೆಯಲ್ಲಿ ಇದ್ದು ಶಿಕ್ಷಣವನ್ನು ಕಲಿಸುತ್ತಿದ್ದರು. ಇಂದುವಿಗೆ ತಂದೆ, ತಾಯಿಯಿರಲಿಲ್ಲ. ದಾಯಾದಿಗಳ ಆಶ್ರಯದಲ್ಲಿ ಬೆಳೆದ ಇಂದು ಗಂಡನ ನೆನಪಿನಲ್ಲಿ ಅವನು ತನ್ನ ಹೆಸರಿಗೆ ಬರೆದ ಮನೆಯಲ್ಲಿ ನೆಮ್ಮದಿಯಾಗಿ ಸುಖವಾಗಿದ್ದಳು. 'ಒಂದು ಪುಟ್ಟ ಚಿತ್ರದಲ್ಲಿ' ಬರುವ ಶಾಂತಳನ್ನು ತೆಗೆದುಕೊಂಡರೆ ಶಾಂತ ತಂದೆ ತಾಯಿಯರಿಲ್ಲದ ಅನಾಥೆ. ಅಣ್ಣ, ಅತ್ತಿಗೆಯ ಆಶ್ರಯದಲ್ಲಿ ಬೆಳೆದವಳು. ಅತ್ತಿಗೆಯು ಕೊಡುವ ಕಿರುಕುಳವನ್ನೇ ತನ್ನ ಪಾಲಿಗೆ ಬಂದದ್ದು ಪಂಚಾಮೃತ ಎಂದು ಬದುಕನ್ನು ನಿರ್ವಹಿಸುತ್ತಿದ್ದಂತಹ ಹೆಣ್ಣು ಮಗಳು.[1]

ಈ ಮೂರು ಸ್ತ್ರೀಯರಿಗೆ ಬಾಲ್ಯದಲ್ಲೇ ಜೀವನ ಎಂದರೇನು? ಎಂದು ತಿಳಿಯದಂತಹ ಅಪ್ರಾಪ್ತ ವಯಸ್ಸಿನಲ್ಲೇ ಮದುವೆ ಆಗಿ ಹೋಗಿತ್ತು. ಈ ಮದುವೆ ಎಂದರೆ, ಎಲ್ಲರಿಗೂ ಒಂದು ಹೊಸತನದ ಜೀವನವಾದರೆ ಈ ಮೂವರಿಗೆ, ಮದುವೆಯಿಂದಲೇ ಅವರ ಬಾಳು ಜರ್ಝರಿತವಾಗಿ ಹೋಗಿತ್ತು. ಇಂತಹ ಹೆಣ್ಣು ಮಕ್ಕಳ ಬದುಕಿನಲ್ಲಿ ಆಕಸ್ಮಿಕವಾಗಿ ಮತ್ತೊಂದು ಅವಕಾಶ ಬಂದಂತೆ ಎರಡನೇ ಬಾರಿ ಪುರುಷರ ಪ್ರವೇಶವಾಯಿತು. ಪುನರ್ವಿವಾಹ ಕಥೆಯಲ್ಲಿ ರಾಜಿಯ ಜೊತೆ ಬರುವ ವಿಧುರ, ಬಹಳ ಅಹಂಕಾರಿ, ಆತ ಯಾವಾಗಲೂ ತನ್ನಲ್ಲಿ ಇರುವ ಹಣ, ಐಶ್ವರ್ಯ, ಸಂಪತ್ತು, ಆಸ್ತಿ ಇವುಗಳ ಬಗ್ಗೆಯೇ ಒಂದು ಕನಸು ಕಟ್ಟಿಕೊಂಡು, ಇವುಗಳಿಂದಲೇ ತಾನು ಏನನ್ನು ಬೇಕಾದರೂ ಗೆಲ್ಲಬಲ್ಲೆ ಎಂಬ ಗರ್ವದಿಂದ ಮೆರೆಯುತ್ತಿದ್ದ.

'ವಾಣಿಯ ಸಮಸ್ಯೆಯಲ್ಲಿ' ಬರುವ ಇಂದುವಿನ ಜೀವನದಲ್ಲಿ ರತ್ನನ ಪ್ರವೇಶವಾಯಿತು, ಇಂದುವಿಗೆ ತನ್ನಜೀವನದಲ್ಲಿ ಕಳೆದುಕೊಂಡ ಅಮೂಲ್ಯವಾದ ಸಂತಸದ ಕ್ಷಣಗಳು ವಾಣಿರತ್ನರ ನವ ದಂಪತಿಗಳನ್ನು ನೋಡಿದಾಗ ಅವಳ ಮನಸ್ಸು ಕೊರೆಯುವುದಕ್ಕೆ ಪ್ರಾರಂಭವಾಯಿತು. ತನಗೂ ಯಾವುದೋ ಭಾವನೆಗಳ ಕೊರತೆ ಇದೆ ಎಂಬ ಅನುಭವವಾಗುತ್ತಿತ್ತು. ರತ್ನನು ಇಂದುವನ್ನು ತಮ್ಮವಳನ್ನಾಗಿ ಭಾವಿಸಲು ಪ್ರಾರಂಭಿಸಿದ. ತನ್ನ ಹೆಂಡತಿ ಹೀಗೆ ಇರಬೇಕು ಎಂದು ಆಲೋಚಿಸಿದ [2]"ನನ್ನ ವಾಣಿಯೂ ಹೀಗೆಯೇ

[1]ಕೊಡಗಿನ ಗೌರಮ್ಮ ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂ. ಪುಟ–೧೦.

ಕಾರ್ಯಕುಶಲೆಯಾಗಿದ್ದರೆ ಎಂದುಕೊಳ್ಳುವ ಬದಲು ತಾನೆಂದೂ ನೋಡದ ಇಂದುವಿನ ರೂಪವನ್ನು ಕಲ್ಪಿಸಕೊಡಗಿದ"[೨] ಈ ರೀತಿಯ ಸ್ವಾರ್ಥ ಮನೋಭಾವನೆ ಉಳ್ಳವನು ರತ್ನ.

'ಒಡೆದು ಪುಟ್ಟ ಚಿತ್ರ' ದಲ್ಲಿ ಬರುವ ಶಾಂತಳಿಗೆ, ಅತ್ತಿಗೆಯ ತಮ್ಮ ರಘುವಿನ ಪರಿಚಯವಾಗಿ ಆ ರಘುವಿನ ಪಾಪಕೃತ್ಯದಿಂದ ಶಾಂತ ಗರ್ಭಿಣಿಯಾಗುತ್ತಾಳೆ. ಈ ವಿಚಾರ ತಿಳಿಸಲು ಬರೆದ ಕಾಗದಕ್ಕೆ ಮಾನವೀಯತೆಯನ್ನು ಮರೆತು ರಘು ಕ್ರೂರ ವ್ಯಕ್ತಿಯಾಗಿ ವಂಚಕನಾಗಿ, ಶಾಂತಳಿಗೆ ಉತ್ತರಿಸುವ ಕಾಮಾಂಧಕನಾಗಿದ್ದಾನೆ. ರಘು, ರತ್ನ, ವಿಧುರ ಈ ವ್ಯಕ್ತಿಗಳನ್ನು ಕಟ್ಟಿಕೊಂಡು ಈ ಮೂರು ಜನ ಸ್ತ್ರೀಯರು ಸಮಾಜದಲ್ಲಿ ಇರುವ ಕಟ್ಟುಪಾಡುಗಳಿಗೆ ದಾಸಿಯರಾಗಿ ಸಿಲುಕಿ ಒದ್ದಾಡಿದ ಪರಿಸ್ಥಿತಿಯನ್ನು ನಾವಿಲ್ಲಿ ಕಾಣುತ್ತೇವೆ. ಇಂತಹ ಪರಿಸ್ಥಿತಿಯಲ್ಲಿಯೂ ಅವರು ತೆಗೆದುಕೊಳ್ಳುವ ನಿರ್ಧಾರ ಮಾತ್ರ ಗಂಭೀರವಾಗಿತ್ತು. ಕುತೂಹಲ ಹುಟ್ಟಿಸುವಂತೆ ಇತ್ತು. ಈ ಮೂರು ಜನ ವಿಧವಾ ಸ್ತ್ರೀಯರಲ್ಲಿ, ಬಂಡಾಯ ಗಾರ್ತಿಯಾಗಿ ರಾಜಿ ಮೊದಲನೆ ಯವಳಾಗಿ ಕಾಣಿಸಿಕೊಳ್ಳುತ್ತಾಳೆ. ಇನ್ನುಳಿದ ಇಬ್ಬರು ಕಥೆಯಲ್ಲಿ ಪಲಾಯನವಾದಿಗಳಂತೆ, ಇಂದು ವಾಸಿಸುವ ಸ್ಥಳವನ್ನು ಬದಲಾಯಿಸುತ್ತಾಳೆ. ಶಾಂತ ಆತ್ಮಹತ್ಯೆಗೆ ಶರಣಾಗುತ್ತಾಳೆ.

'ಪುನರ್ವಿವಾಹ' ಕಥೆಯಲ್ಲಿ ಬರುವ ರಾಜಿ, ಬಂಡಾಯ ಮನೋಭಾವವುಳ್ಳವಳು. ಗೌರಮ್ಮನವರು ತಮ್ಮ ಅಡಿ ಟಿಪ್ಪಣಿಯಲ್ಲಿ ತಿಳಿಸಿರುವಂತೆ [೩]"ಇದು ೧೯೩೧ರಲ್ಲಿ ಬರೆದ ನನ್ನ ಮೊಟ್ಟ ಮೊದಲಿನ ಕಥೆ. ಈ ಕಥೆ ಬರೆಯಲು ಕಾರಣವಾದ ಬಹುಶ: ನನ್ನ ಎಲ್ಲ ಕತೆಗಳಿಗೂ ಮೂಲಕಾರಣವಾದ ಅದೊಂದು ಉಪಕತೆ ಇದೆ. ಅದನ್ನು ತಾವು ಕೇಳಿದರೆ ನಾನು ಕೇವಲ ವಿಧವೆಯರ ಕತೆಗಳಲ್ಲೇ ಹೆಚ್ಚಿನ ಪಕ್ಷಪಾತಿ ಏಕೆಂದು ತಮಗೆ ತಿಳಿಯಬಹುದು. ಆಗ ನನಗಿದು, ಬಹಳ ಸೊಗಸಾಗಿದೆ, ಎಂಬ ಭಾವನೆಯಿತ್ತು. ಈಗ ಓದಿದರೆ ಆಗಿನ ಭಾವನೆಗಳನ್ನೆಲ್ಲಾ ನೆನಸಿಕೊಂಡು ನಗು ಬರುತ್ತೆ. ಆದರೂ ಮೊಟ್ಟಮೊದಲಿನ ಪ್ರಯತ್ನ ನೋಡಿ ಅದರಿಂದ ಸ್ವಲ್ಪ ಮಮತೆ."[೩] ಎಂದು ಹೇಳಿದ್ದಾರೆ.

ಏಕೆಂದರೆ, ಮಹಿಳೆಯರು ಇನ್ನು ಪುರುಷರ ಅಧೀನತೆಯಲ್ಲಿಯೇ ಇದ್ದಂತಹ ಕಾಲ, ಹೆಣ್ಣು ಮೊದಲು ತಂದೆಯ ಆಶ್ರಯದಲ್ಲಿದ್ದು, ನಂತರ ಗಂಡನ ಆಶ್ರಯ ಮತ್ತು ಮಗನ ಆಶ್ರಯದಲ್ಲಿ ಅವಲಂಬಿತ ಜೀವನ ನಡೆಸುತ್ತಿದ್ದವಳು. 'ಅಧೀನತೆಯೇ ತಮ್ಮ ಜೀವನದ ಗುರಿ' ಎನ್ನುವಂತಹ ಕಾಲದಲ್ಲಿ 'ರಾಜಿ' ಎನ್ನುವ ಮಹಿಳೆ ಅದರಲ್ಲೂ, ಬಾಲ ವಿಧವೆ ಕಾಮದ ಮೋಹದ ಭಾವನೆಯನ್ನು ಆವರಿಸಿಕೊಂಡು ವಿವಾಹವಾಗಲು ಬಂದ ವರನನ್ನು ಉತ್ತಮ ಉದ್ದೇಶಕ್ಕಾಗಿ ಆತನನ್ನು ತಿರಸ್ಕರಿಸಿದ್ದಳು. ಆಕೆಯಿದ್ದ ಅಂತಹ ಕಟ್ಟುನಿಟ್ಟಿನ ಸನ್ನಿವೇಶದಲ್ಲೂ ಅವಳಿಗೆ ಎಂತಹ ಧೈರ್ಯ, ಆವೇಶ, ಸ್ವತಂತ್ರವಾಗಿ ಹೇಗೆ ಆತನನ್ನು ವಿರೋದಿಸಿದಳು, ಅಷ್ಟೇ ಮಾತ್ರವಲ್ಲದೇ ಅವಳನ್ನು ಮದುವೆ ಮಾಡಿಕೊಳ್ಳಲು ಬಂದಾತನನ್ನು ತಿದ್ದಿದಳು. ಆದರಿಂದ ಇವಳು ಆ ಕಾಲದ ಮಹಿಳೆಯರಿಗೆ ಮಾದರಿಯಾದಳು. ಹಾಗಾಗಿ ಅವಳ ವರ್ತನೆ ತೀರ ಆದರ್ಶವೆನಿಸುತ್ತಿತ್ತು.

---

[೩]ಅಡಿಟಿಪ್ಪಣಿ : ಕೊಡಗಿನ ಗೌರಮ್ಮ ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂ. ಪುಟ-೧೩೯.

'ವಾಣಿಯ ಸಮಸ್ಯೆಯಲ್ಲಿ' ಬರುವ ಇಂದು ರತ್ನನ ಸ್ವಾರ್ಥದ ಭಾವನೆಗೆ ಎಲ್ಲಿ ಬಲಿಯಾಗುತ್ತೆನೋ ಎಂದು ತಾನು ಹುಟ್ಟಿಬೆಳೆದ ಸದಾ ಕಿರುಕುಳ ಕೊಡುತ್ತಿದ್ದ ಹಿಂಸೆಯಲ್ಲೇ ಬದುಕನ್ನು ನಡೆಸುತ್ತಿದ್ದ, ತನ್ನ ಸಹೋದರನ ಮನೆಗೆ ಹೋದಳು. ಹೋಗುವ ಮೊದಲು ರತ್ನನ ಬಗೆಗೆ ಇದ್ದ ಭಾವನೆಗಳನ್ನು ಅವನು ಬರೆದ ಕಾಗದವನ್ನು ಸುಟ್ಟು ಹೇಗೆ ಬೂದಿ ಮಾಡುತ್ತಾಳೋ, ಹಾಗೆಯೇ ಮನದ ಭಾವನೆಗಳನ್ನು ಬೆಂಕಿಗೆ ಆಹುತಿ ಕೊಟ್ಟಳು. ಇಂದು ಸ್ವಭಾವತಃ ಪಾಪಭೀರು. ಆದ್ದರಿಂದ ಪಾಲಾಯನ ಮಾಡುತ್ತಾಳೆ.

'ಒಂದು ಪುಟ್ಟ ಚಿತ್ರದ' ಶಾಂತಳು ರಘುವಿನ ಮೋಹ ಪಾಶಕ್ಕೆ ಬಲಿಯಾಗಿ ಸಮಾಜಕ್ಕೆ ಮತ್ತು ತನ್ನ ಅಣ್ಣ, ಅತ್ತಿಗೆಗೆ ಹೇಗೆ? ಈ ಅಸಹ್ಯದ ಮುಖವನ್ನು ತೋರಿಸಲಿ ಎಂದು ಸಮಾಜಕ್ಕೆ ಹೆದರುತ್ತಾಳೆ. ಹೆದರಿದ ಶಾಂತಳನ್ನು ಸಮಾಧಾನ ಮಾಡಿ ಧೈರ್ಯ ಹೇಳುವ ಮನುಷ್ಯನೇ ಇಲ್ಲ. ಅಮಾನವೀಯವಾಗಿ ವರ್ತಿಸಿ ನಯವಂಚಕನಂತೆ ಇನ್ನ್ಯಾರಾದರು ಮದುವೆಯಾಗುವವರಿದ್ದರೆ, ಮದುವೆಯಾಗು (ನನ್ನಡ್ಡಿಯೇನಿಲ್ಲ) ಎಂದು ಉತ್ತರಿಸುತ್ತಾನೆ. ಗರ್ಭಿಣಿ ಶಾಂತ ಸಮಾಜದ ಕಟ್ಟಳೆಗಳಿಗೆ ಹೆದರಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಇಲ್ಲಿ ಮೂವರಿಗೂ 'ಪುನರ್ವಿವಾಹದ' ಬಗ್ಗೆ ಒಲವಿದ್ದರೂ ಯಾರೂ ವಿವಾಹ ಆಗಲಿಲ್ಲ. ಆಕಸ್ಮಿಕವಾಗಿ ಅವರಿಗೆ (ವಿವಾಹ) ಪುನರ್ವಿವಾಹ ಆದರೂ ದುರಂತ ಬದುಕು ಮಹಿಳೆಯ ಪಾಲಿಗೆ ಮೀಸಲಾಗಿತ್ತು. ಇಲ್ಲಿ ಲೇಖಕಿ ಆದರ್ಶದ ಗುರಿಯನ್ನು ಇಟ್ಟುಕೊಂಡು ನೋಡದೆ ಸಮಾಜದ ವಸ್ತು ನಿಷ್ಠವಾದ ನೆಲೆಯಿಂದ ನೋಡಿದ್ದಾರೆಂದು ಹೇಳಬಹುದು.

ಹೀಗೆ ವಿವಿಧ ರೀತಿಯ ಬಾಲವಿಧವೆಯರನ್ನು ಗೌರಮ್ಮನವರು ಪರಿಚಯಿಸಿದ್ದಾರೆ. ನಿಜವಾಗಿಯೂ ಗೌರಮ್ಮನವರ ಕಾಳಜಿ ಇರುವುದು ಲಿಂಗ ತಾರತಮ್ಯದ ರಾಜಕಾರಣದ ಮೇಲೆ. ಪಿತೃ ಪ್ರಧಾನತೆಯಲ್ಲಿ ಮಹಿಳೆಯನ್ನು ಪುರುಷರ ಕಡೆಗೆ ಕಳುಹಿಸುವ ಈ ಮದುವೆ ಎಂಬ ಬಂಧನದ ಸಂಕೋಲೆಯಲ್ಲಿ ಅವಳನ್ನು ಬಂಧಿತಳನ್ನಾಗಿ ಮಾಡಿಕೊಳ್ಳಬೇಕೆಂದು, ಆದರೆ ಒಂದು ವಿವಾಹದಿಂದಲ್ಲೇ ಇಷ್ಟೆಲ್ಲಾ ಪರಿತಪಿಸುತ್ತಿರುವ ಈ ಮಹಿಳೆಯರು, ಇನ್ನು ಎರಡನೆ ವಿವಾಹದಿಂದ ಜೀವನವನ್ನು ಸಂತೃಪ್ತಿಯಿಂದ ಇಟ್ಟುಕೊಳ್ಳಬಹುದೇ? ಆದರೆ, ಸಂತೃಪ್ತಿಯ ಬದುಕು ಸಮಾಜದ ಎಲ್ಲೆಡೆ ಕಾಣಿಸಿಕೊಳ್ಳಬೇಕು ಎಂಬುದು ಲೇಖಕಿಯವರ ಆಶಯ. ಆದರೆ ಈ ಆಶಯ 'ಕೈಗೆ ಎಟುಕದ ಹಣ್ಣು' ಎಂದೇ ಹೇಳಬಹುದು. ಇಂತಹ ದುಃಸ್ಥಿತಿಯಲ್ಲಿ ಇರುವ ಸ್ತ್ರೀಯರನ್ನು ವಿವಾಹವಾಗಲು ಮಾನವೀಯ ಅಂತಕರಣದ ನೆಲೆಯಲ್ಲಿ ಯಾರು ಮುಂದೆ ಬರುತ್ತಾರೆ. ಇಂದಿನ ಯುವಕರು ಮುಂದೆ ಬಂದು ಒಂದು ಉತ್ತಮವಾದ ವ್ಯವಸ್ಥಿತ ಸಮಾಜವನ್ನು ಸೃಷ್ಟಿ ಮಾಡಬೇಕು ಎಂಬುದೇ ಗೌರಮ್ಮನವರ ಆಶಯ ಹಾಗೂ ಒತ್ತಾಸೆ.

ಗೌರಮ್ಮನವರು ಸ್ತ್ರೀ ಎಲ್ಲ ಕ್ಷೇತ್ರದಲ್ಲೂ ಸಮಾನತೆಯನ್ನು ಸಾಧಿಸಬೇಕು ಎಂಬ ಅಗಾಧವಾದ ಆಸೆಯನ್ನು ಪೂರೈಸಿಕೊಳ್ಳಲು ಕಾಗದ ಮುಖಾಂತರ ಕತೆಯನ್ನು ಪ್ರಾರಂಭಿಸಿ ಸಾಹಿತ್ಯದಲ್ಲೇ ಒಂದು ಹೊಸ ಮಾದರಿಯ ಶೈಲಿಯನ್ನು ಕಂಡುಕೊಳ್ಳುತ್ತಾರೆ. ಅವರ 'ನಾಲ್ಕು ಘಟನೆಗಳು' ಎಂಬ ಕಾಗದದ ಮುಖೇನ ಕತೆಯನ್ನು ನೋಡಿದಾಗ, ರಾಮುವಿನ ಮುಖಾಂತರ ಸೀತೆಗೆ ಕಾಗದದಲ್ಲಿ ವಿಚಾರವನ್ನು ತಿಳಿಸುತ್ತಾನೆ. ಏನೆಂದರೆ. ಎಲ್.ಎ. (L.A)

ಯಲ್ಲಿ ಓದಬೇಕಾದರೆ ಹೆಣ್ಣು ಮಕ್ಕಳಿಗೂ ತಂದೆಯ ಆಸ್ತಿಯಲ್ಲಿ ಪಾಲು ದೊರೆಯಬೇಕೆಂಬ ಹಕ್ಕಿನ ಮಸೂದೆಯನ್ನು ತರಬೇಕು ಎಂದು ಹಾಗೂ ಮಧ್ಯರಾತ್ರಿಯಲ್ಲಿ ಒಂದು ನಿರ್ಭಾಗ್ಯ ಹೆಣ್ಣು ತನ್ನ ಮಗುವಿನ ಜೊತೆ ಮನೆ ಬಿಟ್ಟು ಅವರ ಅತ್ತೆ ಹೊರಡಿಸಿದ ಪ್ರಸಂಗ, ಇದನ್ನು ನೋಡಿ ರಾಮು ಮಹಿಳೆಯರಿಗೆ ಆರ್ಥಿಕ ಸ್ವಾತಂತ್ರತೆಯನ್ನು ಕೊಟ್ಟಾಗ ಮಾತ್ರ ಹೆಣ್ಣು ನಿರ್ಭಯವಾಗಿ ಬದುಕ ಬಹುದು. ಇದಕ್ಕೆ ಬೇಕಾದ ಒಂದು ಪೂರಕ ವ್ಯವಸ್ಥೆಯನ್ನು ಜಾರಿಗೆ ತರಬೇಕು ಎಂಬುದು ಗೌರಮ್ಮನವರ ಅಭಿಪ್ರಾಯ.

ಸಮಾಜಮುಖಿ ಧೋರಣೆಯುಳ್ಳ ಕಥೆಯನ್ನು ಸಹಾ ಲೇಖಕಿಯವರು ನಮಗೆ ಕೊಡುತ್ತಾರೆ. ವರದಕ್ಷಿಣೆ, ವರೋಪಚಾರದ ಮಾತೇ ಇಲ್ಲದೆ ಗಾಂಧೀತತ್ವವನ್ನು ಪ್ರತಿಪಾದನೆ ಮಾಡುವುದರ ಮುಖಾಂತರ, ಒಂದು ಸುಖಿ ಸಮಾಜದ ಕಲ್ಪನೆಯನ್ನು ಕೊಡುತ್ತಾರೆ. ಪಾಪನಕತೆಯ ಮುಖಾಂತರ 'ಬಾರೋ ಸಾಧನ ಕೇರಿಗೆ ಮರಳಿ ನಿನ್ನಯ ಊರಿಗೆ' ಎಂಬ ಬೇಂದ್ರೆಯವರ ಸಾಲಿನಂತೆ, 'ಪಾಪನ ಮದುವೆ' ಕತೆಯಲ್ಲಿ ಪಾಪ ಓದಿ ವಿದ್ಯಾವಂತನಾಗಿ, ಮತ್ತೇ ಗ್ರಾಮಕ್ಕೆ ಮರಳಿ, ಅಲ್ಲಿ ಒಂದು ಹಳ್ಳಿಯ ಹುಡುಗಿಯಾದ ಲಕ್ಷ್ಮಿಯನ್ನು ಮದುವೆಯಾಗುವುದರ ಮೂಲಕ 'ಗ್ರಾಮೋದ್ಧಾರವೇ ದೇಶದ ಉದ್ಧಾರ' ಎನ್ನುವ ಮಾತಿಗೆ ಅನುಮೋದನೆಯನ್ನು ಕೊಟ್ಟ ಯುವಕನೇ ಪಾಪ ಎಂದು ಗುರುತಿಸಬಹುದು.

'ಸನ್ಯಾಸಿ ರತ್ನ' ಕಥೆಯಲ್ಲಿ ಕಥೆಯ ಹೆಸರೇ ಸೂಚಿಸುವಂತೆ ಮುಂದೆ ಭವಿಷ್ಯದಲ್ಲಿ ಸನ್ಯಾಸಿ .ಆಗಬೇಕೆಂದ ರತ್ನನ ದೃಢವಾದ ನಿಲುವು ಹೇಗೆ ಬದಲಾಗುತ್ತದೆ ಎಂಬುದನ್ನು ನೋಡಬಹುದು. ಒಬ್ಬ ಪ್ರಜ್ಞಾವಂತ ಉತ್ತಮ ಮನುಷ್ಯನಿಗೂ, ಮನಸ್ಸಿನ ಭಾವನೆಗಳು ತನ್ನ ಹಿಡಿತದಲ್ಲಿ ಸಿಕ್ಕದೆ ಹೇಗೆ ಹರಿದಾಡುತ್ತದೆ ಎಂಬುದನ್ನು ತೋರಿಸುತ್ತದೆ. ಇಲ್ಲಿ ಸನ್ಯಾಸಿ ರತ್ನ ತನ್ನ ಕಾರ್ಯದಲ್ಲಿ ಜಯವನ್ನು ಸಿದ್ದಿಸದೆ ವಿಫಲವಾಗುವುನ್ನೇ ನೋಡುತ್ತೇವೆ. 'ಸನ್ಯಾಸಿ ರತ್ನ' ಸಂಸಾರಿಯಾಗುವುದೇ ಈ ಕತೆಯ ವಿಶೇಷಣ. ಮತ್ತು ರಾಜ ರತ್ನನ ಗೆಳೆತನವನ್ನು ಸಹಾ ನಾವಿಲ್ಲಿ ನೋಡಬಹುದು.

'ಮರದಗೊಂಬೆ' ಎಂಬ ಕಥೆಯನ್ನು ತೆಗೆದುಕೊಂಡಾಗ ಆ ಕಥೆಯಲ್ಲಿ ಬರುವ ದಿಟ್ಟತನದ ವ್ಯಕ್ತಿತ್ವವನ್ನು ಹೊಂದಿರುವ ಶೈಲಳನ್ನು ನೋಡುತ್ತೇವೆ. ಶೈಲ–ಸೀತೆ ಇವಳ ಗೆಳೆತನ, ಮಾನವನ ಬದುಕಿನಲ್ಲಿ ಎಷ್ಟು ಮಹತ್ವದೆಂಬುದನ್ನು ಮನಗಾಣಿಸುತ್ತಾರೆ. ಶೈಲ ಮರದಗೊಂಬೆಯನ್ನು ಮದುವೆಯಾಗಿ ಮನುಷ್ಯನ ವ್ಯವಹಾರವನ್ನು ಕಲಿಸಬೇಕು ಎಂದು, ಹೆಣ್ಣುಮಕ್ಕಳ ಎಳೆತನದ ಹುಡುಗಾಟಿಕೆ, ಚೇಷ್ಟೆ ಇವುಗಳೆಲ್ಲಾ ಸೇರಿ ಪ್ರೇಮಮಯವಾದ ಒಂದು ಕುಟುಂಬ ಪರಿಣಮಿಸಿದನ್ನು ಗೌರಮ್ಮನರು ನವಿರಾದ ಭಾಷೆಯಲ್ಲಿ ಅಭಿವ್ಯಕ್ತ ಪಡಿಸಿದ್ದಾರೆ. ಸೀತೆ ಶೈಲೆಯ ಗೆಳೆತನ ಕೇವಲ ಹುಡುಗಿಯಾದಮೇಲೆ ಮಾತ್ರವಲ್ಲ, ಸ್ನೇಹ ಮದುವೆಯಾಗಿ ಸಂಸಾರಸ್ಥರಾದ ಮೇಲೆಯೂ ಅದು ಹೇಗೆ ಮುಂದುವರೆಯುತ್ತದೆ ಎಂಬುದನ್ನು ಮತ್ತು ಅದರ ಜೊತೆಗೆ ಕಥೆಯ ಸ್ವರೂಪ, ಹಾಸ್ಯ, ಒಂದು ಶೈಕ್ಷಣಿಕ ಪರಿಸರದ ನೆಲೆಯಲ್ಲಿ ಕತೆ ಹೇಗೆ ಸಾಗುತ್ತದೆ ಎಂಬುದನ್ನು ಗೌರಮ್ಮನವರ ಕಥೆಯಲ್ಲಿನ ಕಲಾವಂತಿಕೆಯನ್ನು ನಾವು ಇಲ್ಲಿ ಅಭಿವ್ಯಕ್ತಪಡಿಸಬಹುದು.

'ಯಾರು' ಎನ್ನುವ ಕತೆಯಲ್ಲಿ ಮಹೇಶ ಮತ್ತು ವಸಂತನ ಒಡನಾಡಿಯಲ್ಲಿ

ಸಂಶಯದ ಎಳೆ ಸೋಂಕಿಸುತ್ತದೆ. ಇಬ್ಬರ ನಡುವೆ ಪವಿತ್ರವಾದ ಗೆಳೆತನವೆ ಮುರಿಯುವ ಹಂತಕ್ಕೆ ಬರುತ್ತದೆ. ಆಗ ಮಹೇಶ ಈ ಕತೆಯ ಶೀರ್ಷಿಕೆಯಾದ 'ಯಾರು' ಎನ್ನುವ ಪದವನ್ನು ತೆಗೆದುಕೊಂಡು ಕಾಗದದಲ್ಲಿ ಇಲ್ಲಿಯ ತನಕ ಯಾರಿಗೂ ಹೇಳದೆ ಇರುವ ಸತ್ಯವನ್ನು ವಸಂತನಿಗೆ ಕಾಗದದ ಮುಖಾಂತರ ತಿಳಿಸುತ್ತಾನೆ. ತನ್ನ ತಂಗಿಯ ದುರಂತ ಕಥೆಯನ್ನು ಹೇಳಿ ಈಗ ಅವಳು ಮಿಸ್. ಅರುಣಾದೇವಿ ಎಂದು ಹೇಳಿತ್ತಾನೆ. ತನ್ನ ಬಗ್ಗೆ ತಪ್ಪಾಗಿ ಭಾವಿಸಿದ ತಪ್ಪಿಗೆ ವಸಂತ ಪಶ್ಚಾತ್ತಾಪ ಪಡುತ್ತಾನೆ. ಇದರ ಮುಖಾಂತರವೇ ಅವರ ಸ್ನೇಹ ಮತ್ತುಷ್ಟು ಬಲಗೊಳ್ಳುತ್ತದೆ ಎಂಬುದನ್ನು ಗೌರಮ್ಮನವರು ವಿವರಿಸುತ್ತಾರೆ. ಅಷ್ಟೆ ಅಲ್ಲದೆ ಇಲ್ಲಿ ಬರುವ ಪಾಪನ ಗಂಡ, ರಾಮರಾಯನ ಬಗ್ಗೆ ಯಾವುದೇ ದ್ವೇಷ ಇಲ್ಲ, ಆದರೆ, ಅಲ್ಲಿನ ಸಮಾಜದ ವ್ಯವಸ್ಥೆಯ ಬಗ್ಗೆ ಲೇಖಕಿಯರಿಗೆ ಅಸಮಾಧಾನವಿದೆ. ಸಾಮಾಜಿಕ ಸಂಪ್ರದಾಯವನ್ನು ಪ್ರಶ್ನಿಸುವ ಸುಧಾರಣೆಯ ಬುದ್ಧಿಯಿದೆ.

'ನನ್ನ ಮದುವೆ', 'ಆಹುತಿ', 'ಒಂದು ಚಿತ್ರ', ಈ ಎಲ್ಲ ಕತೆಗಳಲ್ಲಿಯೂ ಕಥೆಯ ನಾಯಕ, ಇಂಗ್ಲೇಂಡ್‌ನಲ್ಲಿ ಓದಬೇಕು ಎಂಬ ಆಸೆಯನ್ನು ಹೊತ್ತುಕೊಂಡು ಬಂದವರು. 'ನನ್ನ ಮದುವೆ' ಯಲ್ಲಿ ಬರುವ ರಾಮು ಉನ್ನತ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೋಗಬೇಕೆಂಬ ಆಸೆಯನ್ನು ನಿವೇದಿಸುತ್ತಾನೆ. ಆದರೆ ವರದಕ್ಷಿಣೆಯನ್ನು ತೆಗೆದು ಕೊಳ್ಳುವುದು ತಪ್ಪು ಎಂದು ರಾಮುವೇ ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದಾಗ, ಮಾತುಕೊಟ್ಟಿದ್ದು, ಸಮಾಜದಲ್ಲಿ ನಡೆಯುವ ಕಠೋರ ವ್ಯವಹಾರವನ್ನು ಆತ ಖಂಡಿಸಿದ್ದು, ಈಗ ಆತ್ಮ ಗೌರವವನ್ನು ಕಾಯ್ದು ಕೊಳ್ಳಲೆ ಅಥವಾ ಆಸೆಯನ್ನು ಪೂರೈಸಿಕೊಳ್ಳಲೇ ಎಂಬುದರ ಬಗ್ಗೆ ಚಿಂತಿಸುತ್ತಿದ್ದನು. ಆದರೆ, ರಾಮುವಿಗೆ ಎರಡು ಪ್ರಿಯವಾದ ವಿಚಾರಗಳೇ, ಆದರೆ ವಿಶಾದದ ವಿಚಾರ ಎಂದರೆ ಮದುವೆ ಮಂಟಪದಲ್ಲಿ ತನ್ನ ಹೆಂಡತಿ 'ಶಾರಿ' ಕುರುಡಿ ಎಂದು ಗೊತ್ತಾಗಿದ್ದು. ನಮ್ಮ ಆರ್ಥಿಕ ಪರಿಸ್ಥಿತಿ ಮೀರಿ ನಮ್ಮ ಆಸೆ ಪೂರೈಸಿಕೊಳ್ಳುವುದಕ್ಕೆ ಹೋದರೆ ಈ ರೀತಿಯ ಸಂಗತಿ ಗೋಚರವಾಗುತ್ತದೆ ಎಂಬುದಕ್ಕೆ ಈ ಕಥೆಯೇ ನಿದರ್ಶನ.

'ಒಂದು ಚಿತ್ರ' ಕತೆಯಲ್ಲಿ ಕತೆಯ ನಾಯಕ ನಾಯಕಿ ತಾನು ಯಾರನ್ನು ಮದುವೆಯಾಗುತ್ತೇವೆ ಎಂದು, ಹೇಗಿರುವರು ಎಂದು, ಇಬ್ಬರು ಸಹಾ ಒಬ್ಬರನ್ನು ಒಬ್ಬರು ನೋಡುವ ಕುತೂಹಲವನ್ನೇ ವ್ಯಕ್ತಪಡಿಸದೆ, ಮದುವೆಯ ಮನೆಯಲ್ಲಿಯೂ ಸಹ ಇರುತ್ತಾರೆ. ಮನುಷ್ಯನ ಜೀವನದಲ್ಲಿ ಮದುವೆಯೆನ್ನುವುದು ಎಂತಹ ಮಹತ್ವದ ಘಟನೆ, ಆದರೆ ರೋಹಿಣಿ ಮತ್ತು ಚಂದನ್ ವಿಚಾರದಲ್ಲಿ ಅದು ಸಹಾ ವ್ಯವಹಾರಿಕವಾಗಿ ಹೋಯಿತು ಎನ್ನುವ ದುರಂತವನ್ನು ಗೌರಮ್ಮನವರು ವಿವರಿಸುತ್ತಾರೆ.

ಇನ್ನು 'ಆಹುತಿ' ಕಥೆಯಲ್ಲಿ ಬರುವ ನಾಯಕ ರಘು ನಾಯಕಿ ಶಾಂತಿ, ರಘುವಿಗೆ ಲಂಡನ್ನಿನಲ್ಲಿ ವಿದ್ಯಾಭ್ಯಾಸದ ಕನಸು ಒಂದುಕಡೆ. ಮತ್ತೊಂದುಕಡೆ ಶಾಂತಿಯ ಸೌಂದರ್ಯದ ಅಂತರಾಳದ ಸೆಳೆತ. ಈ ಎರಡು ವಿಚಾರದ ಮಧ್ಯೆ, ಶಾಂತಿಯ ಕಡುಬಡತನ. ಇದರಲ್ಲಿ ಯಾವುದನ್ನು ಆಯ್ಕೆ ಮಾಡಿಕೊಂಡು ಯಾವುದನ್ನು ತ್ಯಜಿಸಲಿ ಎಂದು ತಿಳಿಯದ ರಘು ಒಂದೇ ಸಮನೇ ಆಲೋಚಿಸುತ್ತಿರುವಾಗಲೇ ಶಾಂತಿಯ ಆತ್ಮಹತ್ಯೆಯ ವಿಚಾರ ಸೀತೆಯಿಂದ ತಿಳಿಯುತ್ತದೆ. ಕೊನೆಗೆ ತನ್ನ ತಂದೆ ಮೊದಲು ತನಗೆ ತೋರಿಸಿದ ಹುಡುಗಿಯೇ ಈ ಶಾಂತಿ

ಎಂಬ ವಿಚಾರ ಗೊತ್ತಾಗುತ್ತದೆ. ತಂಗಿ ಹೇಳುವಾಗ ವಿಜಿ ಅಣ್ಣ 'ನೀನುಕೊಂದ ಹುಡುಗಿ' ವರದಕ್ಷಿಣೆಗಾಗಿ ಎಂದಾಗ ರಘು ಪಶ್ಚಾತ್ತಾಪ ಪಡುವ ಪ್ರಸಂಗವನ್ನು ನೋಡುತ್ತೇವೆ.

ಈ ಮೂರು ಮೇಲಿನ ಕತೆಗಳನ್ನು ನೋಡಿದಾಗ ಮಧ್ಯಮವರ್ಗದ ಯುವಕರಿಗೆ ವಿದೇಶದಲ್ಲಿ ವ್ಯಾಸಂಗ ಮಾಡಬೇಕು ಎಂಬ ಮನಸ್ಸಿನ ಆಸೆ, ಅವರ ಬಾಳನ್ನೇ ಯಾವ ರೀತಿಯಲ್ಲಿ ಬದಲಾಯಿಸುತ್ತದೆ ಎಂಬುದನ್ನು ಇಲ್ಲಿ ತಿಳಿಸುತ್ತದೆ. ಇದರ ದುರಂತವೇ ಆ ನಾಯಕ ನಾಯಕಿಯ ಮೇಲೆ ಆಗುವುದನ್ನು ನಾವಿಲ್ಲಿ ಕಾಣುತ್ತೇವೆ.

ಇನ್ನು ಗೌರಮ್ಮನವರು ಸಾಹಿತ್ಯಕ್ಕೆ ಹೊಸತನವನ್ನು ಕಾಗದದ ಮುಖಾಂತರ ತಂದುಕೊಟ್ಟಿದ್ದಾರೆ. ಅವರ ಕತೆಯ ಒಡಲಲ್ಲಿ ಪತ್ರಗಳಿರುವುದನ್ನು ನೋಡುತ್ತೇವೆ. 'ಒಂದು ಪುಟ್ಟ ಚಿತ್ರ', 'ಅಪರಾಧಿಯಾರು', 'ಯಾರು' 'ಮನುವಿನ ರಾಣಿ' 'ಆಹುತಿ', 'ಒಂದು ಚಿತ್ರ' ಈ ಎಲ್ಲ ಕತೆಗಳಲ್ಲಿಯೂ ಕಾಗದ ರೂಪದ ಕತೆಯನ್ನು ನಾವಿಲ್ಲಿ ಕಾಣುತ್ತೇವೆ, ಮೊದಲೇ ಚರ್ಚಿಸಿದ ನಾಲ್ಕು ಘಟನೆಗಳು ಈ ಕತೆಯ ಕಾಗದ ಪತ್ರಗಳೆಲ್ಲವು ಸಮಾಜದ ಸಾಮಾಜಿಕ ಸಮಸ್ಯೆಯನ್ನು ಚರ್ಚಿಸುವುದಕ್ಕೆ, ಮತ್ತು ನಾಯಕ ನಾಯಕಿಯರ ಪ್ರೀತಿ ಪ್ರೇಮದ ಭಾವನಾತ್ಮಕ ಸಂಬಂಧಗಳ ಬಗ್ಗೆ ಮಾತನಾಡುವುದಕ್ಕೆ, ಈ ಪತ್ರಗಳನ್ನು ಆಶ್ರಯಿಸುತ್ತಾರೆ.

ತನ್ನ ವೈಯಕ್ತಿಕವಾದ ವಿಚಾರವನ್ನು ಯಾರಲ್ಲೂ ಹೇಳದೆ ದಿನಚರಿಯ ಮೂಲಕ ಅಭಿವ್ಯಕ್ತಿಸುವ ಸರಸಿಯಂತಹವರು ತಮ್ಮ ಪ್ರೇಮದ ಸಂಗತಿಯನ್ನು ಯಾರ ಬಳಿಯಲ್ಲಿಯೂ ಹೇಳಿಕೊಳ್ಳಲಾಗದೆ, ಬದುಕುವುದಕ್ಕೂ ಸಾಧ್ಯವಾಗದೆ, ಸಾಯುವುದಕ್ಕೂ ಸಾಧ್ಯವಾಗದೆ, ಒಂದು ಕಡೆ ಪ್ರೇಮದ ಪ್ರಿಯಕರ ಮತ್ತೊಂದು ಕಡೆ ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಅಕ್ಕ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವ ಗಂಡ. ಇವರ ನಡುವೆ ಏನು ಮಾಡಲಿ, ಬಹಳ ಹಿಂದೆಯೇ ತನ್ನಬಳಿ ಇರುವ ಅಮೂಲ್ಯವಾದದ್ದನ್ನು ತನ್ನ ಪ್ರಿಯಕರನಿಗೆ ಕೊಟ್ಟಿದ್ದೇನೆ. ಈಗ ನನ್ನ ಬಳಿ ಏನಿದೆ, ಯಾವುದು ಮುಖ್ಯವೋ ಅದೇ ನನ್ನ ಬಳಿಯಲ್ಲಿ ಇಲ್ಲ. ಸಾಯಲಾರೆ, ಬದುಕಲಾರೆ, ಎಂದುಕೊಂಡು ತನ್ನ ಮನಸ್ಸಿನ ಭಾವನೆಗಳಿಗೆ ಬಲಿಯಾಗಿ, ಬದುಕಲೇಬೇಕಾದ ಸಮಾಜದ ಅನಿವಾರ್ಯತೆಯ ಸ್ಥಿತಿಗೆ ಸಿಕ್ಕಿಕೊಂಡು ಬಳಲುವ ಹೆಣ್ಣಿನ ಚಿತ್ರಣವನ್ನು ತನ್ನ ಜೀವನದ ಭಾವನೆಗಳಿಗೆ ಅನುಭವದ ವಿಚಾರಗಳೆಲ್ಲವನ್ನು ದಿನಚರಿಯಲ್ಲಿ ದಾಖಲಿಸುತ್ತಾಳೆ. ಇದು ಕತೆಗಾರ್ತಿಯ ಸಾಮಾಜಿಕ ಪ್ರಜ್ಞೆಯ ಗುರುತಾಗಿದೆ.

'ಅದೃಷ್ಟದ ಆಟ' ದ ಕತೆಯಲ್ಲಿ ಬರುವ ಮಣಿ ಲತೆಯ ಇಬ್ಬರ ನಡುವೆ ಮದುವೆಗೆ ಅಡ್ಡಿಯಾಗುವ ವಿಚಾರವೇ ಮಣಿಗೆ ದೊರೆಯದ ಕೆಲಸ. ಸಮಾಜದಲ್ಲಿ ಒಬ್ಬ ಪುರುಷನಿಗೆ ಕೆಲಸವೆನ್ನುವುದು ಎಷ್ಟು ಅನಿವಾರ್ಯವಾಗಿ ಬೇಕು ಎಂಬುದನ್ನು ಬದುಕಿನಲ್ಲಿ ಕೆಲಸವಿಲ್ಲದೆ ಇನ್ನೊಬ್ಬರ ಬಳಿ ಅವಲಂಬಿತ ಜೀವನ ನಡೆಸಬಾರದು ಎಂದು ನಾಯಕ ಮಣಿಯ ಆದರ್ಶವನ್ನು ನಾವಿಲ್ಲಿ ಗುರುತಿಸುತ್ತೇವೆ. ಆದರೆ ಇಲ್ಲಿ ಲತೆಯ ಬಳಿ ಯಾವುದೇ ಒಪ್ಪಿಗೆಯನ್ನು, ಕೇಳದೆ ಇರುವ ಸಮಾಜವನ್ನು ನೋಡಬಹುದು.

೧೯ ಪತ್ರಗಳಿರುವ ಕೆಲವು ಕಾಗದಗಳನ್ನು ನೋಡಿದಾಗ ಈ ಕತೆಯಲ್ಲಿ ಗಂಡು ಮತ್ತು ಹೆಣ್ಣಿನ ಸ್ನೇಹ ಸಂಬಂಧವನ್ನು ಮತ್ತು ಸಹೋದರಿಯ ಸಂಬಂಧವನ್ನು ಅನೈತಿಕತೆಯ

ಸಂಬಂಧ ಎಂದು ಅರ್ಥೈಸುವುದರ ಬಗೆಗಿನ ಬೇಸರವನ್ನು ನೋವನ್ನು ವಸಂತ ಮತ್ತು ಪ್ರಭೆಯರು ಪರಸ್ಪರ ಪತ್ರ ಹಂಚಿಕೊಳ್ಳುವುದು, ಈ ಕಾಗದಗಳ ಮೂಲಕವೇ 'ಅತಿಭಾವುಕತೆಯೇ' ಈ ಕತೆಯ ಪರಿಣಾಮಕ್ಕೆ ಧಕ್ಕೆಯುಂಟುಮಾಡಿದೆ.

ಗೌರಮ್ಮನವರು ಧರ್ಮ, ಶ್ರದ್ಧೆ, ಧರ್ಮಾಂಧತೆಯ ಹಿನ್ನೆಲೆಯಲ್ಲಿ ಸ್ತ್ರೀಯನ್ನು ಸಮಾಜ ನೋಡುವ ಕತೆಗಾರ್ತಿಯ ದೃಷ್ಟಿಕೋನವನ್ನು ಈ ರೀತಿ ಗ್ರಹಿಸಬಹುದು. ಧರ್ಮರಕ್ಷಕನೊಬ್ಬನಿಂದ ಅತ್ಯಾಚಾರಕ್ಕೀಡಾಗಿ, ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸುವಾಗ, ಅದೃಷ್ಟವಶಾತ್ ಬದುಕುಳಿದು ತನಗೂ ಮತ್ತು ತನ್ನ ಮಗುವಿಗೂ ಆಶ್ರಯ ನೀಡಿದವರ ಧರ್ಮಾನುಯಾಯಿಯಾಗುವ ಹಾಗೂ ಅನ್ಯಧರ್ಮ ಸ್ವೀಕರಿಸಿದ್ದಕ್ಕೆ ಸ್ವಧರ್ಮದಿಂದ ಬಹಿಷ್ಕಾರದ ಶಿಕ್ಷೆಗೊಳಗಾಗುವ ಹೆಣ್ಣಿನ ದುರಂತ ಚಿತ್ರಣವಿದೆ. ಹಾಗಿದ್ದರೆ ಈ ಕತೆಯಲ್ಲಿ 'ಅಪರಾಧಿಯಾರು' ಎಂದು ಕತೆಯೇ ಸೂಚಿಸುವಂತೆ ಪಾರ್ವತಿ ರಜಿಯಾ ಆಗುವುದಕ್ಕೆ ಹೊಣೆ ಯಾರು? ಅವಳೇ? ರಾಯರೆ? ಅಥವಾ ನಮ್ಮ ಕ್ರೂರ ಕಠೋರ ಸಮಾಜವೇ ಎಂದು ಕೇಳುವ ಪ್ರಶ್ನೆಗಳಲ್ಲಿ ಹೆಣ್ಣು ಗಂಡನ್ನು ನೋಡುವ ದೃಷ್ಟಿಕೋನದಲ್ಲಿನ ಧರ್ಮ ರಾಜಕಾರಣವನ್ನು ಈ ಕತೆಯಲ್ಲಿ ಮನಗಾಣಬಹುದು.

ಮತ್ತೊಂದು ಭಿನ್ನವಾದ ಕತೆ. ಅಂತರ ಧರ್ಮೀಯರಾಗಿದ್ದು ಯಾವ ಅಡ್ಡಿ ಆತಂಕಗಳು ಇಲ್ಲದೆ ನೆರವೇರಿರುವ ಮದುವೆಯ ಚಿತ್ರಣವನ್ನು ಈ 'ಮುನ್ನಾದಿನ' ಕತೆಯಲ್ಲಿ ನೋಡುತ್ತೇವೆ. [1]"ಮಹಾತ್ಮ ಗಾಂಧೀಜಿಯವರು ಹಿಂದೂ–ಮುಸ್ಲಿಂ ಐಕ್ಯತೆಯನ್ನು ಬೋಧಿಸಿದ್ದಾರೆ ಅದನ್ನು ಕಾರ್ಯತಃ ಆಚರಣೆಗೆ ತಂದವನು ಕಾಡಮೇಸ್ತ್ರಿ"[1] ಹೀಗೆ ಕಾಡನ ಜೀವನ ಸುಖಾಂತ್ಯವಾಗುತ್ತದೆ. ಗೌರಮ್ಮನವರು ಬದುಕಿದ್ದರೆ, ತೃತೀಯಾಂಕದಲ್ಲಿ ಕಾಡನಕತೆ ಏನಾಗುತ್ತಿತ್ತೋ! ಆದರೆ ಈಗಿರುವ ಕತೆಯಷ್ಟನ್ನೇ ಗಮನಿಸಿ ಸ್ತ್ರೀ ಸಂವೇದನೆಯ ನೆಲೆಯಿಂದ ವಿವೇಚಿಸಿದಾಗ ಸಾಮಾಜಿಕ, ನೀತಿ ನಿಯಮಗಳಿಗೆ ಧಾರ್ಮಿಕ ಸಂಪ್ರದಾಯ ಕಟ್ಟುಪಾಡುಗಳಿಗೆ ಹೆಣ್ಣೆ ಹೆಚ್ಚಿನ ನಿರ್ಬಂಧಕ್ಕೆ ಒಳಗಾಗುತ್ತಾಳೆ ಎಂದು ಗೌರಮ್ಮನವರು ಗ್ರಹಿಸುವ ಬಗೆಯನ್ನು ನೋಡುತ್ತೇವೆ. ಏಕೆಂದರೆ ಇಲ್ಲಿ ಹುಸೇನ್ ಬೀ ಜಾತಿ ಬದಲಾಯಿಸುವುದಿಲ್ಲ. ಮೇಸ್ತ್ರಿ ಜಾತಿ ಬದಲಾಯಿಸಿ ಹುಸೇನ್ ಬೀಯನ್ನು ನಿಖಾಮಾಡಿಕೊಂಡು ಉರುಫ್ ಇಸ್ಮಾಯಿಲ್ ಕಾಡಕಾಕನಾಗುತ್ತಾನೆ.

'ಹೋಗಿಯೇ ಬಿಟ್ಟಿದ್ದ' ಇದು ಸಹಾ ಅಂತರ್ ಧರ್ಮೀಯ ಕಥೆ ನಿರ್ಮಲವಾದ ಪ್ರೀತಿಗೆ ಲೌಕಿಕ ಜೀವನದಲ್ಲಿ ಜಾತಿ–ಧರ್ಮಗಳ ಅಡ್ಡಿಯಿದ್ದರೂ ಸಾವಿನಲ್ಲಿ ಯಾವ ಅಡಚಣೆಯೂ ಇರಲಾರದೆಂಬ ಧೋರಣೆ ಈ ಕತೆಯಲ್ಲಿ ಇದೆ.

ಈ ಕತೆಯ ನಿರೂಪಕ ಲತೀಫಾಳನ್ನು ಪ್ರೀತಿಸಿ ಅವರ ಪ್ರೀತಿಗೆ ಜಾತಿ ಅಡ್ಡ ಬಂದಾಗ ಲತೀಫಾಳನ್ನು ತಾನೆ ಕೊಂದು, ಜಾತಿ ಬಂಧನದ ಆಚೆ ನಿಂತು ತೂಗುತ್ತಿದ್ದ ಲತೀಫಾಳೆಡೆಗೆ ಸೇರಲು ಹತ್ತಿರದಲ್ಲೇ ಇದ್ದ ಬಾವಿಗೆ ಹಾರಿ ಪ್ರಾಣ ಬಿಡಲು ಹೋದ ನಿರೂಪಕ ಅಲ್ಲಿಯೇ ಸಾವನ್ನಪ್ಪದೆ ಬದುಕಿ ಉಳಿದ ನಂತರ ಹುಚ್ಚನೆನ್ನಿಸಿಕೊಂಡು ೩೦ ವರ್ಷಗಳ ಕಾಲ ಹುಚ್ಚರ ಆಸ್ಪತ್ರೆಯಲ್ಲಿ ಕಾಲ ಕಳೆದ ಎಂದು ಕಥೆಯನ್ನು ಹೇಳುತ್ತಿದ್ದ ನಿರೂಪಕ, ರೈಲಿನ ಕಿಟಕಿಯಿಂದ

---

[1]ಡಾ. ಗೀತಪ್ರಸಾದ್ ಆಧುನಿಕ ಮಹಿಳಾ ಅಭಿವ್ಯಕ್ತಿ. ಧಾತ್ರಿ ಪುಸ್ತಕ, ಬೆಂಗಳೂರು ಪುಟ : ೧೬೧

ಕೆಳಗೆ ಹಾರಿದ ಖಿಂವರ್ಷಗಳಿಂದ ದಾರಿಕಾಯುತ್ತಿದ್ದ ಲತೀಫಾಳೆಡೆಗೆ ಹೋಗಿಯೇಬಿಟ್ಟ. ಸಾವಿನಲ್ಲಿ ಒಂದಾದ ಪ್ರೇಮಿಗಳು ಎಂದು ಗೌರಮ್ಮನವರು ಚಿತ್ರಿಸಿದ್ದಾರೆ.


ಪಾರಮರ್ಶನ ಗ್ರಂಥಗಳು :

ಡಾ. ಗೀತಪ್ರಸಾದ್ ಆಧುನಿಕ ಮಹಿಳಾ ಅಭಿವ್ಯಕ್ತಿ, ಧಾತ್ರಿ ಪುಸ್ತಕ, ಬೆಂಗಳೂರು ಪುಟ : ೧೫೬ ೧೬೧. ೧೬೪, ೧೬೫, ೧೬೯, ೧೭೩, ೧೭೪, ೧೭೫

ಡಾ. ಎಸ್.ವಿ. ಪ್ರಭಾವತಿ, ಕನ್ನಡ ಸಾಹಿತ್ಯ ಮತ್ತು ಸ್ತ್ರೀ ವಾದಿ ಚಿಂತನೆ, ಆಧುನಿಕ ಕನ್ನಡ ಮಹಿಳಾ ಕಥಾ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಟ : ೯೩

ಆಕರ ಗ್ರಂಥ :

ಕೊಡಗಿನ ಗೌರಮ್ಮ : ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ಪುಟ : ೧–೨೦, ೩೨–೩೮, ೧೬೬–೧೭೩, ೧೭೪–೧೮೫, ೨೯೦–೨೨೬,

## ಅಧ್ಯಾಯ–೨.೫ ಗೌರಮ್ಮನ ಕಥೆಗಳಲ್ಲಿ ಸ್ತ್ರೀಯ ಅಸಹಾಯಕತೆ

ಕನ್ನಡದ ಪ್ರಥಮ ಕಥೆಗಾರ್ತಿ ಕೊಡಗಿನ ಗೌರಮ್ಮ ಭಾರತದಾದ್ಯಂತ ಸ್ವಾತಂತ್ರ್ಯ ಆಂದೋಲನ ತೀವ್ರಗತಿಯಲ್ಲಿ ವ್ಯಾಪಿಸಿಕೊಂಡಂತಹ ಕಾಲದಲ್ಲಿ ಬರವಣಿಗೆಯಲ್ಲಿ ತೊಡಗಿಸಿಕೊಂಡರು. ಸ್ತ್ರೀಯರ ಬದುಕನ್ನು ಮನಮುಟ್ಟುವಂತೆ ಬಣ್ಣಿಸಿ ಅವರನ್ನು ಸಮಾಜದಿಂದ ಮೇಲೆತ್ತಲು ಸಾಹಿತ್ಯದಲ್ಲಿ ನಾನಾ ರೀತಿಯ ಪ್ರಯತ್ನಗಳನ್ನು ಕೃಷಿ ಮಾಡಿ ಅದಕ್ಕೆ ಅವರು ಪರಿಹಾರವನ್ನು ಸೂಚಿಸಿದರು. ತಮ್ಮ ಬರವಣಿಗೆಯಲ್ಲಿ ಸ್ತ್ರೀ ಸಮಸ್ಯೆಗೆ ಪರಿಹಾರವನ್ನು ಸೂಚಿಸಿದ ಗೌರಮ್ಮನವರು ಮಾತ್ರ ಅದ್ಯಾಕೋ ಮಹಿಳೆಯ ಪರಾವಲಂಬತೆಯನ್ನು ಮಾತ್ರ ಒಪ್ಪಿಕೊಂಡೆ ಕತೆಗಳನ್ನು ರಚಿಸಿದ್ದಾರೆ.

ಇವರ ಕಥೆಯಲ್ಲಿ ಬರುವ ಪಾತ್ರಗಳು ಮೂಲಕ ಎಲ್ಲೂ ಭಾವಾವೇಶಕ್ಕೆ ಎಡೆಗೊಡದೆ, ವಾಸ್ತವತೆಯ ನೆಲೆಗಟ್ಟಿನ ಮೇಲೆ ನಿಂತು ಮಹಿಳೆಯರ ಸಮಸ್ಯೆಗಳಿಗೆ ಸಲಹೆಗಳನ್ನು ಮತ್ತು ಪರಿಹಾರಗಳನ್ನು ನೀಡಲು ಪ್ರಯತ್ನಿಸಿದರು. ಗೌರಮ್ಮನವರಲ್ಲಿ ಕಾಣುವ ಮುಖ್ಯ ಲಕ್ಷಣ ಎಂದರೆ, 'ಇವರ ಸಮಕಾಲೀನವರಾದ ತಿರುಮಲಾಂಬ ಹಾಗೂ ಆರ್.' ಕಲ್ಯಾಣಮ್ಮ ನವರಂತೆಯೇ ಸ್ವತಃ ವಿಧವೆ ಸ್ಥಾನದಲ್ಲಿದ್ದುಕೊಂಡೇ ಪಾತ್ರಗಳನ್ನು ಕ್ರಿಯಾಶೀಲವಾಗಿ ಚಿತ್ರಿಸಿದ್ದಾರೆ ಹೊರತು, ಉದ್ವಿಗ್ನರಾಗುವುದಿಲ್ಲ.

ಬೇಂದ್ರೆಯವರು ಕೊಡಗಿನ ಗೌರಮ್ಮನವರ ಸಾಹಿತ್ಯ ಕೃಷಿಯನ್ನು ಮನಸಾರೆ ಮೆಚ್ಚಿ ಹಾರೈಸಿದ್ದಾರೆ. ಗೌರಮ್ಮನವರ 'ಕಂಬನಿ' ಸಂಕಲನದ ಮುನ್ನುಡಿಯಲ್ಲಿ [೧]"ಕತೆಗಳ ಕಟುತ್ವವಿದ್ದರೂ ರೊಚ್ಚಿಲ್ಲ. ಸದುದ್ದೇಶ ಲೇಖನ ಸೂಚನೆಯಿದ್ದರೂ ಅವಾಸ್ತವದ ಆರ್ಭಟನೆಯಿಲ್ಲ, ಕಲೆಯು ನೈಜವನ್ನು ಮರೆಮಾಚಿಲ್ಲ. ಎಲ್ಲಿಯೂ ಹೆಣ್ಣಿನ ಹೃದಯದ ಸಾಕ್ಷಿಯನ್ನು ಸಾರುವ ಈ ಕಥಾಗುಚ್ಛವು 'ಶ್ರೀನಿವಾಸ' 'ಆನಂದರ' ಕತೆಗಳನ್ನು ಓದಿದ ವಾಚಕರಿಗೆ ಮನೋವಿಶ್ಲೇಷಣಾತ್ಮಕ ಕತೆಗಳ ಮಾದರಿಯಾಗಿ ಹೃದಯಂಗಮ ವಾಗುವುದೆಂದು ನಾನು ನಂಬಿದ್ದೇನೆ ಎಂದು ಹೇಳುತ್ತಾರೆ."[೧] ಹಾಗಿದ್ದರೆ ಗೌರಮ್ಮನವರ ಸ್ತ್ರೀ ಅಸಹಾಯಕತೆಯ ಸನ್ನಿವೇಶಗಳನ್ನು ಗುರುತಿಸುವುದಾದರೆ,

ಗೌರಮ್ಮನವರ ಕಥೆಗಳಲ್ಲಿ ವಿಧವೆಯರ ಸಮಸ್ಯೆಗಳು ವರದಕ್ಷಿಯ ಪೀಡೆ, ಹೆಣ್ಣಿನ ಪರಾವಲಂಬನೆ, ಇಂಥ ಮಹಿಳೆಯರನ್ನು ಕಾಡುವ ಅನೇಕ ಸೌಭಾಗ್ಯಗಳನ್ನು ವಸ್ತುವಾಗಿಟ್ಟು ಕೊಂಡು ಗೌರಮ್ಮನವರು ಕಥೆಯನ್ನು ಬೆಳೆಸುತ್ತಾರೆ.

'ಒಂದು ಪುಟ್ಟ ಚಿತ್ರ' ಬಾಲವಿಧವೆಯ ಬವಣೆಯನ್ನು ತಿಳಿಸುತ್ತದೆ. ಶಾಂತ ಎಂಬ ಮುಗ್ಧ ಹುಡುಗಿಯು ರಘು ಎಂಬ ತರುಣನ ವಂಚನೆಗೆ ಸಿಕ್ಕಿ ಗರ್ಭಿಣಿಯಾಗಿ ಆತ್ಮಹತ್ಯೆ ಮಾಡಿಕೊಳ್ಳುವಂತ ಬಾಲ ವಿಧವೆಯಾದ ಶಾಂತಳಂಥ ಪಾತ್ರವನ್ನು ನಾವಿಲ್ಲಿ ಕಾಣಬಹುದು. ಇಂತಹ ಬರಹಗಳ ರಚನೆಯನ್ನು ಅನೇಕ ಲೇಖಕರು ಲೇಖಕಿಯರು ನೀಡಿರಬಹುದಾದರೂ. ಗೌರಮ್ಮನವರು ಮಾತ್ರ ಮಹಿಳೆಯೊಬ್ಬಳನ್ನು ತಮ್ಮ ನಯವಾದ ಮಾತುಗಳಿಂದ

---

[೧] ಡಾ॥ ಗೀತಾ ಪ್ರಸಾದ್, ಆಧುನಿಕ ಮಹಿಳಾ ಅಭಿವ್ಯಕ್ತಿ 'ಧಾತ್ರಿ ಪುಸ್ತಕ, ಬೆಂಗಳೂರು. ಪುಟ– ೪೧

ವಂಚಿಸುತ್ತಿರುವ ಪುರುಷನನ್ನು ಖಂಡಿಸುವ ರೀತಿ ಮಾತ್ರ ಬಹಳ ವಿಚಾರಾತ್ಮಕವಾಗಿದೆ. ಹಾಗಿದ್ದರೆ ಶಾಂತಳೇ ಅಪರಾಧಿಯೇ? [೨]"ಅಪರಾಧವು ಕೇವಲ ಹೆಂಗಸಿನದೇ? ಶಾಂತೆಯನ್ನು ಕೆಟ್ಟದಾರಿಯಲ್ಲಿ ಕರೆದುಕೊಂಡ ರಘು, ಸಮಾಜದಲ್ಲಿ ಮತ್ತೊಬ್ಬಳನ್ನು ಅದೇ ದಾರಿಯಲ್ಲಿ ಕರೆದುಕೊಂಡು ಹೋಗಲು ಪ್ರಯತ್ನಿಸುತ್ತಿರಬೇಕು. ಅಥವಾ ಕರೆದುಕೊಂಡು ಹೋಗುತ್ತಿರಲು ಬಹುದು. ಇಂತಹ ಪುರುಷನಿಗೆ ಶಿಕ್ಷೆ ಎನ್ನುವುದೇ ಇಲ್ಲ. ಏಕೆಂದರೆ ಆಚಾರದ ಅಧಿಕಾರ ಅಬಲೆಯರ ಮೇಲೆಯೆ"[೨] ಎಂದು ಗೌರಮ್ಮನವರು ಕೇಳಿರುವ ಈ ಕೊನೆಯ ವಾಕ್ಯವನ್ನು ಓದಿದರೆ ಅದರಲ್ಲಿ ಅಡಗಿರುವ ವ್ಯಂಗ್ಯವನ್ನು ಗಮನಿಸಬಹುದು ಮತ್ತು ಮಹಿಳೆಯರ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಬಹುದು. ಇಂತಹ ಸ್ತ್ರೀಯ ಅಸಹಾಯಕತೆಯ ಸ್ಥಿತಿಯು ಶಾಂತಳದಾಗಿತ್ತು. ಇಲ್ಲಿ ನಾವು ಶಾಂತಳ ಮನೋಭಾವವನ್ನ ನೋಡಿದರೆ, ತಾನು ಪ್ರೀತಿಸುತ್ತಿದ್ದ ರಘುವಿನ ಮೇಲೆ ಎಷ್ಟೊಂದು ಪ್ರೀತಿಯನ್ನು ಇಟ್ಟಿದ್ದಾಳೆಂದರೆ, 'ಕೋಪಿಸಿ ಕೊಳ್ಳಬೇಡ ರಘು' ಎಂದು ಕೇಳುತ್ತಾಳೆ. ಹಾಗೆ ಕೇಳುವುದರ ಮೂಲಕ ತಪ್ಪನ್ನು ರಘುವೇ ಮಾಡಿದರು ಕ್ಷಮೆಯನ್ನು ಯಾಚಿಸುತ್ತಿರುವಂತಿದೆ. ಶಾಂತಳನ್ನು ಈ ಸನ್ನಿವೇಶದಲ್ಲಿ ನೋಡಿದರು ಅವಳ ಅಸಹಾಯಕತೆಯು ಇಲ್ಲಿ ಮನದಟ್ಟಾಗುತ್ತದೆ.

ಆದರೆ ರಘು ಮಾತ್ರ ತಾನು ಏನೂ ತಿಳಿಯದವನಂತೆ ನಟನೆ ಮಾಡುತ್ತಾನೆ. ರಘುವಿಗೆ ತನ್ನ ಸ್ಥಿತಿ ಹೀಗಿದೆ ಎಂದು ಶಾಂತ ಪತ್ರದ ಮುಖಾಂತರ ತಿಳಿಸುತ್ತಾಳೆ. ಅದಕ್ಕೆ ತನ್ನ ಮನೆಯ ಕೆಲಸದ ಹುಡುಗಿಯ ಉದಾಹರಣೆಯನ್ನು ನೀಡುತ್ತಾಳೆ. ಅದಕ್ಕೆ ರಘು ಮಾನವೀಯತೆಯ ಲವಲೇಶವು ಇಲ್ಲದೆ ವ್ಯಾಘ್ರ ಮನಸ್ಸಿಗನಾಗಿ [೩]"ನಿನ್ನನ್ನು ನಾನು ಕೊಚ್ಚೆಗೆ ನೂಕಿದ್ದೇನೆ. ನಿನಗೆ ಬೀಳುವ ಆಸೆ ಇರುವುದಕ್ಕೆ ಅಲ್ಲವೇ ನಾನು ನೂಕಿದ್ದು"[೩] ಎಂದು ಹೇಳುತ್ತಾ ನಿನ್ನನ್ನು ಇನ್ನಾರಾದರೂ ಮದುವೆಯಾಗುವವರಿದ್ದರೆ ಮದುವೆಯಾಗು ನನ್ನಡ್ಡಿಯೇನೂ ಇಲ್ಲ ಎಂದು ಹೇಳುತ್ತಾನೆ ಆ ಮುಖಾಂತರ ಎಂತಹ ಕಠೋರ ಮನುಷ್ಯ ಈತ ಎಂದು ಅನ್ನಿಸುತ್ತದೆ.

ರಾಕ್ಷಸ ಸ್ವರೂಪದ ರಘು ಮತ್ತು ಅಸಹಾಯಕಳಾದ ಶಾಂತ ಈ ಎರಡು ಪಾತ್ರಗಳನ್ನು ನೋಡಿದರೆ, ಈ ಎರಡೂ ಪಾತ್ರಕ್ಕೂ ವ್ಯತಿರಿಕ್ತವಾಗಿ ರಾಜ ಮತ್ತು ನಾನ ಪಾತ್ರವನ್ನು ಕಾಣುತ್ತೇವೆ. ಇಲ್ಲಿ ನಾನ ರಾಜನ ಆಪ್ತಸ್ನೇಹಿತೆ, ಇಲ್ಲಿ 'ನಾನ' ಮತ್ತು ರಾಜನು ತಮ್ಮ ನಿರ್ಮಲವಾದ ಮನಸ್ಸಿನ ಭಾವನೆಗಳನ್ನು ಹೇಗೆ ಹಂಚಿಕೊಳ್ಳುತ್ತಾರೆ, ಎಂದು ಅವರ ಕಾಗದದ ಮುಖಾಂತರ ನಾವಿಲ್ಲಿ ನೋಡುತ್ತೇವೆ. ಅದೇ ವೇಳೆಗೆ ಕಾಣಿಸಿಕೊಳ್ಳುವಂತಹ ಮತ್ತೊಂದು ವ್ಯಕ್ತಿತ್ವ ರಾಜನ ಹೆಂಡತಿ ರಘುವಿನ ಅಕ್ಕ, ಕ್ರೂರ ವ್ಯಕ್ತಿತ್ವವುಳ್ಳವಳು. ದುಷ್ಟ ಮನಸ್ಥಿತಿವುಳ್ಳವಳು, ಶಾಂತಿಯ ಈ ಸ್ಥಿತಿಗೆ ರಘುವಿನ ಜೊತೆ ಅವಳ ಅಕ್ಕಳು ಕಾರಣಳಾಗುತ್ತಾಳೆ. ಗೌರಮ್ಮನವರು ರಚಿಸಿರುವುದು ಒಂದೇ ಕತೆಯಾದರೂ ಅದರಲ್ಲಿ ಎಷ್ಟು ವೈವಿಧ್ಯ ಪಾತ್ರಗಳು ರೂಪುಗೊಂಡಿವೆ ಎಂಬುದನ್ನು ನಾವಿಲ್ಲಿ ಕಾಣುತ್ತೇವೆ. ಮುಗ್ಧ ಮತ್ತು ಅಸಹಾಯಕಳಾದ ಶಾಂತಸ್ವಭಾವದವಳಾದ 'ಶಾಂತ' ದಿಟ್ಟೆ, ನೇರ ಸ್ವಭಾವವಾದ ಸ್ನೇಹ ಮಹಿಯಾದ, ಸದಾ ಮತ್ತೊಬ್ಬರ ಶ್ರೇಯಸ್ಸನ್ನು ಬಯಸುವ 'ನಾನ'ಳನ್ನು ನಾವಿಲ್ಲಿ ಕಾಣುತ್ತೇವೆ.

[೨-೩] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಪುಟ – ೩೩.

'ಹೆಣ್ಣಿಗೆ ಹೆಣ್ಣೆ ಶತ್ರು', ಮಹಿಳೆಯ ಶೋಷಣೆಗೆ ಮತ್ತೊಂದು ಮಹಿಳೆಯೇ ಕಾರಣವೆಂಬಂತೆ ದೌರ್ಜನ್ಯ ಎಸಗುವ, ಮಮಕಾರವನ್ನೆ ಬಲಿಕೊಟ್ಟಿರುವ, ಹೆಣ್ಣಿನಲ್ಲಿ ಇರುವ ಎಲ್ಲ ಸದ್ಗುಣಗಳನ್ನು ದೂರ ಇಟ್ಟು, ರಾಕ್ಷಸಿ ಮನೋಭಾವನೆಯನ್ನು ಮೈಗೂಡಿಸಿಕೊಂಡಿರುವ ರಾಜನ ಹೆಂಡತಿಯನ್ನು ನಾವಿಲ್ಲಿ ನೋಡುತ್ತೇವೆ.

ಇಲ್ಲಿ ಶಾಂತ ತನ್ನಲ್ಲಿ ಇರುವ ಸಮಸ್ಯೆಯನ್ನು ಪರಿಹಾರ ಮಾಡಿಕೊಳ್ಳಲು ಸಾಧ್ಯವಾಗದೆ ಅಣ್ಣ ಅತ್ತಿಗೆಗೆ ತನ್ನ ಅಸಹ್ಯದ ಮುಖವನ್ನು ಹೇಗೆ ತೋರಿಸಲಿ ಎಂದು, ಹೊರಗಿನ ಸಮಾಜದ ಜನಗಳಿಗೆ ಹೆದರಿ, ಕೊನೆಗೆ ಶಾಂತ ಆತ್ಮಹತ್ಯೆಯ ದಾರಿಯನ್ನು ಹಿಡಿಯುತ್ತಾಳೆ. ಆದರೆ, 'ನಾನ'ಳನ್ನು ತೆಗೆದುಕೊಂಡರೆ ಗಂಡಸರಿಗಿಂತ ಹೆಂಗಸರೇ ಬಹಳ ಗಟ್ಟಿಗರು, ಧೈರ್ಯವಂತರು, ಎಂದು ಹೇಳಬಹುದು ನಾನ ರಾಜನಿಗೆ ಬರೆಯುವ ಕಾಗದದ ಮುಖಾಂತರ ಅವಳ ಎಲ್ಲ ವಿಚಾರವನ್ನು ಓದಿಗ್ರಹಿಸಿದಾಗ ಮಾತ್ರ ನಾನ ಸಹನೆಯ ಮೂರ್ತಿ, ಧೈರ್ಯಗುಂದದೆ ಇರುವ ಘನ ವ್ಯಕ್ತಿತ್ವವನ್ನು ಇಟ್ಟುಕೊಂಡಿರುವವಳು ಎಂದು ಗೌರಮ್ಮನವರು ಏಕಕಾಲದಲ್ಲಿ ಈ ಮೂರು ಹೆಣ್ಣಿನ ಪಾತ್ರಗಳನ್ನು ರಚಿಸುತ್ತಾ ಸಮಾಜದಲ್ಲಿ ಹೆಣ್ಣಿನ ಆಗುಹೋಗುಗಳನ್ನು ತಿಳಿಸುವ ಪ್ರಯತ್ನವನ್ನು ಇವರ ಕತೆಗಳಲ್ಲಿ ಕಾಣುತ್ತೇವೆ.

ಬಾಲವಿಧವೆಯಾದ ಶಾಂತ, ಕೊನೆಗೆ ಈ ವಿಚಾರವನ್ನು ಯಾರ ಬಳಿಯಲ್ಲಿಯೂ ಚರ್ಚಿಸಲು ಸಂಕೋಚಗೊಂಡು, ಹೆದರಿ ಕಂಗಾಲಾಗಿ, ಕೊನೆಗೆ ಆತ್ಮಹತ್ಯೆಯ ದಾರಿಯನ್ನು ಹಿಡಿದಿರುವ ಸಮಾಜದ ಒಂದು ಅಸಹಾಯಕತೆಯ ಪಾತ್ರವನ್ನು ಗೌರಮ್ಮನವರು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಇಲ್ಲಿ ಶಾಂತ ಸಮಾಜದ ಕಟ್ಟು ಪಾಡುಗಳಿಗೆ ಅಳುಕಿ ಆತ್ಮಹತ್ಯೆಗೆ ಶರಣಾಗುವ ದುರಂತ ನಾಯಕಿ ಎಂದು ಮನಗಾಣಬಹುದು. ಇಂತಹ ಘಟನೆಗಳು ಖಾಸಗಿಯ ವಿಚಾರವಾದರು ಅದಕ್ಕೆ ಸಾಮಾಜಿಕ ಆಯಾಮಗಳಿರುವುದನ್ನು ಮನಗಾಣಿಸುವ ಉದ್ದೇಶ ಕತೆಗಾರ್ತಿಯದ್ದು.

'ಪ್ರಾಯಶ್ಚಿತ' : ಕತೆಯ ನಾಯಕಿ ನಲಿನ, ಇವಳನ್ನು ಪಕ್ಕದ ಮನೆಯ ಮೂರ್ತಿ ಪ್ರೀತಿಸುತ್ತಾನೆ. ನಲಿನ ತನ್ನ ಚಿಕ್ಕಪ್ಪನ ಮನೆಯಲ್ಲಿ ತಂದೆ, ತಾಯಿ ಇಲ್ಲದೆ ತಬ್ಬಲಿಯಾಗಿ ಬೆಳೆಯುತ್ತಾಳೆ. ಆದರೆ ಚಿಕ್ಕಪ್ಪನ ಮನೆಯಲ್ಲಿ ನಲಿನಿಗೆ ತಾಯಿ ತಂದೆಯ ಪ್ರೀತಿ ದೊರಕಿದರೂ, ಅವಳ ವಿಷಯವಾಗಿ ಸುತ್ತಮುತ್ತಲ ಜನ ಮಾತನಾಡುವುದಕ್ಕೆ ಪ್ರಾರಂಭಿಸಿದರು, ನಲಿನಿಗೆ ಹದಿನೈದು ವರ್ಷಗಳಾದರೂ ಯಾರು ಅವಳನ್ನು ಮದುವೆಯಾಗಿರಲಿಲ್ಲ. ಕಾರಣವೇನೆಂದರೆ, ನಲಿನಿಯ ತಾಯಿಯ ಆತ್ಮಹತ್ಯೆಯ ವಿಷಯವನ್ನು ಊರ ಜನರು ವಿಧವಿಧವಾಗಿ ಬಣ್ಣಿಸಿ ಹೇಳತೊಡಗಿದರು. ತೀರಿಕೊಂಡ ತಾಯಿಯ ಆತ್ಮಹತ್ಯೆಯ ವಿಚಾರ ಕೇಳಿ, ನಲಿನಿಯ ಮನಸ್ಸಿಗೂ ಬೇಸರದ ಭಾವನೆಗಳು ಮೂಡಿತ್ತು. ಏಕೆಂದರೆ ನಲಿನಿಯ ತಾಯಿಯ ಶೀಲ ನಡತೆಗಳು ಚೆನ್ನಾಗಿರಲಿಲ್ಲ, ಎಂದು ಇಲ್ಲಿ ನಲಿನ ತಾಯಿ ಆತ್ಮಹತ್ಯೆ ಮಾಡಿಕೊಂಡರೆ ಅದಕ್ಕೆ ಕಾರಣ ಏನೆಂದು ಹುಡುಕದ ಸಮಾಜ ಶಿಕ್ಷೆಯನ್ನು ಮಾತ್ರ ನಲಿನಿಗೆ ಕೊಡುವುದಕ್ಕೆ ಮುಂದಾಗಿದೆ. ಇಂತಹ ಕ್ರೂರ ಕಠೋರ ಸಮಾಜ ಎಲ್ಲಿಯವರೆಗೆ ಹಾಗೆ ವರ್ತಿಸುತ್ತದೆಯೋ, ಅಲ್ಲಿಯವರೆಗೆ ನಲಿನಿಯಂತಹ ಹೆಣ್ಣು ಅಸಹಾಯಕಳಾಗಿ ಇರುವುದನ್ನು ನೋಡುತ್ತೇವೆ. 'ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕುತ್ತಾರಂತೆ' ಎಂಬ ಗಾದೆಯ ಮಾತಿನ ಅರ್ಥದಂತೆ ನಲಿನಿಯ ಬದುಕಾಯಿತು. ಆದರೆ ನಲಿನಿಯ ತಾಯಿ ಆತ್ಮಹತ್ಯೆ ಮಾಡಿಕೊಳ್ಳಲು ಕಾರಣ

ತಿಳಿದಿದ್ದ ಮೂರ್ತಿಯ ತಂದೆ ಮಾತ್ರ ಯಾವ ಮಾತುಗಳನ್ನು ಆಡದೆ ತಟಸ್ಥನಾಗಿ ಇರುವ ಅಂಶವನ್ನು ಗಮನಿಸಿದಾಗ, ಈ ಪುರುಷ ಹೇಗೆ ಸ್ತ್ರೀ ಪ್ರಪಂಚವನ್ನು ಶೋಷಣೆಗೆ ಗುರಿ ಮಾಡುತ್ತಿದ್ದಾನೆ. ಎಂಬುದನ್ನು ತಿಳಿಯಬಹುದು.

ಇನ್ನು ಈ ಕಥೆಯಲ್ಲಿ ಬರುವ ಮೂರ್ತಿಯ ತಾಯಿ, ಮೂರ್ತಿ ಕಾಲೇಜಿನಲ್ಲಿ ಪ್ರತೀ ತರಗತಿಯಲ್ಲಿಯೂ ಪ್ರಥಮ ಶ್ರೇಣಿಯಲ್ಲಿ ಪಾಸಾಗಬೇಕು, ಯಾವುದಕ್ಕೂ ಹಣವನ್ನು ಹೆಚ್ಚಾಗಿ ಖರ್ಚು ಮಾಡಬಾರದು ಎಂದು ಈ ಎರಡು ವಿಚಾರದಲ್ಲಿ ಸ್ವಲ್ಪ ಏರುಪೇರು ಆದರೂ ಮೂರ್ತಿಯ ತಂದೆ ಆತನ ತಾಯಿಗೆ ಹೊಡೆಯುತ್ತಿದ್ದನು. ಆ ಕಾರಣದಿಂದಲೇ ತಂದೆಗೆ ವಿರೋಧವಾಗಿ ಯಾವ ಕೆಲಸವನ್ನು ಮೂರ್ತಿ ಮಾಡುತ್ತಿರಲಿಲ್ಲ. ಆದರೆ ವಿನಾಕಾರಣ ತಾಯಿಗೆ ಶಿಕ್ಷೆಕೊಡುವುದನ್ನು ಮೂರ್ತಿ ಸಹಿಸುತ್ತಿರಲಿಲ್ಲ. ಇಲ್ಲಿ ಮೂರ್ತಿಗೆ ಸ್ತ್ರೀಯರ ಬಗ್ಗೆ ಇದ್ದಂತಹ ಸಂವೇದನೆಯನ್ನು ಅರ್ಥೈಸಿಕೊಳ್ಳಬಹುದು. ಒಟ್ಟಾರೆ ಇಲ್ಲಿ ಎಲ್ಲವನ್ನೂ ಗಮನಿಸಿದಾಗ ನಲಿನಿ ಮತ್ತು ನಲಿನಿಯ ತಾಯಿ ಹಾಗೂ ಮೂರ್ತಿಯ ತಾಯಿ ಸಮಯ ಸಂದರ್ಭಗಳಿಗೆ, ಸಮಾಜದ ನೀತಿ ನಿಯಮಗಳಿಗೆ ಕಟ್ಟುಬಿದ್ದು ತನ್ನ ಅಸಹಾಯಕತೆಯನ್ನು ಹೇಗೆ ತೋರಿಸುತ್ತಾರೆ ಎಂದನ್ನು ಈ ಕಥೆಯಲ್ಲಿ ನಿರೂಪಿಸುತ್ತಾರೆ. ಮೂರ್ತಿಯ ತಂದೆಯೇ ಪ್ರಾಯಶ್ಚಿತ ಪಟ್ಟರು ಕಷ್ಟಕಾರ್ಪಣ್ಯದ ದುರಂತ ಮಾತ್ರ ಸ್ತ್ರೀಗೆ ಮೀಸಲಾಯಿತು.

'ಅಪರಾಧಿ ಯಾರು' : ಅಪರೂಪದ ಸೌಂದರ್ಯ, ಶ್ರೀಮಂತಿಕೆಯ ಸದ್ಗುಣ ಅತ್ಯುತ್ತಮ .ವ್ಯಕ್ತಿತ್ವ ಎಲ್ಲರ ಮೆಚ್ಚಿಗೆಯನ್ನು ಪಡೆದಿರುವ ಪ್ರೀತಿಯ ಪಾರ್ವತಿ ಈಗ ವಿಧವೆ, ವಿಧವೆಯಾದ ಪಾರ್ವತಿ ಯಾರ ಕೆಟ್ಟಕೃತ್ಯಕ್ಕೆ ಬಲಿಯಾಗುತ್ತಾಳೆ. ಪಾರ್ವತಿ ಹೇಗೆ ಅಸಹಾಯಕಳಾಗಿ ಇಲ್ಲಿ ಕಾಣುತ್ತಾಳೆ, ಎಂಬುದನ್ನು 'ಅಪರಾದಿ ಯಾರು' ಎಂಬುವುದರಲ್ಲಿ ನೋಡುತ್ತೇವೆ.

ಇಂತಹ ಪಾರ್ವತಿ ಶಾಲೆಯಲ್ಲಿ ಓದುತ್ತಿದ್ದಾಗ ಅವಳ ಬಗ್ಗೆ ಗೆಳತಿಯರು ಮಾತನಾಡುತ್ತಿದ್ದ ಮಾತು 'ರಾಜನ ರಾಣಿ ಕಿರೀಟ ಧಾರಿಣಿ' ಎಂದು ಹೇಳಿಕೊಂಡು ನಾವು ನಲಿಯುತ್ತಿದ್ದೆವಲ್ಲ! ಆ ಪಾರ್ವತಿ ಜಾತಿಯಿಂದ ಬಹಿಷ್ಕರಿಸಲ್ಪಟ್ಟಿದಾಳೆ ಏಕೆಂದರೆ ಕನ್ನಡ ಪಾಠವನ್ನು ಕಲಿಸುತ್ತಿದ್ದ ಪಂಡಿತರ ಮಗಳು ಪಾರ್ವತಿ ಮದುವೆ ಮಾಡಿಕೊಂಡ ವರ್ಷವೇ ಅವಳ ಗಂಡ ಸತ್ತು ಹೋದನು. ಅವಳ ಪತಿ ಸಾಕಷ್ಟು ಸಾಲವನ್ನು ಸಹಾ ಮಾಡಿದ್ದ, ಪಂಡಿತರು ತೀರಿಕೊಂಡಿದ್ದರು. ಆ ದಿನದಿಂದ ಅನಾಥಳಾದ ಪಾರ್ವತಿ ಅವಳ ಜೊತೆ ಒಂದು ಚಿಕ್ಕ ಮಗು, ಇಬ್ಬರು ಜೀವನವನ್ನು ರೂಢಿಸಿಕೊಳ್ಳುವುದಕ್ಕೆ ಯಾವ ದಾರಿಯೂ ಸಿಗದೆ, ನಾಗೇಶರಾಯರ ಮನೆಯಲ್ಲಿ ಅಡಿಗೆಯ ಕೆಲಸಕ್ಕೆ ಸೇರಿದಳು, ಅಬಲೆಯಾದ ಹೆಣ್ಣು ಒಂಟಿಯಾಗಿ ಸಿಕ್ಕಿದಳು, ಎಂದು ನಾಗೇಶರಾಯರು ಅತ್ಯಾಚಾರ ಎಸಗಿದರು, ನಾಗೇಶರಾಯರ ಈ ಕೆಟ್ಟಕೃತ್ಯ ಅಮಾನವೀಯವಾದ ವರ್ತನೆ, ರಾಕ್ಷಸತನದ ವ್ಯಕ್ತಿತ್ವ ಇದು ಎಲ್ಲವನ್ನು ಪಾರ್ವತಿ ಮಗುವಿಗಾಗಿ ಸಹಿಸಿಕೊಂಡಳು. ಅದಕ್ಕೆ ಕೆಲವೇ ದಿನಗಳಲ್ಲಿ ರಾಯರ ಪಾಪದ ಪ್ರತಿಫಲ ಪಾರ್ವತಿಯಲ್ಲಿ ಕಾಣಿಸಿತ್ತು, ಶ್ರೀಮಾನ್ ನಾಗೇಶರಾಯರು ಸಮಾಜದಲ್ಲಿ ಒಂದು ಅತ್ಯುನ್ನತ ಅಧಿಕಾರ, ಪದವಿ ಪ್ರತಿಷ್ಠೆಯನ್ನು ಗಳಿಸಿಕೊಂಡಂತಹ ರಾಯರಿಂದಲೇ ಪಾರ್ವತಿಯಂತಹ ಅಸಹಾಯಕ ಹೆಣ್ಣಿನ ಮೇಲೆ ಶೋಷಣೆ ಮಾಡಿರುವುದು ತಿಳಿಯುತ್ತದೆ. ಅಷ್ಟೆ ಅಲ್ಲದೆ ಈ ಕಥೆಯಲ್ಲಿ ಬರುವ ಸಂಗತಿ ಎಂದರೆ ಇವರು ಶಾಲೆಯ ದಿನದಲ್ಲಿ ಕುಳಿತು ಮುಂದಿನ ಜೀವನದ ಕನಸು ಕಾಣುತ್ತಿದ್ದಾಗ ಇದ್ದರೀತಿಗೂ ವಾಸ್ತವದ ಪರಿಸ್ಥಿತಿಯಲ್ಲಿ

ಕಾಣಿಸಿಕೊಂಡಿರುವ ಜಗತ್ತಿಗೂ, ಎಷ್ಟು ವ್ಯತ್ಯಾಸ ಇದೆ ಎಂದು ತಿಳಿದುಕೊಳ್ಳಲು ಲಕ್ಷ್ಮಿ ಮತ್ತು ನಲಿನ ಮಾತನಾಡುವ ಪ್ರಸಂಗವನ್ನು ನಾವು ಇಲ್ಲಿ ನೋಡಬಹುದು.

[೬]"ನಮ್ಮ ಗೆಳತಿ ಸೀತೆಯನ್ನು ನೋಡು, ಅವಳು ಬಯಸುತ್ತಿದ್ದ ಬಯಕೆಗಳು ಎಲ್ಲಿ? ಈಗವಳನು ಭಾವಿಸುತ್ತಿರುವ ಯಾತನೆಗಳೆಲ್ಲಿ! ನಾವೆಂದಾದರೂ ಅವಳ ಗತಿ ಹೀಗಾಗಬಹುದೆಂದು ಎಣಿಸಿದ್ದೆವೆಯೇ?. ಕ್ಲಾಸಿನಲ್ಲಿ ಮೊದಲನೆಯವಳಾಗಿ ಬುದ್ಧಿವಂತೆ ಎನ್ನಿಸಿಕೊಳ್ಳುತ್ತಿದ್ದ ಕಮಲೆ ಅತ್ತೆಯ ಮನೆಯಲ್ಲಿ ಮೂದೇವಿ ಎಂಬ ಬಿರುದು. ಹೀಗೆ ಒಂದೊಂದು ಹೆಣ್ಣಿನ ಪಾತ್ರವನ್ನು ತೆಗೆದುಕೊಂಡು ನೋಡುತ್ತಾ ಹೋದರೆ, ಸ್ತ್ರೀ ಜಗತ್ತು ಎಂತಹ ಅಧೋಗತಿಯಲ್ಲಿ, ಅಸಹಾಯಕತೆಯ ನೆರಳಿನಲ್ಲಿ ಬದುಕುತ್ತಿದೆ ಎಂದು ಗೌರಮ್ಮನವರು ಅವರ ಕತೆಯ ಮುಖಾಂತರ ವಿಷದಪಡಿಸುತ್ತಾರೆ"[೬].

'ಮನುವಿನ ರಾಣಿ' ಯ ಕತೆಯಲ್ಲಿ ಬರುವ ರಾಜಮ್ಮ ಮೋಹನನ ಪ್ರೀತಿಯ ರಾಣಿ, ರಾಜಮ್ಮನಿಗೊ ಅಷ್ಟೆ ಮೋಹನ ಮನು ಆಗಿದ್ದನು. ಅದರಿಂದಲೇ ಗೌರಮ್ಮನವರು ಇದನ್ನು 'ಮನುವಿನ ರಾಣಿ' ಎಂದು ಕರೆದಿದ್ದಾರೆ

ರಾಜಮ್ಮನ ವಿಷಯವಾಗಿ ಜನರು ಆಡಿಕೊಳ್ಳುವ ಮಾತುಗಳು ಸತ್ಯ, ಹೌದು ನನ್ನ ತಾಯಿ ಸೂಳೆಯಾಗಿದ್ದಳು. ತನ್ನನ್ನು ಅದೇ ವೃತ್ತಿಗೆ ಸಿದ್ದಮಾಡಿ ನನ್ನಿಂದಲೂ (ರಾಜಮ್ಮ) ತುಂಬ ಹಣ ಸಂಪಾದಿಸುತ್ತಿದ್ದಳು, ಇಲ್ಲಿ ರಾಜಮ್ಮನ ಸೌಂದರ್ಯಕ್ಕೆ ಮರುಳಾಗಿ ಗಣ್ಯವ್ಯಕ್ತಿಗಳು, ಶ್ರೀಮಂತರು, ಧನಿಕರು, ಬರುತ್ತಿದರು. ಹೀಗೆ ಬರಬೇಕಾದರೆ, ಭಾಗ್ಯವಂತರ ಒಬ್ಬನೇ ಮಗ ಮೋಹನ, ನನ್ನ ತಾಯಿಯ ಸ್ನೇಹಿತನೊಬ್ಬನ ಜೊತೆ ತಮ್ಮ ಮನೆಗೆ ಬಂದ, ಆ ದಿನದಿಂದ ಮೋಹನ ಎಲ್ಲರಂತೆ ತಮ್ಮ ಮನೆಗೆ ಬರುತ್ತಿರಲಿಲ್ಲ. ನನಗೋಸ್ಕರ ನನ್ನ ಪ್ರೀತಿ ಒಲವನ್ನು ಬಯಸಿ ತನ್ನ ಮನೆಗೆ ಬರುತ್ತಿದ್ದ. ಆವೇಳೆಗಾಗಲೇ ಮೋಹನ ಮನುವಾಗಿದ್ದ. ರಾಜಮ್ಮನಾದ ನಾನು ಮನುವಿನ ರಾಣಿಯಾಗಿದ್ದೆ. ಈ ಮಧ್ಯೆ ಮನು ತನ್ನ ಬಳಿಯಲ್ಲಿದ್ದ ಹಣ ಆಸ್ತಿ ಸಂಪತ್ತು, ಐಶ್ವರ್ಯಗಳೆಲ್ಲವೂ ತನ್ನ ತಾಯಿಯ ಪೆಟ್ಟಿಗೆ ಸೇರಿ ಹೋಯಿತು.

ಆ ಮನುವಿನಿಂದ ನಮಗೆ ಯಾವ ಪ್ರಯೋಜನವಿಲ್ಲವೆಂದು ತಿಳಿದ ತಾಯಿ ಹೇಗಾದರೂ ತನ್ನಿಂದ ದೂರ ಮಾಡಬೇಕು ಎಂದು ಬಯಸಿ, ಕುತಂತ್ರದ ವಿಚಾರಗಳು ಅವಳ ತಲೆ ಹೊಕ್ಕಿ ತನಗೆ ಮನುವಿಗೆ ಮದುವೆಯಾಗಿದೆ ಎಂದಳು. ಈ ವಿಚಾರ ಕೇಳಿ ರಾಜಮ್ಮ ಪ್ರಾಣಾಂತಿಕವಾದ ಕಾಯಿಲೆಯಲ್ಲಿ ಮಲಗಿದ್ದಳು. ಆದರೆ ಮನುವಿಗೆ ರಾಜಮ್ಮ ಸತ್ತುಹೋದಳೆಂದು ಇಬ್ಬರ ನಡುವೆ ಸುಳ್ಳಿನ ಪ್ರಸ್ತಾಪಮಾಡಿ ಇಬ್ಬರನ್ನು ದೂರಮಾಡಿದಳು. ಬೇರೆಯವರಿಂದ ಸತ್ಯ ತಿಳಿದ ರಾಜಮ್ಮ ಸುಳ್ಳಿನ ಸಾಮ್ರಾಜ್ಯದ ಕೋಟೆಯಲ್ಲಿ ಇರಲು ಇಷ್ಟಪಡದೆ, ಭಾವನೆಗೆ ಬೆಲೆಯನ್ನು ಕೊಡದ ತಾಯಿಯನ್ನು ಲೆಕ್ಕಿಸದೆ, ಅದೇದಿನ ರಾತ್ರಿ ಮನೆಬಿಟ್ಟು ಹೊರಟಳು. ಮನುವಿನ ಮನೆಗೆ ಹೋದರೆ ಮನು ಹುಚ್ಚನಾಗಿ ಹೋಗಿದ್ದ

ಹುಚ್ಚಿನಲ್ಲಿ ಎರಡು ಕಣ್ಣುಗಳನ್ನು ಕಳೆದು ಕೊಂಡಿದ್ದನು. ಆತನ ಹಣ, ಆಸ್ತಿಯೆಲ್ಲ

---

[೬]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಪುಟ-೮೬

ಅಮ್ಮನ ಪಾಲಾಗಿತ್ತು. ಉಳಿದಿದ್ದು ರಾಜಮ್ಮ ಬಳಿಯಿದ್ದ ಆಭರಣಗಳು ಮಾತ್ರ ಅವನ್ನೂ ಮಾರಿ ಚಿಕಿತ್ಸೆ ಮಾಡಿಸಿದ ನಂತರ ಆತನ ಹುಚ್ಚು ಸಂಪೂರ್ಣವಾಗಿ ಗುಣವಾಗಿಲ್ಲವೆಂದರೂ, ಕೆಲವು ವೇಳೆ ಮಾತ್ರ ಸರಿಯಾಗಿರುತ್ತಿದ್ದ. ಮೊದಲಿನ ಮನುವನ್ನು ರಾಜಮ್ಮನ ತಾಯಿ ಕೊಂದುಹಾಕಿದಳು. ಆ ಸ್ಥಿತಿಯಲ್ಲಿಯೂ ತನ್ನ ತಾಯಿಯ ಕಿರುಕುಳ ಹಿಂಸೆ ಪ್ರಾರಂಭ ವಾಯಿತು. ಎಲ್ಲದರಿಂದ ಮುಕ್ತವಾಗಲು ನಾವು ಬಹುದೂರ ಬಂದೆವು. ದಿನಗಳು ಉರುಳಿದಂತೆ ಮನುವಿನ ಬುದ್ಧಿ ಮಾನಸಿಕ ಶಕ್ತಿ ಸಂಪೂರ್ಣವಾಗಿ ಲೋಪವಾಗಿ ಹೋಯ್ತಲ್ಲ ಕೇವಲ ತನ್ನನ್ನು 'ರಾಣಿ' ಎಂದು ಕೂಗುವುದಲ್ಲದೆ ಹೆಚ್ಚಿನ ಮಾತುಗಳನ್ನು ಆಡುತ್ತಿರಲಿಲ್ಲ. ಯಾವಾಗಲೂ ಮನುವಿನ ಸಮೀಪವೇ ಇರಬೇಕಾಗುತ್ತಿತ್ತು. ಈಗ ಅವನೇ ಇಲ್ಲದ ಈ ಮನೆಯಲ್ಲಿ ನಾನು ಹೇಗೆ ಇರಲಿ, ಯಾರಿಗಾಗಿ ತಾನು ಬದುಕಲಿ, ಎಂದು ಜೀವನದಲ್ಲಿ ಬಹಳ ಬೇಸತ್ತ ರಾಜಮ್ಮ ಮಾನವ ಹೃದಯಿಯಾದ ಡಾಕ್ಟರ್‌ಗೆ ಎಲ್ಲ ವಿಚಾರವನ್ನು ತಿಳಿಸಿ, ಆದಿನವೇ ರಾಜಮ್ಮ ಆ ಮನೆಯನ್ನು ಬಿಟ್ಟಳು. ಯಾರಿಗಾಗಿ ತಾನು ಮನೆಯನ್ನು ಬಿಟ್ಟು ಇಲ್ಲಿಗೆ ಬಂದಿದ್ದಳೋ ಅವರೇ ಇಲ್ಲದ ಮೇಲೆ ತನಗೇನು ಕೆಲಸವೆಂದುಮರಳಿ ಹಿಂತಿರುಗಿದಳು. ಎಲ್ಲಿಗೆ ಹೋದಳು? ಏಕೆ ಹೋದಳು? ಏನೊಂದೂ ತಿಳಿಯದ ವಿಚಾರವಾಯಿತು. ಇಲ್ಲಿ ರಾಜಮ್ಮ ತನ್ನ ತಾಯಿಯಿಂದಲೇ ಶೋಷಿತಳಾದಳು ಊರಿನ ಜನರ ಕೆಟ್ಟ ಕ್ರೂರ ನೋಟಕ್ಕೆ ಬಲಿಯಾದ ಈ ಅಸಹಾಯಕ ಹೆಣ್ಣು ಎಂದರೆ ರಾಜಮ್ಮ ಎಂದು ಕರೆಯಬಹುದು. ರಾಜಮ್ಮ ಮೊದಲಿಗೆ ವೇಶ್ಯಾವಾಟಿಕೆಯ ಬದುಕೇ ಅನುಸರಿಸುತ್ತಿದ್ದರೂ ಆನಂತರ ಅದರಿಂದ ವಿಮುಕ್ತಿ ಪಡೆದು ಮನುವಿನ ಜೊತೆ ಉತ್ತಮ ಸಾಂಸಾರಿಕ ಜೀವನವನ್ನು ಮಾಡಬೇಕು ಎಂದು ಆಸೆಪಟ್ಟಳು. ಆದರೆ ಸುರಕ್ಷಿತ ಸಮಾಜದಲ್ಲಿ ತಾನು ಸ್ವಚ್ಛಂದದ ಬದುಕನ್ನು ನಡೆಸಬೇಕು ಎಂದು ಎಷ್ಟು ಪ್ರಯತ್ನ ಪಟ್ಟರು, ಅವಳ ತಾಯಿ ಹಾಗೂ ಸಮಾಜವೇ ಅದಕ್ಕೆ ಅವಕಾಶ ಕಲ್ಪಿಸಿ ಕೊಡಲಿಲ್ಲ. ಇಂತಹ ಅಸಹಾಯಕ ಸ್ಥಿತಿಯಲ್ಲಿ ರಾಜಮ್ಮ ಇರಬೇಕಾದ ಪರಿಸ್ಥಿತಿ ಬಂತು. ಹಾಗಾದರೆ ವೇಶ್ಯೆಯರಿಗೆ ಬದುಕೆ ಇಲ್ಲವೆ? ಅವರು ಮನುಷ್ಯರಲ್ಲವೇ, ಹಾಗಾದರೆ ಸಮಾಜದಲ್ಲಿ ಈ ವೇಶ್ಯಾವಾಟಿಕೆ ಸೃಷ್ಟಿಯಾದದ್ದು ಹೇಗೆ? ವೇಶ್ಯಾವಾಟಿಕೆಯ ವಂಶದಲ್ಲಿ ಹುಟ್ಟಿ ಇದರಿಂದ ಬಿಡುಗಡೆ ಪಡೆಯಬೇಕು ಎನ್ನುತ್ತಿದ್ದ ರಾಜಮ್ಮನಂತಹ ಅದೆಷ್ಟೋ ಹೆಣ್ಣುಮಕ್ಕಳು, ಸಮಾಜದಲ್ಲಿ ಪರಿವರ್ತನೆಯ ಬದುಕನ್ನು ಹೊಸ ಜಗತ್ತನ್ನು ಕಾಣಲು ಸಾಧ್ಯವಾಗದೆ ಸಮಾಜ ನಿಂದನೆಗೆ ಗುರಿಯಾಗಿ ಅವರ ಕ್ರೂರ ನೋಟಕ್ಕೆ ಬಲಿಯಾಗಿ, ದುರಂತವನ್ನು ಕಾಣುವ ರಾಜಮ್ಮನಂತಹ ಅಸಹಾಯಕ ಸ್ತ್ರೀಯನ್ನು ಗೌರಮ್ಮನವರು ಚಿತ್ರಿಸುತ್ತಾ ಇದಕ್ಕೆ ಸಮಾಜವೇ ಪರಿಹಾರವನ್ನು ಒದಗಿಸಬೇಕು ಎಂದು ಹೇಳುವುದರ ಮೂಲಕ ಈ ಸ್ತ್ರೀ ಜಗತ್ತಿಗೆ ಅಸಹಾಯಕತೆಯನ್ನು ನೀಡಿರುವುದು ಸಮಾಜದ ದೌರ್ಬಲ್ಯ ಎಂದು ವ್ಯಂಗ್ಯವಾಗಿ ಟೀಕಿಸಿದ್ದಾರೆ. ಹೀಗೆ ಕೊಡಗಿನ ಗೌರಮ್ಮನ ಕಥೆಗಳು ಸ್ತ್ರೀ ಸಾಹಿತ್ಯದ ಬೆಳವಣಿಗೆಯ ದಾರಿಯಲ್ಲಿ ಒಂದು ಮೈಲಿಗಲ್ಲಾಗಿವೆ. ಗೌರಮ್ಮನಂತಹವರು ಸೀಮಿತವಾಗಿ ಪಾತ್ರಗಳನ್ನು ನಿರೂಪಿಸಿದರು, ಅವುಗಳು ಉಂಟುಮಾಡುವ ಪರಿಣಾಮ ಅದ್ಭುತವಾಗಿವೆ. ಅವುಗಳಿಂದ ಹೊರಡಿಸುವ ಕಾಳಜಿಗಳು ನೈಜವಾಗಿವೆ ಎಂದು ಹೇಳಬಹುದು.

'ಅದೃಷ್ಟದ ಆಟದ' ಕತೆಯಲ್ಲಿ ಬರುವ ಲತಾ ಮಣಿ ಇಬ್ಬರು ಪರಸ್ಪರ ಒಬ್ಬರನೊಬ್ಬರು ಇಷ್ಟಪಟ್ಟಿದ್ದರು. ಮನೆಯವರಿಗೂ ಆ ವಿಚಾರ ತಿಳಿದ್ದಿತ್ತು. ಮಣಿಗೆ ಕೆಲಸ ದೊರೆಯುವ ತನಕ ತನಗೆ ಮದುವೆ ಬೇಡ ಎಂದು ಹೇಳಿದ್ದ. ಲತೆಯ ತಂದೆ ರಾಮರಾಯರಿಗೆ

ಕಾಯಲು ಸಾಧ್ಯವಾಗದೆ ಆತಂಕದಿಂದ ಲತೆಯ ಮದುವೆಯನ್ನು ಮಾಡಿದರು. ಇಲ್ಲಿ ಲತೆಯ ಪಾತ್ರವನ್ನು ತೆಗೆದುಕೊಂಡಾಗ ಹೆಣ್ಣಿಗೆ ಎಷ್ಟರ ಮಟ್ಟಿಗೆ ಸ್ವಾತಂತ್ರ್ಯ ಇದೆ ಎಂಬುದು ತಿಳಿಯುತ್ತದೆ. ಎಲ್ಲ ವಿಚಾರ ತಿಳಿದಿದ್ದರು ಮನೆಯವರು ಲತೆಯ ಇಷ್ಟಕ್ಕೆ ಅವಕಾಶ ಮಾಡಿಕೊಡಲಿಲ್ಲ. ಲತಾಳ ಈ ಸಮಸ್ಯೆ ಪ್ರಸ್ತುತ ೨೧ನೇ ಶತಮಾನ ದಲ್ಲಿಯೂ ಸಹಾ ಕಾಣುತ್ತೇವೆ. ಇಂದಿಗೂ ಸಹಾ ಎಲ್ಲಾ ಕುಟುಂಬಗಳಲ್ಲಿಯೂ ಇರುವ ಅಸಹಾಯಕತೆಯನ್ನು ಗೌರಮ್ಮನವರು ತಮ್ಮ ಕಥೆಯಲ್ಲಿ ಆಗಲೇ ಗುರುತಿಸಿರುವುದನ್ನು ಲತೆಯ ಪಾತ್ರದಿಂದ ನೋಡಬಹುದು. ಲತೆ ಮದುವೆಯಾಗಿ ಕೇವಲ ಕೆಲವೇ ವರ್ಷಗಳಲ್ಲಿ ವಿಧವೆಯೂ ಆಗಿ, ಮಣಿ ಕೊಟ್ಟ ಎಂ. ಎಲ್. ಉಂಗುರವನ್ನು ಲಕ್ಷ್ಮಿಗೆ ಉಡುಗೊರೆಯಾಗಿ ಕೊಟ್ಟಳು.

'ವಾಣಿಯ ಸಮಸ್ಯೆ' ಯಲ್ಲಿ ಬರುವ ಇಂದು ತಾನು ಹುಟ್ಟುವ ಮೊದಲೆ ತಂದೆಯನ್ನು, ನಂತರ ತಾಯಿಯನ್ನು ಕಳೆದುಕೊಂಡ ದುರದೃಷ್ಟಳು. ಅಷ್ಟೇ ಅಲ್ಲದೆ, ಅಪಶಕುನದ ಹೆಣ್ಣು ಎಂದು ಹೆಸರು ಪಡೆದುಕೊಂಡು, ದಾಯಾದಿಗಳ ಮನೆಯಲ್ಲಿ ಎಲ್ಲರಿಗೂ ಹೊರೆಯಾಗಿ ಕಂಡವಳು. ಸಾಲದಕ್ಕೆ ಮದುವೆಯಾಗಿ ಆರು ತಿಂಗಳಾಗುವ ವೇಳೆಗೆ ವೈಧವ್ಯ ಬೇರೆ ಪ್ರಾಪ್ತವಾಗಿ ಹೋಯಿತು. ಆರು ವರ್ಷಗಳಿಂದ ಖಾಲಿಯಾದ ಮನೆಗೆ ಒಕ್ಕಲು ಬಂದ ನಂತರ ರತ್ನನ ಮತ್ತು ವಾಣಿಯ ಸಂಪರ್ಕದಿಂದ ಮಾನಸಿಕವಾದ ತೊಳಲಾಟದಲ್ಲಿ ಇಂದು ಇರಬೇಕಾಯಿತು. ಎಷ್ಟೇ ಪ್ರಯತ್ನ ಪಟ್ಟರು, ನವದಾಂಪತ್ಯದ ಯೌವನದಲ್ಲಿ ಇರುವ ಜೋಡಿಗಳನ್ನು ನೋಡಿದಾಗ ಇಂದುವಿಗೂ ಅದೇ ಭಾವನೆಗಳು, ಉದ್ವೇಗಗಳು, ಏಳುವುದಕ್ಕೆ ಪ್ರಾರಂಭವಾಯಿತು. ಕೊನೆಗೆ ಇಂತಹ ಭಾವನೆಗಳನ್ನೆಲ್ಲ ತನ್ನಿಂದ ಅಳಿಸಿ ಹಾಕುವುದಕ್ಕೆ ಇಂದು ರತ್ನ ಬರೆದ ಕಾಗದವನ್ನು, ಬೆಂಕಿಗೆ ಆಹುತಿ ಕೊಡವುದರ ಮುಖಾಂತರ ತಕ್ಷಣ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡಳು. ನಂತರ ತನಗೆ ಇಷ್ಟವಿಲ್ಲದವರ ಮನೆ ಸೇರಿ ಕಿರುಕುಳ ಅನುಭವಿಸುತ್ತಾಳೆ. ಮತ್ತೇ ಮೊದಲಿನ ಪ್ರಪಂಚದಲ್ಲೇ ವಾಸಿಸುವ ದುರಂತ ಬದುಕಿನ ಅಸಹಾಯಕ ಸ್ಥಿತಿ ಇಂದುವಿನಲ್ಲಿ ಕಾಣುತ್ತದೆ.

'ಆಹುತಿ' ಯ ಕತೆಯಲ್ಲಿ ನೋಡಿದ ಶಾಂತಿ ಸಾಕಷ್ಟು ಅನುಕೂಲಗಳು ಇಲ್ಲದ, ಬಡತನದ ಕುಟುಂಬದಲ್ಲಿ ಹುಟ್ಟಿದ ಹುಡುಗಿ. ಆದರೂ ವಿದ್ಯಾವಂತೆ, ಬುದ್ಧಿವಂತೆ, ಸೌಂದರ್ಯವತಿ ಅಪರೂಪದ ಸುಂದರಿ ಶಾಂತಿ. ವಯಸ್ಸಾಗಿರುವ ತಂದೆ–ತಾಯಿಗಳಿಗೆ ಭಾರವಾಗಲು ಇಷ್ಟಪಡದೆ, ತಂದೆ ನೋಡಿದ ಮೊದಲನೆಯ ವರ ವರದಕ್ಷಿಣೆಗಾಗಿ ಒಪ್ಪವುದಿಲ್ಲವೆಂದು, ತನ್ನ ತಂದೆ ಮುದಿವರನಿಗೆ ಚಿಕ್ಕ ಬಾಲಿಕೆಯನ್ನು ಕಟ್ಟುವುದಕ್ಕೆ ಮುಂದಾಗಿದ್ದಾರೆ. ಈ ಕೆಲಸವೇ ಇಲ್ಲಿ ಪುಣ್ಯವಾದರೆ, ನನಗೆ ಪುಣ್ಯಕ್ಕಿಂತಲೂ, ಆತ್ಮಹತ್ಯೆಯ ಪಾಪವೇ ಲೇಸೆಂದು ಆತ್ಮಹತ್ಯೆಗೆ ಶರಣಾದಳು. ಹೀಗೆ ಅಮಾಯಕ ಹೆಣ್ಣಿನ ಚಿತ್ರಣವನ್ನು ನೋಡುತ್ತೇವೆ. ವಿದ್ಯಾವಂತಳು, ಬುದ್ದಿವಂತಳು ಆದರೂ ಮಾನಸಿಕವಾಗಿ ದೃಢ ವ್ಯಕ್ತಿತ್ವ ಇಲ್ಲದೆ ಹೋದರೆ, ಮನಸ್ಸು ದುರ್ಬಲವಾದಾಗ ಶಿಕ್ಷಣವಿದ್ದರೂ ಯಾವ ಪ್ರಯೋಜನಕ್ಕೆ ಬರದೆ ಮನಸ್ಸು ಮೈ ಆತ್ಮಹತ್ಯೆಗೆ ಶರಣಾಗುತ್ತದೆ. ಇಲ್ಲಿಯೂ ಶಾಂತಿಯ ಅಸಹಾಯಕತೆಯ ಸ್ಥಿತಿಯನ್ನು ಆಹುತಿಯ ಕಥೆಯಲ್ಲಿ ಗೌರಮ್ಮನವರು ತೋರಿಸುತ್ತಾರೆ.

'ನಾಲ್ಕು ಘಟನೆಗಳು' : ರಾಮು ಸೀತಾಗೆ ಬರೆಯುವ ಪತ್ರದಲ್ಲಿ ಆಫೀಸಿನ ದಾರಿಯಲ್ಲಿ ಹೋಗುತ್ತಿದ್ದಾಗ, ತಿಮ್ಮನ ಮನೆಯ ಮಗು ಬೀದಿಯ ಬಾಗಿಲಲ್ಲಿ ಆಡುವ ದೃಶ್ಯ, ಮುದ್ದಾದ ಮಗು ಮುಖದಲ್ಲಿ ಸದಾ ನಗು ತುಂಬಿರುವುದನ್ನು ಪ್ರತಿನಿತ್ಯವು ನೋಡಿರುತ್ತಿದ್ದೆ. ದಿನನಿತ್ಯದಲ್ಲಿ ಒಂದು ದಿನ ತಿಮ್ಮನ ಮನೆಯಿಂದ ಜೋರಾದ ಮಾತುಗಳು ಕೇಳಿಬಂದವು. ತಿಮ್ಮ ತನ್ನ ಹೆಂಡತಿಗೆ ಒಂದು ಬೆತ್ತದಿಂದ ಜೋರಾಗಿ ಹೊಡೆಯುತ್ತಿರುವ ದೃಶ್ಯ ಅಸಹಾಯಕಳಾದ ಹೆಣ್ಣು ತಿಮ್ಮನ ಶೋಷಣೆಗೆ ಬಲಿಯಾದಳೇ ವಿನಃ ಏನು ಮಾಡಲಾಗದ ಸ್ಥಿತಿ. ತಿಮ್ಮನ ಹೆಂಡತಿಯದಾಗಿತ್ತು.

ಮತ್ತೊಂದು ದಿನದ ವಿಚಾರವನ್ನು ಪತ್ರದಲ್ಲಿ ರಾಮು ಸೀತೆಗೆ ಬರೆಯುತ್ತಾನೆ. ತೋಟಕ್ಕೆ ಹೋದ ಪ್ರಸಂಗ ಅಲ್ಲಿಯ ಚಳಿಯನ್ನು ವಿವರಿಸುತ್ತಾ, ಆದಿನ ಕೋಟನ್ನು ಧರಿಸದೆ ಹೋಗಿ ಚಳಿಯಿಂದ ನಡುಗಿ ಬೇಗ ಬೇಗನೇ ಮನೆ ತಲುಪಬೇಕೆಂದು ಹೋಗುತ್ತಿದ್ದಾಗ ನಂದಿಯ ಮರದ ಅಡಿಯಲ್ಲೇ ಒಂದು ಹೆಂಗಸು. ಆ ಹೆಂಗಸಿನ ಮಡಿಲಿನಲ್ಲಿ ಒಂದು ಮಗು ನಿದ್ರೆ ಮಾಡುವ ದೃಶ್ಯ. ಮಗು ತಾಯಿಯ ವೆರಳಿನಲ್ಲಿ ನೆಮ್ಮದಿಯಾಗಿ ಇತ್ತು. ಆದರೆ ತಾಯಿ ಮಾತ್ರ ಚಳಿಯಿಂದ ನಡುಗಿ ಯಾವ ಆಸರೆಯೂ ಇಲ್ಲದೆ ಅನಾಥಳಾಗಿ ಒಂಟಿಯಾಗಿ ಕುಳಿತಿದ್ದಳು. ಅತ್ತು ಅತ್ತು ಕಣ್ಣುಗಳು ಕೆಂಪಾಗಿದ್ದವು. ಕೆದರಿದ ಕೂದಲು, ಹರಿದ ಸೀರೆ ಎಲ್ಲವನ್ನು ನೋಡಿ ಆ ಹೆಂಗಸಿನ ಹತ್ತಿರ ಹೋದಾಗ ವಿಚಾರ ತಿಳಿದೆ ಅವಳು ವಿಧವೆ ಎಂದು ಈ ಅನಾಥ ವಿಧವೆಯ ಬಳಿಯಲ್ಲಿ ಜಗಳವಾಡಿ ಮಗುವಿನ ಸಮೇತ ಮಧ್ಯ ರಾತ್ರಿಯೆನ್ನದೆ ಅಮಾನವೀಯವಾಗಿ ಅವಳ ಅತ್ತೆ ತಾನು ಒಂದು ಹೆಣ್ಣು ಎಂಬುದನ್ನು ಮರೆತು 'ಹೆಣ್ಣಿಗೆ ಹೆಣ್ಣೇ ಶತ್ರು' ಎನ್ನುವಾಗೆ ಆ ಹೆಂಗಸನ್ನು ಮನೆ ಬಿಟ್ಟು ಓಡಿಸಿದ್ದಾಳೆ. ಈ ಹೆಂಗಸು ಇಷ್ಟು ಹೊತ್ತಿನಲ್ಲಿ ಏನು ಮಾಡುತ್ತಾಳೆ. ಎಲ್ಲಿಗೆ ಹೋಗುತ್ತಾಳೆ, ಯಾರ ಆಶ್ರಯದಲ್ಲಿರುತ್ತಾಳೆ. ಹಾಲುಣಿಸುವ ಹಸುಕಂದಮ್ಮನನ್ನು ಕಟ್ಟಿಕೊಂಡು ಏನು ಮಾಡುತ್ತಾಳೆ ಅವಳ ಅಸಹಾಯ ಕತೆಯನ್ನು ಸೀತೆಗೆ ಮನಕರಗುವಂತೆ ರಾಮುವಿನ ಮುಖಾಂತರ ಗೌರಮ್ಮ ತಮ್ಮ ನಾಲ್ಕನೇಯ ಘಟನೆಯಲ್ಲಿ ಬರೆಯುವ ಪತ್ರದಲ್ಲಿ ನಾವು ಕಾಣುತ್ತೇವೆ. ಈ ರೀತಿಯ ಹೆಣ್ಣು ಮಕ್ಕಳು ನಮ್ಮಲ್ಲಿ ಕಂಡರೂ ಕಾಣದಂತೆ ಇರುವುದು ಈ ಸಮಾಜದ ದುರಂತ ಸ್ಥಿತಿ ಹಾಗೂ ವಿಷಾದದ ಸಂಗತಿ ಎಂದು ಹೇಳಬಹುದು.

'ಪುನರ್ವಿವಾಹ' ಕತೆ [೫]"ವಿಧವೆಯನ್ನು ಬೆಳಗಿನ ಹೊತ್ತಿನಲ್ಲಿ ನೋಡಿದರೆ ಅಮಂಗಲ ಸರಿ. ಆದರೆ ವಿಧುರನನ್ನೋ ? ಮದುವೆ ಎಂದರೇನೆಂದು ಗೊತ್ತಿಲ್ಲದ ಎಳೆಪ್ರಾಯದ ಮಗುವನ್ನು ಮುದುಕನೊಬ್ಬನ ಕೊರಳಿಗೆ ಕಟ್ಟಿ ಅವಳಿಗೆ ಬುದ್ಧಿ ಬರುವ ಮೊದಲೇ ಅವನು ಸತ್ತರೆ ತನ್ನ ಮುಂದಿನ ಭವಿಷ್ಯದ ಎಲ್ಲ ಆಯುಷ್ಯವು ಆ ಹೆಣ್ಣು ಮಗು ಅಮಂಗಲ ಸ್ವರೂಪಳಾಗಿಯೇ ಕಳೆಯಬೇಕು. ಆದರೆ ಮಕ್ಕಳಿರುವ ಹೆಂಡತಿಯೊಡನೆ ಸಂಸಾರ ಮಾಡಿದ ಗಂಡಸು ಅವಳು ಸತ್ತ ಮರುದಿನವೇ ಮುಗ್ಧ ಬಾಲಕಿಯನ್ನು ವಿವಾಹ ಆಗಿ ಅವಳನ್ನು ಆಜನ್ಮ ಶಿಕ್ಷೆಗೆ ಗುರಿ ಮಾಡುವುದು ಅನ್ಯಾಯ ಅಲ್ಲವೇ?"[೫] ಈ ಪುನರ್ವಿವಾಹ ಕಥೆಯಲ್ಲಿ ಗೌರಮ್ಮನವರು ಮುಂದಿಡುವ ಈ ವಾದ ಯಾರಿಗಾದರೂ ಯಾವ ಕಾಲದಲ್ಲಾದರೂ ನ್ಯಾಯ

---

[೫]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಪುಟ : ೧೫೧

ಸಮ್ಮತವೇ. ಪುರುಷ ಪಾತ್ರಗಳನ್ನು ಅಂದಿನ ಸಾಮಾಜಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ರೂಪಿಸುವ ಲೇಖಕಿ ಹೆಣ್ಣಿನ ಅಸಹಾಯಕತೆ ಅಸ್ಥಿರತೆಯನ್ನು ಗುರುತ್ತಿಸುತ್ತ ಹಾಗೂ ಆಕೆಯ ಪರವಾಗಿ ಮಾತನಾಡುತ್ತಲೇ ಆಕೆಯ ಸುಧಾರಣೆಯ ಅವಶ್ಯಕತೆಯು ಬಗ್ಗೆಯೂ ಸಮಾಜದ ಗಮನವನ್ನು ಸೆಳೆಯುತ್ತಾರೆ.

ಆಕರ ಗ್ರಂಥ : ೧೭೪ – ೧೮೫, ೬೮–೮೧, ೮೨–೮೮. ೧೨೫–೧೩೫, ೧–೨೦. ೧೬೬–೧೭೩, ೬೧–೬೭, ೧೩೯–೧೫೪,

ಪರಾಮರ್ಶನ ಗ್ರಂಥಗಳು :


ಡಾ॥ ಗೀತಾ ಪ್ರಸಾದ್, ಆದುನಿಕ ಮಹಿಳಾ ಅಭಿವ್ಯಕ್ತಿ, ಧಾತ್ರಿ ಪುಸ್ತಕ, ಬೆಂಗಳೂರು. ಪುಟ–

ಟಿ.ಎಸ್. ವೆಂಕಟಲಕ್ಷ್ಮಿ, ಕನ್ನಡ ಲೇಖಕಿಯರ ನೆಲೆ ಬೆಲೆ, ಎನ್.ಟಿ. ಶ್ಯಾಂ ಪ್ರಕಾಶನ, ಬೆಂಗಳೂರು. ಪುಟ – ೬೮–೭೧.

## ಅಧ್ಯಾಯ – ೨.೫ ಗೌರಮ್ಮನ ಕಥೆಗಳ ಭಾವ ಸಂಘರ್ಷ

ಗೌರಮ್ಮನವರು ಆ ಕಾಲದ ಬಹರಗಾರ್ತಿಯರಲ್ಲೇ ತುಂಬ ಜನಪ್ರಿಯ ಕತೆಗಾರ್ತಿ. ಇದಕ್ಕೆ ಕಾರಣ ಇವರ ಕಥನಪ್ರಜ್ಞೆ, ಅವರ ಕತೆಗಳು ಸ್ತ್ರೀಯರ ಸಾಹಿತ್ಯಿಕ ಬೆಳವಣಿಗೆಯ ದಾರಿಯಲ್ಲಿ ಒಂದು ಮೈಲಿಗಲ್ಲಾಗಿದೆ. ಅವರ ಸೀಮಿತವಾದ ಪಾತ್ರಗಳನ್ನು ನಿರೂಪಿಸಿದರೂ, ಅವುಗಳು ಉಂಟುಮಾಡುವ ಪರಿಣಾಮ ಮಾತ್ರ ಅದ್ಭುತವಾಗಿದೆ ಎಂದು ಈ ಕೆಳಗಿನ ಕತೆಗಳ ಮುಖಾಂತರ ನಾವು ತಿಳಿಯಬಹುದು. ಗೌರಮ್ಮನವರ ಕತೆಗಳನ್ನು ಕುರಿತು [1]"ಬೇಂದ್ರೆಯವರು ಅಂದಿನ ಪ್ರಧಾನಧಾರೆ ವಿಮರ್ಶೆ ಸಾಹಿತ್ಯ ಪತ್ಯಗಳು, ನಿರೀಕ್ಷಿಸುತ್ತಿದ್ದ ಸಾಹಿತ್ಯದ ಸ್ವರೂಪ, ಉದ್ದೇಶ, ಲಕ್ಷಣ ಇಂತಹ ಕಾವ್ಯಮೀಮಾಂಸೆಯ ಪರಿಕಲ್ಪನೆಗಳ ದೃಷ್ಟಿಕೋನವಾಗಿದೆ ಹಾಗೂ ಈ ದೃಷ್ಟಿಕೋನದ ಮಾನದಂಡದಲ್ಲಿ ಗೌರಮ್ಮನವರ ಕತೆಗಳು ಗೆದ್ದುಬಿಟ್ಟಿರುವುದನ್ನು ಬಿಂಬಿಸುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಬಹುಶಃ ಈ ಕಾರಣಕ್ಕೋ ಏನೋ ಗೌರಮ್ಮನವರು ಉಳಿದೆಲ್ಲಾ ಲೇಖಕಿಯರಿಗಿಂತ ಜನಪ್ರಿಯರೆನಿಸಿ ಬಿಟ್ಟಿದ್ದಾರೆ. ಕೆಲವೊಮ್ಮೆ ಈ ಜನಪ್ರಿಯತೆ ಯಾವ ಮಟ್ಟ ತಲುಪಿದೆಯೆಂದರೆ ಗೌರಮ್ಮನವರು, ಸ್ತ್ರೀವಾದಿ ಲೇಖಕಿ ಎಂದು ಯಾರೂ ನಿರ್ವಹಿಸದ ವಸ್ತುವನ್ನು ನಿರ್ವಹಿಸಿದ್ದಾರೆಂದು ಹೇಳುವ, ಉಲ್ಲೇಖಿಸುವ ಅತಿ ಸಂದರ್ಭಗಳು ಉಂಟು"[1] ಎಂದು ತಮ್ಮ ಸರಳ ಭಾಷೆಯ ಮೂಲಕ ಓದುಗರನ್ನು ಮೆಚ್ಚಿಸಿದ್ದೇ ಅಲ್ಲದೆ ಗೌರಮ್ಮನವರು ಇವುಗಳ ಮೂಲಕ ತಾವು ಜೀವನವನ್ನು ಎಷ್ಟು ಸಹಾನುಭೂತಿಯಿಂದ, ಸಮತೋಲನದಿಂದ ನೋಡಬಲ್ಲೆ ಎಂಬುದನ್ನು ತೋರಿಸಿ ಕೊಟ್ಟಿದ್ದಾರೆ. 'ನೀತಿ ಭೋದನೆಯು ತಮ್ಮ ಕೆಲಸ, ಕಥೆ ಹೇಳುವುದು ನಿಮಿತ್ತ ಮಾತ್ರ' ಎಂಬ ತಿಳಿವಳಿಕೆ ಮೂಡಿದ ಆ ಸಾಹಿತ್ಯಿಕ ಸಂದರ್ಭದಲ್ಲಿ ಧರ್ಮ, ನೀತಿ, ಮತ್ತು ಸಂಪ್ರದಾಯವನ್ನು ಕುರಿತು ಇವರು ಹೇಳಿದರೂ ತಮ್ಮ ಕಾಲದ ವಿಷಮತೆಗಳನ್ನು ಸ್ತ್ರೀಯುರನ್ನು ಕಾಡಿಸುವ ಪೀಡೆಗಳನ್ನು ಅತ್ಯಂತ ಪ್ರಭಾವಶಾಲಿಯಾಗಿ ಮೂಡಿಸುವುದರಿಂದಲೇ ಇವರ ಕಥೆಗಳು ಇಂದಿಗೂ ಓದಿಸಿಕೊಳ್ಳಬಲ್ಲವಾಗಿವೆ.

'ವಾಣಿಯ ಸಮಸ್ಯೆ' : ಕತೆಯಲ್ಲಿ ನಾವು ಮುಖ್ಯವಾಗಿ ಇಂದು ಮತ್ತು ರತ್ನನ ನಡುವೆ ಬರುವ ಭಾವಸಂಘರ್ಷವನ್ನು ನೋಡುತ್ತೇವೆ. ಬಾಗಿಲ ಸಂದಿನಿಂದ ದಣಿದು ಬೆಂಡಾಗಿದ್ದ ರತ್ನನನ್ನು ನೋಡುತ್ತಿದ್ದಂತೆ ಇಂದುವಿನ ಮನಸ್ಸಿನಲ್ಲಿ ಈ ಭಾವನೆಗಳು ಮೂಡತೊಡಗಿದವು. ಎಂದೂ ಇಲ್ಲದ ಆಲೋಚನೆಗಳು ಈ ದಿನ ಒಂದರ ಮೇಲೊಂದಾಗಿ ಬರತೊಡಗಿದವು. 'ಅಯ್ಯೋ ದೇವರೆ' ಎಂದು ಉಕ್ಕುತ್ತಿದ್ದ ಕಣ್ಣೀರನ್ನು ಸೆರಗಿನಿಂದ ಒರಸುತ್ತಾ ಒಳಗೆ ಬಂದಳು. ಆ ಒಂದು ಗಳಿಗೆಯ ಹಿಂದಿದ್ದ ಅವಳ ಶಾಂತಿ, ತೃಪ್ತಿ, ಸಂತೋಷ, ಅಭಿಮಾನ ಎಲ್ಲವೂ ಅವಳ ಜೀವನದಿಂದ ದೂರವಾಗಿ ಇಲ್ಲಿಯ ತನಕ ಅವಳನ್ನು ಎಂದೆಂದೂ ಹಿಂಸಿಸದ ಪ್ರಶ್ನೆಗಳು ಇಂದುವಿನ ಮನಸ್ಸಿನಲ್ಲಿ ಭುಗಿಲೇಳಲು ಪ್ರಾರಂಭವಾದವು ಪ್ರತಿಯೊಬ್ಬ ಮನುಷ್ಯರ ಜೀವನವು ಆತನು ಕಟ್ಟಿಕೊಂಡಿರುವ ನಿಲುವು ಸಮಾಜದ ಸುತ್ತಮುತ್ತಲಿನ ವಾತಾವರಣದ ಮೇಲೆ ನಿಂತಿರುತ್ತದೆ ಎಂಬುದರ ವಾಸ್ತವ ಸತ್ಯ ಇಂದುವಿಗೆ ಗೊತ್ತಿದ್ದರು, ಕ್ರಮೇಣ ದಿನದಿಂದ ದಿನಕ್ಕೆ ಹೇಗೆ ಇಂದು ಭಾವ ಸಂಘರ್ಷಕ್ಕೆ ಗುರಿಯಾಗುತ್ತಾಳೆ ಎಂಬುದನ್ನು ನಾವಿಲ್ಲಿ ಕಾಣುತ್ತೇವೆ.

---

[1] ಡಾ. ಗೀತಪ್ರಸಾದ್, ಆಧುನಿಕ ಮಹಿಳಾ ಅಭಿವ್ಯಕ್ತಿ, ಧಾತ್ರಿ ಪುಸ್ತಕ, ಬೆಂಳೂರು – ಪುಟ : ೪೧

ಇಲ್ಲಿ ವಾಣಿಯ ಜೀವನವನ್ನು ನೋಡುತ್ತಿದ್ದಂತೆ ಇಂದುವಿಗೆ, ಯಾವುದರ ಬೆಲೆಯು ಗೊತ್ತಿಲ್ಲದ ವಾಣಿಗೆ ಎಲ್ಲವನ್ನು ಕೊಟ್ಟ ಭಗವಂತ, ತನ್ನ ಬದುಕನ್ನೇಕೆ ಕತ್ತಲೆ ಕೂಪದಲ್ಲಿ ನೂಕಿದ, ಎಂದು ಎಷ್ಟು ಸಾರಿ ಯೋಚಿಸಿದರ್ರೂ ಇಂದುವಿಗೆ ಉತ್ತರ ದೊರೆಯುತ್ತಿಲ್ಲ. ಆದರೆ ಈ ರೀತಿ ಯಾವ ಭಾವನೆಗಳೂ ಇಲ್ಲಿಯ ತನಕ ಅವಳ ಮನಸಿನಲ್ಲಿ ಬಂದು ಹೋಗಿರಲಿಲ್ಲ. ಈಗ ತಾನೆ. ಭುಗಿಲೆದ್ದಿರುವ ಇಂತಹ ಭಾವನೆಗಳಿಂದ ತಾನು ಮುಕ್ತಳಾಗಬೇಕು, ಎಂದು ಎಷ್ಟುಸಾರಿ ಆಲೋಚಿಸಿದರು, ಇಂದುವಿಗೆ ಮಾತ್ರ ಆ ಭಾವ ಸಂಘರ್ಷದಿಂದ ಹೊರಗೆ ಬರಲು ಸಾಧ್ಯವೇ ಆಗುತ್ತಿರಲಿಲ್ಲ. ಕ್ರಮೇಣ ಮನಸ್ಸು ಮತ್ತು ಬುದ್ಧಿ ಎರಡು ಇಂದುವಿನ ಬದುಕಿಗೆ ವಿರುದ್ಧವಾದುದನ್ನೆ ಆಲೋಚಿಸುತ್ತಿರುವುದನ್ನು ಕಾಣುತ್ತೇವೆ.

ಆ ದಿನ ಇಂದುವಿಗೆ ವಾಣಿಯ ಅಳು ಮೋರೆಯನ್ನು ಕಂಡು ತನಗೆ ತಿಳಿಯದಂತೆ ಸ್ವಲ್ಪ ಹೆಚ್ಚಾಗಿಯೇ ಸಂತೋಷ ಉಂಟಾಯಿತು. [೨]"ಆ ಭಗವಂತ ಇಂತಹ ದುಃಖಗಳನ್ನೆಲ್ಲಾ ತನ್ನಗೊಬ್ಬಳಿಗೆಂದೇ ಮೀಸಲಾಗಿರಸಬೇಕೇಕೆ?. ವಾಣಿಗೂ ಅದರ ರುಚಿ ಕೊಂಚ ಗೊತ್ತಾಗಲಿ ಎಂದು ಮನದಲ್ಲೇ ಹೇಳಿಕೊಂಡಳು"[೨] ಆದರೆ ಇಂದುವಿಗೆ ಮರುಕ್ಷಣವೇ ಎಚ್ಚೆತ್ತ ಮನಸ್ಸು ತಾನು ಈ ರೀತಿಯಲ್ಲಿ ಆಲೋಚಿಸುವುದೂ ತಪ್ಪು ಎಂದು, ತನ್ನ ದುಃಖಕ್ಕೆ ಆಗಲಿ, ಸಂಕಟಕ್ಕೆ ಆಗಲಿ, ಕಾರಣಕರ್ತಳು ವಾಣಿ ಅಲ್ಲವೆಂದೂ ಗೊತ್ತಿದ್ದರೂ, ವಾಣಿಯ ಮಂಕಾದ ಮೋರೆಯನ್ನು ನೋಡಿ ಇಂದುವಿನಲ್ಲಿ ಅನುಕಂಪ ಹುಟ್ಟಲಿಲ್ಲ. ಬದಲಿಗೆ ಒಂದು ರೀತಿಯಲ್ಲಿ ಸಂತೋಷದ ಸಂಭ್ರವೇ ಗೋಚರವಾಯಿತು. ಆದರೆ ಈ ರೀತಿ ನಿಕೃಷ್ಟವಾದ ಮಟ್ಟದಲ್ಲಿ ತಾನು ಆಲೋಚಿಸುವುದು ತಪ್ಪು ಎಂದು ತಿಳಿದು ಅವಳ ಮನಸ್ಸಿನಲ್ಲಿ ಉಂಟಾದ ನೀಚ ಭಾವನೆಗಳ ಸಂಘರ್ಷವನ್ನು ನಾವಿಲ್ಲಿ ಕಾಣುತ್ತೇವೆ. ಹೀಗೆ ಇಂದು ಸರಿಯಾದ ಕ್ರಮದಲ್ಲಿಯು ಆಲೋಚಿಸಿ, ತನ್ನ ತಪ್ಪನ್ನು ತುಲನೆ ಮಾಡವ, ಭಾವನೆಯ ಸಂಘರ್ಷವನ್ನು ಇಲ್ಲಿ ಕಾಣುತ್ತೇವೆ.

ಆ ದಿನ ರತ್ನ ತನ್ನ ಮನೆಗೆ ಬಂದಾಗ ಅವನಿಗೆ ಆದ ಆಶ್ಚರ್ಯ, ಆನಂದ ಕೇವಲ ಒಂದೇ ಒಂದುಗಳಿಗೆ ಮಾತ್ರ. ಕೆಲವೇ ಕ್ಷಣಗಳ ಹಿಂದೆ, ವಾಣಿ ಬಡಿಸುತ್ತಿದ್ದ ಊಟವನ್ನು ತಿಂದು, ಇದು ನೆರೆಮನೆಯ ಇಂದುವಿನ ಕೆಲಸ ಎಂದು ತಿಳಿದು, ಆತನ ಮನಸ್ಸಿನಲ್ಲಿಯೇ ಈ ಭಾವನೆಗಳ ಸಂಘರ್ಷದ ಸುರಿಮಳೆ ಬರಲು ಪ್ರಾರಂಭವಾಗುತ್ತದೆ. [೩]"ನನ್ನ ವಾಣಿಯು ಹೀಗೆ ಕಾರ್ಯಕುಶಲೆಯಾಗಿದ್ದರೆ"[೩] ಎಂದು ಕೊಳ್ಳುವ ಬದಲಿಗೆ ರತ್ನ ತಾನು ಎಂದೂ ಯಾವತ್ತೂ ನೋಡದೆ ಇರುವ ಇಂದುವನ್ನು ಕಲ್ಪಿಸಿಕೊಳ್ಳುವುದಕ್ಕೆ ಪ್ರಾರಂಭಮಾಡುತ್ತಾನೆ. ಆದರೆ ಇಲ್ಲಿ ಇಂದುವಿಗೂ ಅಷ್ಟೇ ದಣಿದು ಬಳಲಿ ಬೆಂಡಾಗಿ ಬಂದಿದ್ದ ರತ್ನನನ್ನು ನೋಡಿ ಆತನನ್ನು ಹೇಗೆ ಸಂತೈಸಬೇಕು ಎಂದು ಇಂದುವಿನ ಸುಶೀಲವಾದ ಮತ್ತು ಸೃಜನಾತ್ಮಕವಾದ ಮನಸ್ಸು ಹೇಗೆ ಹಾತೊರೆಯುತ್ತಿತ್ತು ಎಂದರೆ, ಅದಕ್ಕೆ ವಾಣಿಯ ಮನೆಯ ಎಲ್ಲ ಕೆಲಸವನ್ನು ಇಂದು ವಾಣಿಯ ತಾನೇ ತನ್ನ ಕೈಯಲ್ಲಿ ಮಾಡುವ ಮುಖಾಂತರ ತನ್ನ ಮನಸ್ಸಿನಲ್ಲಿ ನಡೆಯುವ ನಿಕೃಷ್ಟ ಮಟ್ಟದ ಈ ನೀಚ ಭಾವನೆಗಳ ಸಂಘರ್ಷವನ್ನು ದೂರಮಾಡಬೇಕು,. ಎಂದು ಪ್ರಯತ್ನಿಸುವ ಸಮಾಜದ ಬಂಧನದಲ್ಲೇ ಇದ್ದು ಅದಕ್ಕೆ ಮನ್ನಣೆಯನ್ನು ನೀಡುವ ಇಂದುವಿನ ಉತ್ತಮ

[೨]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೯

[೩]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೦

ಭಾವನಾ ಪ್ರಪಂಚವನ್ನು ನಾವಿಲ್ಲಿ ಕಾಣುತ್ತೇವೆ.

ಆದರೆ ಆ ದಿನ ವಾಣಿಯು ಆಡಿದ ಎಲ್ಲ ಮಾತುಗಳು ಅವನಿಗೆ ಬಲು ದೂರದಿಂದಲೇ ಕೇಳಿಬರುತ್ತಿತ್ತು. ರತ್ನ ಅನ್ಯಮನಸ್ಕನಾಗಿ ಇರುವುದನ್ನು ನೋಡಿ ವಾಣಿಯು ಬೆಳಗಿನಿಂದಲೂ ಊಟವಿಲ್ಲದೆ ಬಹಳ ದಣಿದಿದ್ದರೂ ಎಂದು ಮನದಲ್ಲಿಯೇ ಸಂಕಟಪಟ್ಟು ಇನ್ನು ಮುಂದೆಯು ಹೀಗೆ ಆಗಬಾರದು ಎಂದು ಪ್ರತಿಜ್ಞೆ ಮಾಡಿದಳು. ಆದರೆ ಈ ಸನ್ನಿವೇಶವನ್ನು ಗಮನಿಸಿದಾಗ ಆದಿನ ರತ್ನ ತನ್ನ ಮನಸ್ಸಿನಲ್ಲಿ ಮೂಡಿದ ಇಂದುವಿನ ಮುಖಚರ್ಯೆಯನ್ನು, ಜೊತೆಗೆ ಅವಳ ವ್ಯಕ್ತಿತ್ವ ಬದುಕು, ಇದೆಲ್ಲವನ್ನು ತನ್ನ ಭಾವನೆಗಳ ತೆಕ್ಕೆಯಲ್ಲಿ ತೆಗೆದುಕೊಂಡು, ಅವನ ಮನಸ್ಸಿನಲ್ಲಿ ಆಗುವ ಉದ್ವೇಗವನ್ನು ಮತ್ತು ತಲ್ಲಣದ ಭಾವತೀವ್ರತೆಯನ್ನು ನಾವಿಲ್ಲಿ ಕಾಣಬಹುದು.

ಎಂದೂ ಅನ್ಯಮನಸ್ಕತೆಯಲ್ಲಿ ಇದ್ದ ಗಂಡನನ್ನು ನೋಡಿರದ ವಾಣಿ ಈ ದಿನ ನೋಡಿ ಪಾಪ ಅವಳ ಮನಸ್ಸು ಸಹಾ ಮುಗ್ಧತೆಯ ಭಾವನೆಗಳ ಸಂಘರ್ಷಕ್ಕೆ ತೆರಳುತ್ತದೆ. ಹೀಗೆ ಒಬ್ಬರಿಗೊಬ್ಬರು ಅವರ ಅರಿವೆಗೆ ಬಾರದೆ ಇರುವ ರೀತಿಯಲ್ಲಿ ಈ ಕತೆಯಲ್ಲಿ ಬರುವ ಎಲ್ಲ ಪಾತ್ರಗಳು ಭಾವಸಂಘರ್ಷಕ್ಕೆ ಈಡಾಗುವುದನ್ನು ಕಾಣುತ್ತೇವೆ.

[೪]"ಏನೇನು ಮಾಡಿದರೂ ತನ್ನ ಮನೋರಾಜ್ಯದಿಂದ ಮಾಸದ ಇಂದುವಿನ ಕಾಲ್ಪನಿಕ ರೂಪವನ್ನು ಸಂಪೂರ್ಣವಾಗಿ ಉಜ್ಜಿಬಿಡಲು ಅವನಿಗೆ ಕೊನೆಗೆ ತೋರಿದ ಒಂದೇ ಒಂದು ಉಪಾಯವೆಂದರೆ ಅವಳನ್ನು ಪ್ರತ್ಯಕ್ಷವಾಗಿ ನೋಡಿಬಿಡುವುದು"[೪] ಎಂದು ಆಗ ತನ್ನ ಮನಸ್ಸಿನ ಭ್ರಾಂತಿ ಕಳೆದುಹೋಗುವುದು ಎಂದು ರತ್ನ ನಿರ್ಧರಿಸಿದ.

ಇಂದುವನ್ನು ಪ್ರತ್ಯಕ್ಷವಾಗಿ ನೋಡುವುದು ರತ್ನನಿಗೇನು ಕಷ್ಟವಲ್ಲ. ಹೊತ್ತಿಲ್ಲದ ಹೊತ್ತಿನಲ್ಲಿ ಬಂದು ಇಂದುವನ್ನು ನೋಡಿ ಸಂಪೂರ್ಣವಾಗಿ ತನ್ನ ಮನಸ್ಸಿನಲ್ಲಿ ಉದ್ಭವವಾಗಿರುವ ಕಾಲ್ಪನಿಕ ಇಂದುವಿನ ಚಿತ್ರವನ್ನು ಉಜ್ಜಿ ಬಿಡಬೇಕು ಎಂದು ಬಂದ ರತ್ನ, ಮತ್ತೊಂದು ಭಾವನೆಗೆ ಈಡಾಗಿ ಇನ್ನೂ ಹೊಸದಾಗಿ ಇಂದುವನ್ನು ಚಿತ್ರಿಸಲು ಪ್ರಾರಂಭಿಸಿದ. ಯಾವುದನ್ನು ಮನಸ್ಸಿನಿಂದ ತೊರೆಯ ಬೇಕು ಎಂದು ಬಂದನೋ, ಆದರೆ ಆ ಭಾವನೆಯ ಮತ್ತೊಂದು ಬಂಧನದ ಸಂಬಂಧವನ್ನು ರತ್ನ ಬೆಳೆಸಿಕೊಂಡು ಹೋಗುವುದನ್ನು ನೋಡುತ್ತೇವೆ.

[೫]"ಹೌದು ; ಇಂದು ಅಳುತ್ತಿದ್ದಳು. ಬಿಕ್ಕಿ ಬಿಕ್ಕಿ ಚಿಕ್ಕಮಕ್ಕಳಂತೆ ಅಳುತ್ತಿದ್ದಳು. ತಲೆನೋವಿನ ಭಾದೆಗಾಗಿ ತಾನಳುವುದಿಲ್ಲವೆಂದು ಎಂದು ಗೊತ್ತಿದ್ದರೂ, ಅಳುವ ಕಾರಣವು ಏನೆಂದು ಅವಳಿಗೆ ತಿಳಿಯದಷ್ಟು ಸೂಕ್ಷ್ಮವಾಗಿತ್ತು"[೫] ಹೀಗೆ ಇಂದು ತನ್ನದೆ ಆದ ಭಾವ ಸಂಘರ್ಷದ ಪ್ರಪಂಚದಲ್ಲಿ ಮುಳುಗಿಹೋಗಿರಬೇಕಾದರೆ, ವಾಣಿ ರತ್ನನನ್ನು ಸಿನಿಮಾಗೆ ಕರೆದುಕೊಂಡು ಹೋಗದೆ ನೇರವಾಗಿ ಇಂದುವಿನ ಮನೆಗೆ ಬಂದಳು. ಇಂದುವಿಗೆ ಮತ್ತೇ ಮನಸಿನ ಸುತ್ತಾ ಸಂಕೋಚದ ಭಾವನೆಗಳು ಆವರಿಸಿಕೊಂಡವು. ಆದರೆ ರತ್ನನಿಗೆ ಅಳುತ್ತಿರುವ

---

[೪]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೧

[೫]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೭

ಇಂದುವನ್ನು ನೋಡಿ ಚಿಕ್ಕಮಕ್ಕಳನ್ನು ಸಂತೈಸುವಂತೆ ಇಂದುವನ್ನು ಸಂತೈಸಿ ಸಮಧಾನ ಮಾಡಬೇಕೆಂದು ಅನ್ನಿಸಿತು. ಹೀಗೆ ಇಂದು ಮತ್ತು ರತ್ನ ತಮ್ಮಮನದಾಳದ ಮಾನಸಿಕ ಭಾವನಾ ಪ್ರಪಂಚದ ಸಂಘರ್ಷಕ್ಕೆ ಸಿಲುಕಿ ಹೊರಳಾಡುತ್ತಿರುವ ಪಾತ್ರಗಳಾಗಿರುವುದನ್ನು ನೋಡುತ್ತೇವೆ. ಇದನ್ನೇ ನೇರವಾಗಿ ಸಮಾಜದಲ್ಲಿ ತೋರ್ಪಡಿಸಿಕೊಳ್ಳಲಾಗದೆ, ಅಂತರಾಳದಲ್ಲಿ ಈ ಭಾವನೆಗಳನ್ನು ಅಡಗಿಟ್ಟುಕೊಳ್ಳುವುದಕ್ಕೂ ಆಗದೆ ಹಿಂಸೆಗೆ ಗುರಿಯಾಗಿರುವ ಇಂದು ಮತ್ತು ರತ್ನನನ್ನು ನಾವಿಲ್ಲಿ ಕಾಣಬಹುದು.

ರತ್ನ ಒಬ್ಬನೇ ಸಿನಿಮಾಕ್ಕೆ ಹೋದ ಮೇಲೆ ವಾಣಿ 'ನೀವು ನೋಡಿದ ಚಿತ್ರಯಾವುದು? ಎಂದು ಕೇಳಿದರೆ 'ಅಳುತ್ತಿದ್ದ ಇಂದುವಿನ ಮುಖ' ಎಂದವನು ಹೇಳಬೇಕಾಯಿತು. ಆದರೆ ರತ್ನ ಇಂದುವಿನ ಭಾವನಾ ಪ್ರಪಂಚದಿಂದ ಹೊರಗೆ ಬರಬೇಕೆಂದು ಸಿನಿಮಾಗೆ ಹೋದರು. ಅಲ್ಲಿಯೂ ಆ ಭಾವನೆಯ ಸೆಳೆತದಿಂದ ಹೊರಗೆ ಬರಲು ಆತನಿಗೆ ಸಾಧ್ಯವಾಗಲೇ ಇಲ್ಲ. 'ಬಿಟ್ಟರೂ ಬಿಡದೀ ಈಮಾಯೆ ಯೋಗಿಗೆ ಯೋಗಿಣಿಯಾಗಿ ಕಾಡಿತ್ತು ಮಾಯೆ' ಹಾಗೆ ಇಂದು ಮತ್ತು ರತ್ನನನ್ನು ಈ ಮಾಯೆ ಕಾಡದೆ ಬಿಟ್ಟಿಲ್ಲ ಎಂದರೆ ತಪ್ಪಿಲ್ಲ. ಇಷ್ಟುದಿನ ಇಂದುವಿನಲ್ಲಿ ಇದ್ದ ಶಾಂತ ಜೀವನದ ಪ್ರವಾಹವನ್ನು ಕಲಕಿ ಕದಡುವ ಭಾವನೆಗಳಿಗೆ ತನ್ನ ಆಂತರ್ಯದಲ್ಲಿ ಎಡೆಯನ್ನು ಕೊಟ್ಟೆ ಏಕೆ? ಎಂದು ಇಂದು ತನ್ನನ್ನು ತಾನೆ ಪ್ರಶ್ನಸಿಕೊಂಡರು. ಆ ಪ್ರಶ್ನೆಯ ಗೊಂದಲಕ್ಕೆ ಎಷ್ಟು ಹುಡುಕಿದರು ಇಂದುವಿನಲ್ಲಿ ಉತ್ತರವಿಲ್ಲ. ಸದಾ ಅವಳನ್ನು ಬಾಧಿಸುವ ಸಂಕಟಕ್ಕೆ ಸಿಲುಕಿಸುವ ಮನಸ್ಸಿನ, ವೇದನೆಯಲ್ಲಿ ತುಂಬಿರುವ ಭಾವನೆಗಳೇ ಇಲ್ಲಿ ತಾಂಡವವಾಡುತ್ತಿತ್ತು. ವಾಣಿಯ ಪತಿಯನ್ನು ತಾನು ಪ್ರೀತಿಸುವುದು ಅನುಚಿತ ಎಂದು ಅವಳ ಸುಶೀಲವಾದ ಮನಸ್ಸು ಹೇಳುತ್ತಿದ್ದರೂ, ಆದರೆ ಅವಳು ಆ ವಿಷಯದಲ್ಲಿ ಏನು ಮಾಡಲಾರದವಳಾಗಿದ್ದಳು. [೬]"ಅವನನ್ನು ಪ್ರೀತಿಸದಿರುವುದು ಅವಳ ಶಕ್ತಿಗೆ ಮೀರಿದ ಮಾತಾಗಿತ್ತು"[೬].

[೭]"ಈಗಂತೂ ಹೋಗದ ಹೊತ್ತನ್ನು ಕೊಲ್ಲುವುದಕ್ಕೆ ಇಂದುವಿಗುಳಿದ ಒಂದೇ ಒಂದು ಸಾಧನ ಭಾವನ ಪ್ರಪಂಚದಲ್ಲಿ ಹಗಲು ಕನಸುಗಳನ್ನು ಹೆಣೆಯುವುದು. ಎಷ್ಟಾದರೂ ಇವೆಲ್ಲಾ ಕನಸುಗಳಿಗೆ ಎಂದು ಕಣ್ಣೀರು ತಂದುಕೊಳ್ಳುವುದು"[೭].

ರತ್ನ ಇಂದುವಿನ ಭಾವನೆಯಿಂದ ಬಿಡಿಸಿಕೊಂಡು ಹೊರ ಪ್ರಪಂಚಕ್ಕೆ ಬರಬೇಕು ಎಂದು ಆಲೋಚಿಸುತ್ತಿರುವಾಗಲೇ ಅದೇ ಇಂದುವಿನ ಭಾವನೆ ರತ್ನನ ಅಂತರಾಳಕ್ಕೆ ಬಂದು ಅಲೆಗಳು ಅಬ್ಬರಿಸುವಂತೆ ಅಬ್ಬರಿಸಿ ಆತನ ಮನಸ್ಸನ್ನು ಮತ್ತೊಮ್ಮೆ ಘಾಸಿಗೊಳಿಸಿ ಹೋರಟು ಹೋಗುತ್ತಿದ್ದವು. ಕೊನೆಗೆ ರತ್ನ ತನ್ನ ಮನದಾಳದ ಭಾವನೆಯನ್ನು ಕಾಗದದಲ್ಲಿ ಅನಾವರಣ ಮಾಡಿಕೊಟ್ಟನು. ಆದರೆ ಇಂದುವಿನ ಕೈಗೆ ಸೇರಿದ ಕಾಗದ ಕಣ್ಣೀರಿನಿಂದ ಒದ್ದೆಯಾಗಿ ಹೋಯಿತು. ಮತ್ತೊಂದು ನಿಮಿಷದಲ್ಲಿ ಒಲೆಯಲ್ಲಿ ಉರಿಯುತ್ತಿದ್ದ ಬೆಂಕಿಯಲ್ಲಿದ್ದು ಬೂದಿಯಾಗಿ ಹೋಯ್ತು.

ಹೀಗೆ ಇಂದು ಭಾವನೆಗಳ ತೊಳಲಾಟದಲ್ಲಿ ಮುಳುಗಿದ್ದಳು. ಇದರಿಂದ ಬಿಡುಗಡೆ

---

[೬]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೭

[೭]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೭

ದೊರೆಕಿಸಿಕೊಳ್ಳಲು ಎಷ್ಟೆಲ್ಲಾ ತನ್ನ ಬದುಕಿನಲ್ಲಿ ಬವಣೆಯನ್ನು ಅನುಭವಿಸುತ್ತಾಳೆ ಎಂದು ಗೌರಮ್ಮನವರು ಚಿತ್ರಿಸುತ್ತಾ ಸ್ವಾರ್ಥಿಯಾದ ರತ್ನನ ಈ ಭಾವಸಂಘರ್ಷಕ್ಕೆ ಈಡಾಗಿ ಹೇಗೆ ಪರಿತಪಿಸುತ್ತಾಳೆ ಎಂದು ಚಿತ್ರಿಸುತ್ತಾರೆ.

[೮]"ಅವಳು ಸ್ವಭಾವತಃ ಪಾಪಬೀರು, ಸಮಾಜದ ಕಟ್ಟು ಕಟ್ಟಳೆಗಳನ್ನೆ ದೇವರ ನಿಯಮಗಳು ಎಂದು ತಿಳಿದು ಬೆಳೆದಳು"[೮] ಹೀಗೆ ಸಮಾಜದ ಕಟ್ಟು–ಕಟ್ಟಳೆಗಳಿಗೆ ಹೆದರಿ ಕಂಗಾಲಾದ ಇಂದು ವಯೋಸಹಜ ಕಾಮನೆಗಳನ್ನು ಬೆಂಕಿಗಾಹುತಿ ನೀಡಿ ತಾನು ಪ್ರೀತಿಸಿದ ತನ್ನ ವ್ಯಕ್ತಿತ್ವಕ್ಕನುಗುಣವಾಗಿ, ಏಕಾಂಗಿಯಾಗಿ ಬದುಕು ನಡೆಸುತ್ತಿದ್ದು, ಗಂಡ ಸಾಯುವುದಕ್ಕೆ ಮೊದಲು ತನ್ನ ಹೆಸರಿಗೆ ಬರೆದಿದ್ದ ಪ್ರೀತಿಯ ಮನೆಯನ್ನು ಬಿಟ್ಟು ತನಗೆ ಯಾರ ಸಂಗಡ, ಸಹವಾಸವೇ ಬೇಡವೆಂದು, ಮೊದಲಿನಿಂದಲೂ ದಾಯಾದಿಗಳ ಕಿರುಕುಳದ ಬೇಗೆಯಲ್ಲಿ ಬೆಂದು ಹೋಗಿದ್ದ ದಾಯಾದಿಗಳನ್ನು ತ್ಯಜಿಸಿ, ನಾನು ಸ್ವತಂತ್ರವಾಗಿ ಬಾಳಬಲ್ಲೆ ಎಂಬ ವಿಶ್ವಾಸದಿಂದ ಹೊರಬಂದು, ಆ ಜಗತ್ತಿನಲ್ಲಿ ಕೆಲವು ವರ್ಷಗಳು ಮಾತ್ರ ಸಮೃದ್ಧಿಯ, ನೆಮ್ಮದಿಯ ಬದುಕನ್ನು ನಿರ್ವಹಿಸಿ ಕೊನೆಗೆ ದಾರಿ ಕಾಣದೇ, ಭಾವನೆಗಳ ದ್ವಂದದಲ್ಲಿ, ಸಂಘರ್ಷದಲ್ಲಿ ಮುಳುಗಿದ ಇಂದು ನಂತರ ದಾಯಾದಿಗಳ ಆಶ್ರಯಕ್ಕೆ ತೆರಳುವ ಮೂಲಕ ತನ್ನ ಸಮಸ್ಯೆಗೆ ಪರಿಹಾರ ಕಂಡುಕೊಂಡಳು ಎಂದು ಲೇಖಕಿ ಹೇಳಿದರೂ  ಇಂದು ರತ್ನನ ಭಾವನೆಯಿಂದ ಬಹುದೂರ ಸಾಗಿದರೂ ಅಲ್ಲಿ ದಾಯಾದಿಗಳ ಮನೆಯಲ್ಲಿ ಮತ್ತೊಂದು ರೀತಿಯ ಭಾವ ಸಂಘರ್ಷಕ್ಕೆ ಮತ್ತೇ ಇಂದು ಈಡಾಗುತ್ತಾಳೆ ಎಂದರೆ ತಪ್ಪಾಗುವುದಿಲ್ಲ.

ಊರಿನಿಂದ ಮರಳಿದ ವಾಣಿ ಇಂದು ಇಲ್ಲದನ್ನು ನೋಡಿ ಆಶ್ಚರ್ಯವಾಯಿತು! ಎಲ್ಲಿಗೆ ಹೋಗಿದ್ದಾಳೆ ಎಂದು ಆಲೋಚಿಸಿ ವಿಚಾರಿಸಿದಳು. ವಿಚಾರ  ತಿಳಿದು ಇನ್ನಷ್ಟು ಆಶ್ಚರ್ಯವಾಯಿತು. [೯]"ಅವರ ಮನೆಗೆ ತಾನೆಂದೆಂದಿಗೂ ಹೋಗುವುದಿಲ್ಲವೆನ್ನುತ್ತಿದ್ದ ಇಂದು, ಈಗೇಕೆ ತಾನಾಗಿ ಅಲ್ಲಿ ಹೋದಳು ಎಂಬುದನ್ನು ತಿಳಿಯುವುದು ವಾಣಿಯ ಸರಳ ಶಕ್ತಿಗೆ ಮೀರಿದ  ಮಾತಾಗಿತ್ತು"[೯] ಅಲ್ಲಿ ಹೀಗೆ  ವಾಣಿಯೂ ಸಹಾ ಮನಸ್ಸಿನ ಭಾವನೆಗಳ ಸಂಘರ್ಷಣೆಗೆ ಈಡಾದಳು.  ಇನ್ನು ಎಲ್ಲವನ್ನು ತಿಳಿದ ರತ್ನ ಏನು ತಿಳಿಯದವನಂತೆ ನಟಿಸಿ, ಸತ್ಯವನ್ನು ವಾಣಿಯ ಹತ್ತಿರ ಹೇಳಿಕೊಳ್ಳುವುದಕ್ಕೆ ಸಾಧ್ಯವಾಗದೆ ಇಂದುವಿನ ನೆನಪಿನಲ್ಲೇ ಹಾಗೂ ಅವಳ ಭಾವನೆಗಳನ್ನು ಆಂತರ್ಯದಲ್ಲಿ ಉಳಿಸಿಕೊಳ್ಳುತ್ತಾ ತಾನೂ ಸಹಾ ದ್ವಂದ್ವ ಭಾವನೆಗೆ ಈಡಾದುದ್ದನ್ನು ನೋಡುತ್ತೇವೆ.

ಲೇಖಕಿಯರು ಮೊದಲೇ ಹೇಳಿದಂತೆ 'ನೆರಮನೆ ಅಜ್ಜಿಹೋದರೆ ಕರುಕಟ್ಟಲು ಸ್ಥಳವಾಯ್ತು' ಎನ್ನುವ ಸ್ವಭಾವ ಇಂದುವಿನದಲ್ಲವಾದರೂ, ಸ್ವಭಾವತ ಇಂದು ಸದ್ಗುಣ ಸುಶೀಲೆ ಸಮಾಜದ ನೀತಿ ನಿಯಮವನ್ನು ಚಾಚು ತಪ್ಪದೆ ನಡೆಸಿಕೊಂಡು ಬಂದಿರುವಳು. ಇಂತಹ ಎಚ್ಚೆತ್ತ ಮನಸ್ಸಿನಲ್ಲಿ, ಇವಳ ಭಾವನೆಗಳೊಂದಿಗೆ ವಯೋ ಸಹಜ ಕಾಮನೆಯ ಭಾವನೆಗಳು ಹೇಗೆ ಇಂದುವಿನ ಜೀವನದಲ್ಲಿ ಸಂಘರ್ಷಕ್ಕೆ ಎಡೆ ಮಾಡಿಕೊಡುತ್ತದೆ ಎಂಬುದನ್ನು ನೋಡಬಹುದು.  ಇಂತಹ ಬಾಲ ವಿಧವೆಯನ್ನು ಪುರುಷ ಸಮಾಜದ ಯಾವ ದೃಷ್ಟಿಕೋನದಿಂದ ಅವರನ್ನು ನೋಡುತ್ತದೆ ಅದಕ್ಕೆ ಸ್ತ್ರೀ ಜಗತ್ತು ಹೇಗೆ ಬಲಿಯಾಗಿ

[೮]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೭

[೯]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೨೦

ಹೋಗುತ್ತವೆ ಎಂಬುದನ್ನು ಪುರುಷರ ದಬ್ಬಾಳಿಕೆಯ ಪ್ರಪಂಚದಲ್ಲಿ ನಾವು ಕಾಣಬಹುದು.

'ನನ್ನ ಮದುವೆ' : ಕಥೆಯಲ್ಲಿ ಬರುವ ನಾಯಕ ರಾಮುವಿಗೆ ಮೊದಲಿನಿಂದಲೂ ಇಂಗ್ಲೆಂಡಿಗೆ ಹೋಗಿ ಉನ್ನತ ವ್ಯಾಸಂಗ ಮಾಡಬೇಕೆಂಬ ಉತ್ಕಟವಾದ ಬಯಕೆ. ಆದರೆ, ರಾಮುವಿನ ತಂದೆ ವಿದೇಶದಲ್ಲಿ ಮಗನ ವ್ಯಾಸಂಗ ಮಾಡಿಸುವ ಆಸೆಯಿದ್ದರೂ ರಾಮುವಿನ ತಂದೆಗೆ ಆರ್ಥಿಕ ಪರಿಸ್ಥಿತಿ ಅಷ್ಟು ಅನುಕೂಲಕರವಾಗಿ ಇರಲಿಲ್ಲ. ರಾಮು ಇದೇ ಯೋಚನೆಯಲ್ಲಿ ಇರಬೇಕಾದರೆ, ರಾಮುವನ್ನು ಅವರ ತಂದೆ ಕರೆಸಿ ಈ ರೀತಿ ಹೇಳಿದರು. [೧೦]"ರಾಮು ನಿನಗಿಷ್ಟು ಬೇಗ ಮದುವೆ ಮಾಡುವ ಯೋಚನೆ ನನಗೂ ಇರಲಿಲ್ಲ. ಆದ್ರೆ ನೋಡು, ನೀನೀಗ ಮದ್ವೆ ಆದ್ರೆ ನಿನ್ನ ಇಚ್ಛೆಯಂತೆ ಯೂರೋಪಿಗೆ ಹೋಗಬಹುದು ಮಾವನ್ಮನೆಯವರು ನಿನ್ನ ಓದಿಸ್ತಾರಂತೆ–ಏನಂತಿ"[೧೦] ಎಂದಾಕ್ಷಣ ರಾಮು ದ್ವಂದ್ವಕ್ಕೆ ಈಡಾದ.

ಅಲ್ಲಿಂದ ರಾಮುವಿನ ಮನಸ್ಸಿನಲ್ಲಿ ಆದ ಭಾವಸಂಘರ್ಷವನ್ನು ನಾವಿಲ್ಲಿ ಗುರುತಿಸಬಹುದು. ಆದರೆ ತಂದೆ ಈ ವಿಚಾರ ತಿಳಿಸಿದಾಗ ರಾಮುವಿಗೆ ಮೊದಲಿಗೆ ಸಂತೋಷವೇ ಆಗುತ್ತದೆ. ಆದರೆ ಮನಸ್ಸಿನ ಸಂತೋಷದ ಭಾವನೆಯ ಜೊತೆಜೊತೆಗೆ ಆತ್ಮಗೌರವವನ್ನು ಬಲಿಕೊಡಬೇಕೆ ಎಂದು ತನ್ನಲ್ಲೇ ತಾನು ಪ್ರಶ್ನೆಯನ್ನು ಹಾಕಿಕೊಳ್ಳುತ್ತಾನೆ. [೧೧]"ರಾಮು, ಕಾಲೇಜಿನಲ್ಲಿ ವಾಗ್ವಾದಗಳಾದಾಗ ನಾನೆಷ್ಟು ಸಾರಿ ವರದಕ್ಷಿಣೆಯನ್ನು ತೆಗೆದುಕೊಳ್ಳಬಾರದೆಂದು ಚರ್ಚಿಸುತ್ತಿದ್ದೆ. ಅಷ್ಟೆ ಅಲ್ಲದೆ ನನ್ನ ವಿವಾಹದಲ್ಲಿ ಒಚಿದು .ಬಿಡಿಕಾಸನ್ನು ನಾನು ತೆಗೆದುಕೊಳ್ಳುವುದಿಲ್ಲ ಎಂದು ಅದೆಷ್ಟು .ಗೆಳೆಯರೊಂದಿಗೆ ನನ್ನ ಪೌರುಷವನ್ನು ಕೊಚ್ಚಿಕೊಂಡಿದ್ದೆ, ಸಮಾಜದಲ್ಲಿ ನಡೆಯುವ ಈ ವರದಕ್ಷಿಣೆ ಎಂಬ ಪಿಡುಗನ್ನು ಹಾಗೂ ಈ ಕಠೋರವಾದ ವ್ಯವಹಾರವನ್ನು ನಾನೆಷ್ಟು ಸಾರಿ ಖಂಡಿಸಿದೆ!!"[೧೧] ಎಂದು ರಾಮು ತನ್ನ ಮನಸ್ಸಿನಲ್ಲಿ ತಾನೇ ಮಾತನಾಡಿಕೊಳ್ಳುತ್ತಾ ಈಗ ತನ್ನ ವಿವಾಹವೇ ತನ್ನ ಇಚ್ಛೆಗೆ ವಿರೋಧದ ಹಾದಿ ಹಿಡಿಯುತ್ತಿದೆಯಲ್ಲ ಎಂದು ತನ್ನ ಮನಸ್ಸಿನ ಭಾವನೆಯ ವಿರುದ್ಧವಾಗಿ ತಾನು ಸಾಗಬೇಕಲ್ಲ ಎಂದು ಆ ರಾಮು ಭಾವಸಂಘರ್ಷಕ್ಕೆ ಗುರಿಯಾಗುವುದನ್ನು ನೋಡುತ್ತೇವೆ.

ಯಾವಾಗ ರಾಮು ಇಂತಹ ಭಾವನೆಗಳ ಸಂಘರ್ಷಕ್ಕೆ ಗುರಿಯಾಗುತ್ತಾನೋ, ಆಗಲೇ ಅವನ ಮಾತುಗಳು ಈ ರೀತಿಯಲ್ಲಿ ಇರುತ್ತದೆ [೧೨]"ನಾನು ಈ ಆತ್ಮಗೌರವವನ್ನು ಬಲಿಗೊಟ್ಟು, ಮನಸ್ಸಿಗೆ ವಿರೋಧವಾಗಿ ನಡೆದು, ಇಂಗ್ಲೆಂಡಿಗೆ ಹೋಗಬೇಕೇನು? ನನ್ನ ಚಿರಸಂಚಿತವಾದ ಆಸೆಯನ್ನು ಪೂರೈಸಿಕೊಳ್ಳಲೇ ಅಥವಾ ಮನಸ್ಸನ್ನು ವಂಚಿಸದೆ. ಆತ್ಮಗೌರವವನ್ನು ಕಾಯ್ದು ಕೊಳ್ಳಲೇ? ಈ ಎರಡೂ ನನಗೆ ಅತ್ಯಂತ ಪ್ರಿಯವಾದವುಗಳು ಏನು ಮಾಡಲಿ?"[೧೨] ಮನಸ್ಸಿನ ಸಂಘರ್ಷಕ್ಕೆ ತುತ್ತಾದ ರಾಮು ಆಲೋಚಿಸುತ್ತಾ ಇರಬೇಕಾದರೆ, ತಂದೆ ರಾಮುವನ್ನು ನೋಡಿ ಆನಂತರ ನಿರ್ಧಾರ ತಿಳಿಸು ಎಂದು ಹೇಳಿಹೋದರು. ಇಲ್ಲಿ ರಾಮುವಿಗೆ ಸಾಮಾಜಿಕ ಪಿಡುಗನ್ನು ಸಮಾಜದಿಂದ ತೊರೆದು ಹಾಕಬೇಕು ಎಂಬ ಸಾಮಾಜಿಕ ಕಳಕಳಿಯಿರುವುದನ್ನು ಗಮನಿಸುತ್ತೇವೆ. ಇಂತಹ ಕಳಕಳಿ ಇರುವುದರಿಂದಲೇ ಅವನ ಮನಸ್ಸಿನಲ್ಲಿದ್ದ ಭಾವನೆಗಳು ಈ ಮೇಲಿನ ಮಾತಾಗಿ ಹೊರಬಂದಿದ್ದು.

---

[೧೦] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೨೨೨

[೧೧+೧೨] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೨೨೨

ರಾಮುವಿನ ತಂಗಿ ರತ್ನಳ ಗಂಡ ಅನಂತನ ಮಾತನ್ನು ತೆಗೆದುಕೊಂಡರೆ, ಏಸ್ರಾಮು, ಏತಕ್ಕೆ ಯೋಚನೆ ಮಾಡುತ್ತಿದ್ದೀಯಾ ನೀನು. ವಿವಾಹವಾದರೆ ಈ ವರ್ಷಾನೇ ಇಂಗ್ಲೆಂಡಿಗೆ ಹೋಗ್ಬಹುದು. ನೀಬರೋತನಕ ಹುಡುಗಿ ಅವರ ತಂದೆಯ ಮನೆಯಲ್ಲಿ ಇರುತ್ತಾಳೆ. ನಿನ್ನ ಒಪ್ಪಿಗೆ ಪಡೆದೆ ಮೆಟ್ರಿಕ್ ಆದಮೇಲೆ ಕಾಲೇಜಿಗೂ ಕಳಿಸ್ತಾರಂತೆ, ಸಂಗೀತದ ಅಭ್ಯಾಸವನ್ನು ನಡೆಸುತ್ತಾ ಇದ್ದಾರೆ, ಒಳ್ಳೆ ಮಗ್ಳು, ಹುಡ್ಗಿ ತಂದೆ ಜಮೀನ್‌ದಾರರು, ಹೀಗೆ ಇರಬೇಕಾದರೆ. ನಿನ್ಗೇನೋ?

[೧೩]"ಬಡವರ ಹತ್ತಾದ್ರೆ ಹಣ ತಕ್ಕೋಬಾರ್ದು, ಅವರಾಗೇ ಕೊಡ್ತೇನೆ ಅನ್ನುವಾಗ ನಿನ್ಗೇನೋ? ನೀನೊಳ್ಳೆ ಲಕ್ಕಿಚಾಪ್ ಕಣೋ ಏನ್ಹೇಳ್ತಿ? ಹೂಂ ಅದ್ಬಿಡೋ"[೧೩] ಎಂದು ಅನಂತ ಒಂದೇ ಸಮನೆ ಹೇಳಿದ. ಅನಂತನ ಮಾತು ತನಗೆ ಅಷ್ಟು ಸರಿಕಾರಣಲಿಲ್ಲ. ಮನಸ್ಸು ಒಪ್ಪಲಿಲ್ಲ. ಸಾಯಂಕಾಲ ಮನೆಯವರು ಕೇಳಿದ ಅಭಿಪ್ರಾಯಕ್ಕೆ ಆಕಸ್ಮಿವಾಗಿ ನನ್ನ ಬಾಯಿಂದ 'ಆತ್ಲೆ' ಎಂಬ ಮಾತು ಹೊರಬಿಟ್ಟಿತು. ಅದಕ್ಕೆ ಮನೆಯವರೆಲ್ಲರೂ ಸಂತೋಷ ವ್ಯಕ್ತ ಪಡಿಸಿದರು.

ಈ ಮಾತೇ ರಾಮುವಿನ ಮನಸ್ಸಿನ ಭಾವ ಸಂಘರ್ಷಕ್ಕೆ ಈಡು ಮಾಡುತ್ತದೆ. [೧೪]"ಲವ್ ಮ್ಯಾರೇಜ್‌ಗಳಲ್ಲಿ ಸಂಪೂರ್ಣ ನಂಬಿಕೆ ಇಟ್ಟುಕೊಂಡ ನಾನು ಹಣಕ್ಕೋಸ್ಕರವಾಗಿ ನನ್ನನ್ನೇಕೆ ನಾನೇ ಮಾರಿಕೊಂಡೇ? ಮದುವೆಯೇ? ಮಾರಾಟವೇ ಇಲ್ಲ, ಕೇವಲ ಹಣಕ್ಕಾಗಿ ಒಬ್ಬ ಹುಡುಗಿಯ ಜೀವನವನ್ನೇಕೆ ಹಾಳು ಮಾಡಲಿ"[೧೪]. ಎಂದ ರಾಮುವಿಗೆ, ಸ್ತ್ರೀ.ಪರವಾದ ಕಾಳಜಿ ಇರವುದನ್ನು ಈ ಕತೆಯಲ್ಲಿ ನೋಡುತ್ತೇವೆ.

ರಾಮು ತನ್ನ ಜೀವನದ ಬಹು ಮುಖ್ಯವಾದ ಹಂತ ತಲುಪುತ್ತಿದ್ದ. ಆದರೂ ಆತನಿಗೆ ಸಂತೋಷ ಆಗುತ್ತಿರಲಿಲ್ಲ. [೧೫]"ಹಣವನ್ನು ಮದುವೆಯಾಗುವ ನನಗೆ, ಹುಡುಗಿ ನೋಡಿ ಮಾಡಬೇಕಾದುದೇನು?"[೧೫] ಯೂನಿವರ್ಸಿಟಿಗೆ ಸರ್ವ ಪ್ರಥಮನಾಗಿ ರಾಮು ಪಾಸಾಗಿದ್ದ. ಮನೆ ಮಂದಿ ಬಂಧುಬಳಗ, ಸ್ನೇಹಿತರು ಎಲ್ಲರಿಗೂ ಸಂತೋಷ, ಆದರೆ ರಾಮುವಿನ ಕನಸು ನನಸಾದ ದಿನವೂ ಆತ ಆನಂದಪಡದೆ ಮನಸ್ಸಿನ ಭಾವನೆಗಳ ಬೇಗೆಯಲ್ಲಿ ಬೇಯುತ್ತಿದ್ದ. ತನ್ನ ವೈಯಕ್ತಿಕ ಆಸೆ ಆಕಾಂಕ್ಷೆಗಳನ್ನು ಇಲ್ಲಿ ಮೊದಲಬಾರಿಗೆ ಪೂರೈಸಬೇಕು ಎಂದು ಆಲೋಚಿಸಿದರು. ರಾಮುವಿನ ಮನಸ್ಸು ಇಂತಹ ಹೀನ ಕೃತ್ಯಕ್ಕೆ ಈಡಾದೆನಲ್ಲ ಎಂದು ಪರಿತಪಿಸುತ್ತಿತ್ತು. ಇದರಿಂದಲೇ ತಿಳಿಯುತ್ತದೆ ಆತನದು ಸಮಾಜಮುಖಿವುಳ್ಳ ಧೋರಣೆ ಎಂದು.

ಮರುದಿನ ೧೦ ಗಂಟೆಗೆ ಧಾರೆ. ಅದಕ್ಕೆ ಮೊದಲೆ ತನ್ನ ಹೆಂಡತಿಯಾಗುವವಳನ್ನು ನೋಡಬೇಕೆಂಬ ಆಸೆಯಾಯ್ತು. ಹೇಗೆ ನೋಡಲಿ? ಮೊದಲು ನೋಡಬೇಕೆ? ಎಂದಾಗ ಬೇಡ ಎಂದು ನಾನೇ ಹೇಳಿದೆ, ಈಗ ನೋಡಬೇಕು ಎಂದರೆ ಏನೆಂದು ತಿಳಿದುಕೊಳ್ಳುತ್ತಾರೆ, ಹೀಗೆ ನಾನಾ ರೀತಿಯ ಭಾವನೆಗಳ ತಾಕಲಾಟ, ತೊಯ್ಲಾಟ ನಡೆಯುತ್ತಲೇ ಇತ್ತು.

---

[೧೩-೧೪] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೨೨೩

[೧೫] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೨೨೪

ಕೊನೆಗೂ ಶಾರಿಯನ್ನು ನೋಡಿದ ರಾಮುವಿಗೆ ಶಾರಿ ಆತನ ಕಲ್ಪನಾ ಸಾಮ್ರಾಜ್ಯದ ರಾಣಿಯಾಗಿರಲಿಲ್ಲ. ಎಣ್ಣೆಗೆಂಪು ಬಣ್ಣ : ತೆಳ್ಳಗೆ ಉದ್ದವಾಗಿದ್ದಳು. ಅಷ್ಟೇ ಅಲ್ಲ ರಾಮುವಿನ ಹೆಂಡತಿ ಶಾರಿ ಕುರುಡಿಯು ಆಗಿದ್ದಳು. ಇದು ರಾಮುವಿನ ಭಾವ ಸಂಘರ್ಷಕ್ಕೆ ಈಡಾದ ಮತ್ತೊಂದು ವಿಚಾರ. ಇವರ ಮುಖಾಂತರ ಲೇಖಕಿಯವರು ತಿಳಿಯ ಪಡಿಸುವುದೇನೆಂದರೆ ನಮ್ಮ ಕುಟುಂಬದ ಆರ್ಥಿಕ ವ್ಯವಸ್ಥೆ ಯಾವ ಮಟ್ಟದಲ್ಲಿ ಇದೆ ಎಂದು ತಿಳಿದು ನಂತರ ಆ ಮಟ್ಟಕ್ಕೆ ಅನುಕೂಲವಾಗುವ ರೀತಿಯಲ್ಲಿ ನಾವು ಆಸೆ ಆಕಾಂಕ್ಷೆಯನ್ನು ಪಡೆಯಬೇಕು. ಇಲ್ಲದಿದ್ದರೆ ಅರ್ಥವ್ಯವಸ್ಥೆಯೇ ಇದನ್ನು ನಿಯಂತ್ರಿಸುತ್ತದೆ ಎಂದು ಈ ಕತೆಯ ಮುಖಾಂತರ ತಿಳಿಸುತ್ತಾರೆ.

'ಒಂದು ಚಿತ್ರಕಥೆ' ಯಲ್ಲಿ ರೋಹಿಣಿಯೇ ಆಗಲಿ, ಚಂದರ್‌ನೇ ಅಗಲಿ, ಇಬ್ಬರೂ ಮದುವೆಯ ಮಂಟಪದಲ್ಲಿಯೂ ಒಬ್ಬರ ಮುಖವನ್ನು ಒಬ್ಬರು ನೋಡಿ ಕೊಂಡಿರಲಿಲ್ಲ. ಅಂತಹ ಭಾವನೆ ಇಬ್ಬರಲ್ಲೂ ಆವರಿಸಿತು. ಕೊನೆಗೆ ದಿನೇಶನ ಮನೆಯಲ್ಲಿ ರೋಹಿಣಿ ಚಂದರ್ ಬೇಟಿಯಾದದ್ದು ಎರಡುವಾರಗಳ ತನಕ ಸ್ನೇಹಿತರಾಗಿ, ನಾನಾ ವಿಚಾರಗಳ ಚರ್ಚೆನಡೆಸಿದ್ದು, ಚರ್ಚೆಯ ಜೊತೆಗೆ ರೋಹಿಣಿ ಚಂದರ್ ನಡುವೆ ಪ್ರೀತಿಯ, ಪ್ರೇಮದ, ಭಾವನೆಗಳ ಅಂಕುರವಾಗುವುದು. ಕತೆಯ ಅಂತ್ಯದಲ್ಲಿ ಒಬ್ಬರನ್ನೊಬ್ಬರು ನೋಡುವಾಗ ತಮ್ಮ ಮೊದಲಿನ ತಪ್ಪನ್ನೀಗ ತಿದ್ದಿಕೊಳ್ಳುವೆವು ಎಂಬ ಮನಸ್ಸಿನ ವೇದನೆ, ಹೀಗೆ ಮೊದ ಮೊದಲು ಭಾವಸಂಘರ್ಷದಿಂದ ಪ್ರಾರಂಭವಾದ ಕಥೆ ಅಂತ್ಯದ ವೇಳೆಗೆ ಭಾವ ಸಾಮರಸ್ಯಕ್ಕೆ ತಿರುಗುವುದನ್ನು ನೋಡುತ್ತೇವೆ. ಮನುಷ್ಯನ ಬದುಕಿನಲ್ಲಿ 'ಮದುವೆ ಎಂಬುದು ಅರ್ಥ ಪೂರ್ಣವಾದ ವ್ಯವಸ್ಥೆ. ಆದರೆ ಈ ಆಧುನಿಕ ಯುಗದಲ್ಲಿ ಅದೂ ಸಹ ವ್ಯವಹಾರಿಕವಾಗುತ್ತಿವೆ ಎಂದು ಕತೆಗಾರ್ತಿ ತಿಳಿಸಿದ್ದಾರೆ.

'ಆಹುತಿ' ಕತೆಯಲ್ಲಿ ಬರುವ ನಾಯಕ ರಘುವಿಗೆ, ಒಂದು ಕಡೆ ಲಂಡನ್ ವಿದ್ಯಾಭ್ಯಾಸದ ಕನಸು. ಮತ್ತೊಂದು ಕಡೆ ಶಾಂತಿಯ ಕೋಮಲವಾದ ಸೌಂದರ್ಯದ ಸೆಳೆತ, ಈ ಎರಡು ಭಾವನೆಗಳ ಸಂಘರ್ಷದ ಜೊತೆಗೆ ಎರಡರ ನಡುವೆ ಅಡ್ಡಗೋಡೆಯಂತಿರುವ ಶಾಂತಿಯ ಬಡತನ, ಇಂತಹ ವಾಸ್ತವದ ಪರಿಸ್ಥಿತಿಯನ್ನು ಎದುರಿಸುವ, ನಾಯಕ ಹೇಗೆ ಭಾವನೆಗಳ ವಿರುದ್ಧ ಹೋರಾಟಕ್ಕೆ ತುತ್ತಾಗಿ ದುರಂತ ನಾಯಕನಾಗುತ್ತಾನೆ ಎಂದು ನೋಡುತ್ತೇವೆ.

ಶಾಂತಿಯ ಮದುವೆ ಗೊತ್ತಾಗಿರುವುದು ತಿಳಿಸಿದ ನಂತರ, ಇದರಿಂದ ಶಾಂತಿಯ ಮದುವೆಗೆ ಆದ ಅಡೆತಡೆಗಳನ್ನು ತಿಳಿದು, ಆ ಶಾಂತಿಯ ಆತ್ಮಹತ್ಯೆಗೆ ಕಾರಣವನ್ನು ತಿಳಿದ ನಾಯಕ ರಘು ತಾನು ಸಹ ವರದಕ್ಷಿಣೆಯನ್ನು ಕೇಳಿದ ನೀಚನೆ ಎಂಬುವುದನ್ನು ಮರೆತು ಶಾಂತಿಯಂತಹ ಬಂಗಾರದ ಗೊಂಬೆಯನ್ನು ಮದುವೆಯಾಗಲು ವರದಕ್ಷಿಣೆಯನ್ನು ಕೇಳಿದ ವ್ಯಕ್ತಿಯನ್ನು ಇಲ್ಲಿ ರಘು ದೂಷ್ಪಿಸುವುದನ್ನು ನೋಡುತ್ತೇವೆ. ಅದೇ ದಿನ ಮನಸ್ಸಿನ ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿದ ರಘು ಮನೆಗೆ ಹಿಂತಿರುಗಿದಾಗ ರಘುವಿನ ತಂಗಿ ವಿಜಿ 'ನೀನು ಕೊಂದ ಹುಡಗಿ' ವರದಕ್ಷಿಣೆಗೆ ಆಹುತಿ ಎಂದು ಪತ್ರಿಕೆಯಲ್ಲಿ ತೋರಿಸಿದಾಗ, ತಾನು ಮನಸಾರೆ

ಮೆಚ್ಚಿದ ಶಾಂತಿಯೇ ತನ್ನ ಮದುವೆಗೆ  ಈ ಹಿಂದೆ ತನ್ನ ತಂದೆ ತನಗೆ ಗೊತ್ತುಮಾಡಿದ ಹುಡುಗಿ ಎಂದು ತಿಳಿದ ರಘು ದುರಂತನಾಯಕನಾಗಿ ನಿಲ್ಲುವುದರ ಜೊತೆಗೆ, ಕತೆಯ ಆರಂಭದಿಂದ ಅಂತ್ಯದವರೆಗೆ ರಘು ಭಾವಸಂಘರ್ಷದಲ್ಲೇ ಬರುವುದನ್ನು ನಾವು ಇಲ್ಲಿ ಕಾಣುತ್ತೇವೆ. ಸಮಾಜದಲ್ಲಿ ವರದಕ್ಷಿಣೆ ಮತ್ತು ಬಡತನ ಎಂಬ ಸಾಮಾಜಿಕ ಪಿಡುಗಿನಿಂದ ಒಂದು ಹೆಣ್ಣಿನ ದುರಂತ ಹೇಗೆ ಆಗುತ್ತದೆ ಎಂಬುದನ್ನು ಶಾಂತಿಯ ಪಾತ್ರದ ಮುಖಾಂತರ ತೋರಿಸಿ ಈ ಸಾಮಜಿಕ ಪಿಡುಗನ್ನು ಹೋಗಲಾಡಿಸಲು ಎಚ್ಚೆತ್ತುಕೊಳ್ಳಬೇಕಾದದ್ದು ಮೊದಲು ವಿದ್ಯಾವಂತ ಯುವಜನಾಂಗ ಎಂಬುದನ್ನು ತೋರಿಸುತ್ತದೆ.  ಈ ಅಂಶವನ್ನು ಗೌರಮ್ಮನವರು ತಮ್ಮ ಈ ಕತೆಯಲ್ಲಿ ನಿದರ್ಶನದೊಂದಿಗೆ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

'ಸುಳ್ಳು ಸ್ವಪ್ನ' ಕತೆಯ ನಾಯಕಿ ಸರಸಿ ವಯೋ ಸಹಜ ಬಯಕೆಯಂತೆ ಯುವಕನೊಬ್ಬನ ಪ್ರೇಮಪಾಶದಲ್ಲಿ ಸಿಲುಕುತ್ತಾಳೆ.  ಈ ವಿಚಾರವನ್ನು ಯಾರ ಬಳಿಯಲ್ಲಿ ಹೇಳಲು ಸಾಧ್ಯವಾಗದ ಭಾವ ಸಂಘರ್ಷಕ್ಕೆ ಈಡಾಗಿ ಕೊನೆಗೆ ದಿನಚರಿಯ ಮೊರೆ ಹೋಗುತ್ತಾಳೆ.

[೧೬]"ಮದುವೆ! ಮದುವೆಯೆಂದರೆ ಎಷ್ಟು ಮಂದಿ ಸಂತೋಷದಿಂದ ಹಿಗ್ಗುವರು ಸುಖದ ಹೆದ್ದಾರಿ ಮದುವೆಯಂತೆ! ನಿಜವೇ? ತಾನು ಪ್ರೀತಿಸುವವರನ್ನು ಪಡೆದ ವಧುಗಳಿಗೆ ನಿಜವಿರಬಹುದು. ನನಗೆ? ಆದರೆ ನನಗೆ? ಮದುವೆಯೆಂದರೆ ಸಾಯುವುದಕಿಂತಲೂ ಕಷ್ಟವಾಗಿ ತೋರುವುದೇಕೆ?  ಯಾರೊಡನೆ ಕೇಳಲಿ? ಕೇಳಿದರು ಹೇಳುವವರಾರು? ದೇವರನ್ನು ಬೇಡಲೇ?  ದೇವರಿದ್ದಾರಲ್ಲವ್ವೇ? ಬೇಡುವುದು ? ಅಣ್ಣನಿಗೆ ದಯವೇ ಇಲ್ಲವೇಕೆ? ಅಕ್ಕನ ಮಾತನ್ನು ಕೇಳುವವರಾರು? ಅವನು ವರನಾಗದ ಮದುವೆಯಲ್ಲಿ ನಾನು ವಧುವಾಗುವುದು ಹೇಗೆ.?..."[೧೬]

ಅವನು ಕಾಗದದಲ್ಲಿ ತನ್ನ ಜೀವನ  ಸುಖಸಂತೋಷದಲ್ಲಿ ಅಂತ್ಯ ಕಾಣಬೇಕು ಎಂದು ಬರೆದಿದ್ದಾನೆ ಎಂದು.  ಅವನಿಲ್ಲದ ಮೇಲೆ ಸುಖವೇ.........? ಅಯ್ಯೋ .. ಅವನ ಕಾಗದಗಳ  ಪ್ರತಿ ಶಬ್ದದಿಂದಲೂ ಉಕ್ಕುತ್ತಿರುವ ಪ್ರೇಮ. ಹೀಗಾಗುವುದೆಂದು ಯಾರಿಗೆ ತಿಳಿದಿತ್ತು? ನನಗೇಕೆ ಹುಚ್ಚು ಹಿಡಿಯುವುದಿಲ್ಲ?.... ನನ್ನನ್ನು ತನ್ನ ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಅಕ್ಕ ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ನೋಡುವ ಪತಿಯಿರುವರು ಅವರ ಅಷ್ಟೊಂದು ಪ್ರೀತಿಯ ಪ್ರತಿಫಲವಾಗಿ ಕೊಡಲು ನನ್ನಲ್ಲೇನಿದೇ? ಯಾವುದು ಮುಖ್ಯವೋ ಅದು ಮಾತ್ರ ನನ್ನೆಡೆಯಲಿಲ್ಲ ಏನುಮಾಡಲಿ? ಸಾಯಲಾರೆ – ಬದುಕಲಾರೆ  ಏನುಮಾಡಲಿ? ಏನು ಮಾಡಲಿ?.  ಹೀಗೆ ಪರಿತಪಿಸುವ ಸರಸಿಯನ್ನು ಕಾಣುತ್ತೇವೆ.  ಇಲ್ಲಿ ಸರಸಿಗೆ ಪ್ರೀತಿ ತೋರಿಸುವ ತನ್ನ ಪ್ರಿಯಕರನನ್ನು ಬಿಡಲು ಸಾಧ್ಯವಿಲ್ಲ.  ಪ್ರಾಣ, ಜೀವಕ್ಕಿಂತಲೂ ಹೆಚ್ಚಾದ ತನ್ನ ಗಂಡ ಅಕ್ಕನೊಂದಿಗೆ ನೆಮ್ಮದಿಯಿಂದ ಸಂಸಾರ ಮಾಡಲು ಸಾಧ್ಯವಾಗದೆ, ಭಾವನೆಗಳ ಜೊತೆ ಹೋರಾಟಕ್ಕೆ ಇಳಿದಿರುವ ಸಂಘರ್ಷದ ದೃಶ್ಯವನ್ನು ನೋಡುತ್ತೇವೆ.  ಕೊನೆಗೆ ಪ್ರಿಯಕರನ ಮದುವೆಯ ವಿಚಾರ ತಿಳಿದು ದುಃಖಿತಳಾಗುತ್ತಾಳೆ.  ನನಗಾಗಿ ಅವನೇಕೆ ಮದುವೆಯಾಗದಿರಬೇಕು? ನಾಳೆ ಕುಟುಂಬ ಸಮೇತ ತನ್ನ ಮನೆಗೆ ಬರುವ ಅವನಿಗೆ ಹೇಗೆ ಮುಖತೋರಿಸಲಿ? ಏನೆಂದು ಮಾತಾಡಲಿ? ಹೇಗೆ ಹೊರಗೆ ಹೋಗಲಿ? ಹೋಗದೆ

---

[೧೬] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೦೩

ಇರಲಾಗುವುದೇ? ದೇವರು ಆತನ ಕುಟುಂಬವನ್ನು ಸದಾ ಕಾಪಾಡಲಿ. ಇದೇ ನನ್ನ ಪ್ರಾರ್ಥನೆ.[೧೭] "ನಾನು! ದುಃಖಮಯವಾದ ಪ್ರಪಂಚದಲ್ಲಿ ನಾನೇಕೆ ಸುಖವನ್ನು ಬಯಸಬೇಕು? ಸುಖಪಡೆಯಲು ನನಗಾವ ಅಧಿಕಾರವೂ ಇಲ್ಲ ಆದರೆ ದೇವಾ! ನನಗೆ ಜ್ಞಾಪಕವನ್ನು ಮಾತ್ರ ಕೊಡಬೇಡ, ನೆನಪು ಬೀಸಿರುವ ಬಲೆಯಿಂದ ನನ್ನನ್ನು ಬಿಡಿಸು. ಮರೆಯಲು ಪ್ರಯತ್ನಿಸಿದಷ್ಟು ಚಿಗುರುವ ಜ್ಞಾಪಕದ ಹಿಡಿತದಿಂದ ನನ್ನನ್ನು ಪಾರುಮಾಡು. ನನಗೇಕೆ ಹುಚ್ಚು ಹಿಡಿಯುವುದಿಲ್ಲ?..."[೧೭] ಹೀಗೆ ಸರಸಿ ಅಂತರಾಳದ ಆಂತರ್ಯದ ಭಾವನೆಗೆ ಸಿಲುಕಿ, ಬದುಕಲೇ ಬೇಕಾದ ಅನಿವಾರ್ಯತೆಯ ಪರಿಸ್ಥಿತಿಗೆ ಸಿಲುಕಿದ ಹೆಣ್ಣಿನ ಭಾವನೆಗಳ ತೊಳಲಾಟದ ಪರಿಸ್ಥಿತಿಯನ್ನು ಇಲ್ಲಿ ಕಾಣುತ್ತೇವೆ. ಈ ವಿಚಾರವನ್ನು ಗಮನಿಸಿದರೆ ಹೊರಗಿನ ಸಂಗತಿಗಳು ವ್ಯಕ್ತಿಯ ಬದುಕನ್ನು, ಬಾಳಸಂಗಾತಿಯನ್ನು ನಿರ್ಧರಿಸುವ ಪರಿಣಾಮದ ದುರಂತವನ್ನು ಮನಗೊಂಡರೆ ಸಮಾಜದಲ್ಲಿ ವ್ಯಕ್ತಿಯ ಆದರ್ಶವೂ ಕೆಲವೊಮ್ಮೆ ದುರಂತಕ್ಕೆಡೆ ಮಾಡಬಹುದಾದ ಚಿತ್ರಣವನ್ನು ಈ ಕತೆಯಲ್ಲಿ ಗುರುತಿಸಬಹುದು. ಖಾಸಗಿಯಾದ ಸ್ತ್ರೀ ಪುರುಷರ ಸಂಬಂಧದಿಂದ ಕಂಡುಕೊಂಡ ಸಮಸ್ಯೆಗಳಿಗೆ ಕೆಲವು ಸಲ ಸಾಮಾಜಿಕ ಆಯಾಮವನ್ನು ಒದಗಿಸುವುದರ ಜೊತೆಗೆ ಸ್ವಂತದ ವಿಚಾರವನ್ನು, ಭಾವನೆಗಳನ್ನು ತಿಳಿಸುವುದಕ್ಕೆ ಇಲ್ಲಿ ದಿನಚರಿಯ ಮೊರೆಹೋಗುತ್ತಾರೆ.

'ಕೆಲವು ಕಾಗದಗಳು' ಪ್ರಭೆ ಮತ್ತು ವಸಂತನ ಸಹೋದರ ಸಹೋದರಿಯ ಸಂಬಂಧವನ್ನು, ಸಮಾಜ ಬಾಹೀರ ಸಂಬಂಧ ಎಂದು ಗುರುತಿಸುವಲ್ಲಿ ಅವರ ನಡುವೆ ಆಗುವ ಭಾವ ಸಂಘರ್ಷವನ್ನು ನಾವಿಲ್ಲಿ ನೋಡುತ್ತೇವೆ. ಇಲ್ಲಿ ಸಮಾಜ ನೋಡುವ ದೃಷ್ಟಿಕೋನ ಸ್ತ್ರೀ ಪುರುಷರಲ್ಲಿ ಬದಲಾಗಬೇಕು. ನೋಡುವ ನೋಟದಲ್ಲಿ ಹಿತಕರವಾದ ದೃಷ್ಟಿ ಇರಬೇಕೆ ಎಂಬುದನ್ನು ಚಿತ್ರಿಸುತ್ತಾರೆ. ವಸಂತ ಸತ್ತ ನಂತರ ಪ್ರಭೆ ಕಾಣೆಯಾಗುವುದು ಆ ಸುದ್ದಿಯನ್ನು ಪತ್ರಿಕೆಗಳಲ್ಲಿ ಪ್ರಕಟವಾಗುವಂತೆ ತಂತ್ರ ರೂಪಿಸಿದ್ದಾರೆ. ಆದರೆ ಈ ಘಟನೆಯನ್ನು ನೋಡಿದರೆ ಇಲ್ಲಿ ಖಾಸಗಿ ಸಂಗತಿಗಳು ಸಾಮಾಜಿಕ ಆಯಾಮಗಳಾಗುವುದನ್ನು ಕಾಣುತ್ತೇವೆ.

'ಮನುವಿನ ರಾಣಿ' ಕತೆಯಲ್ಲಿ ಬರುವ ಪಾರ್ವತಿಯ ಗಂಡ ಡಾಕ್ಟರ್‌ರನ್ನು (ವೈದ್ಯರು) ತೆಗೆದುಕೊಂಡರೆ ಮೊದಲು ರಾಜಮ್ಮನ ಮನೆಗೆ ಹೋಗಲು ಹಿಂಜರಿದ, ಆಗ ತೋರಿದ ಅಸಹನೆ, ಆನಂತರ ಅಲ್ಲಿ ರಾಜಮ್ಮ ಕರೆಯದಿದ್ದರೂ ರಾಜಮ್ಮನ ಮನೆಗೆ ಹೋಗಿ ಆಕೆಯನ್ನು ಸಮಾಧಾನ ಪಡಿಸಲೆತ್ನಿಸುವ ಡಾಕ್ಟರ್‌ನ ನೋಡಿದರೆ, ಅವರ ಮನದಲ್ಲಿ ಭಾವನೆಗಳ ಅಭಾವ ಸಂಘರ್ಷದಿಂದ ಹೊರ ಬಂದ ಡಾಕ್ಟರ್‌ಗೆ, ಹೇಗೆ ಕೊನೆಗೆ ರಾಜಮ್ಮನ ಪ್ರೀತಿಯ ಸಾಕ್ಷಾತ್ಕಾರದ ಅನಾವರಣವಾಗುತ್ತದೆ. ಎಂಬುದನ್ನು ತಿಳಿಯಬಹುದು.

ಸನ್ಯಾಸಿ ರತ್ನ : ನ ಕತೆಯಲ್ಲಿ ಬರುವ ರತ್ನ [೧೮] "ಮದುವೆಯ ಸುದ್ದಿ ಎತ್ತಿದರೆ ರತ್ನನಿಗೆ ಕೋಪ ಬರುತ್ತಿತ್ತು ಕೈಗಳಿಂದ ಕಿವಿಗಳನ್ನ ಮುಚ್ಚಿಕೊಂಡು 'ಘೂ' ಎನ್ನುತ್ತಿದ್ದ"[೧೮] ನಾನು ಸನ್ಯಾಸಿಯಾಗುತ್ತೇನೆ ಎನ್ನುತ್ತಿದ್ದ. ರತ್ನ ಸಂಗೀತಗಾರ್ತಿ ವಾಣಿಯ ಆಕರ್ಷಣೆಯಿಂದ ಅವನಲ್ಲಿ ಅಡಗಿರುವ ಮೊದಲ ಭಾವನೆಗಳಿಗೂ ವಾಣಿಯ ಪರಿಚಯದ ನಂತರ ಆತನ ಅಂತರಾಳದಲ್ಲಿ ಮೂಡಿದ ಭಾವನೆಗಳಿಗೂ ಆದ ಸಂಘರ್ಷದ ಪರಿಣಾಮದಿಂದ ಸನ್ಯಾಸಿ ರತ್ನ ಸಂಸಾರಿ ರತ್ನನಾಗಿರುವುದನ್ನು ನೋಡುತ್ತೇವೆ.

---

[೧೭] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೦೭

[೧೮] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೨೧

'ಪುನರ್ವಿವಾಹ' ಕತೆಯಲ್ಲಿ ರಾಜಿಯನ್ನು ಮದುವೆಯಾಗಲು ಬರುವ ವಿಧುರ ನನಗೇನು ಕಮ್ಮಿ? ನನಗೆ ಯಾವುದರ ಕೊರತೆ ಇದೆ? ನನಗಿನ್ನೂ ಮುವತ್ತೈದೇ ವರ್ಷ ವಯಸ್ಸು, ಐಶ್ವಯಕ್ಕೂ ತೊಂದರೆಯಿಲ್ಲ. 'ನನ್ನನ್ನು ಮದುವೆಯಾದರೆ ಅವಳ ಸುಖಕ್ಕೆ ಕೊರತೆಯೇನು? ಅವಳ ಯಾವ ಬಯಕೆಯನ್ನಾದರೂ ತನ್ನ ಐಶ್ವರ್ಯವು ಪೂರ್ತಿ ಮಾಡುವುದು. ಹೀಗಿರುವಾಗ ಅವಳು ನನ್ನನ್ನು ತಿರಸ್ಕರಿಸಲಾರಳು. ಅವಳಿಗೆ ನಾಚಿಕೆ ಅಷ್ಟೆ. 'ಅದೇಕೆ ರಾಜಿ ನನಗೆ ಕಾಣಿಸಿಕೊಳ್ಳುವುದಿಲ್ಲ' ನನ್ನನ್ನು ಮದುವೆಯಾಗಲು ಇಷ್ಟವಿಲ್ಲದೆ ಹಾಗೆ ಮಾಡುವುದಿಲ್ಲ'. ಮದುವೆಯಾದರೆ ಎಲ್ಲವು ಸರಿ ಹೋಗುತ್ತದೆ. ಮನದಾಳದ ಭಾವನೆಯ ಭ್ರಮೆಯಲ್ಲಿ ಇದ್ದ ವಿಧುರನಿಗೆ, ಇದ್ದಕ್ಕಿದ್ದ ಹಾಗೆ ರಾಜಿಯ ಮಾತನ್ನು ಕೇಳಿ ವಿಧುರನಿಗೆ ಬರ ಸಿಡಿಲು ಬಡಿದಂತಾಯಿತು. ನಿಮ್ಮಂತಹ ಕಾಮುಕರ ಮೋಹವನ್ನು ಪ್ರೇಮವೆಂದು ತಿಳಿದು ಮದುವೆಯಾಗುವ ಹುಚ್ಚಿ ನಾನಲ್ಲ ಹೀಗೆ ಹೇಳಿ ವಿಧುರನ ಮನಪರಿವರ್ತನೆಯನ್ನು ಮಾಡುವ ರೀತಿಯಲ್ಲಿ ರಾಜಿ ಆಡುವ ಮಾತುಗಳನ್ನು ಈ ಸನ್ನಿವೇಶದಲ್ಲಿ ನೋಡಬಹುದು. ಈ ರೀತಿಯ ಸನ್ನಿವೇಶದಿಂದ ವಿಧುರನ ಮನದಲ್ಲಿ ಆದ ಬದಲಾವಣೆಯ ಭಾವ ಸಂಘರ್ಷದ ಹಿನ್ನೆಲೆಯನ್ನು ತೆಗೆದುಕೊಂಡರೆ ಇಲ್ಲಿ ಹೆಣ್ಣನ್ನು ತುಂಬಾ ಕ್ರಾಂತಿಕಾರಿಯಾಗಿ ಚಿತ್ರಿಸಿ ಸಮಾಜದಲ್ಲಿನ ಪುರುಷ ಪ್ರಧಾನ ಧೋರಣೆ ಮೊದಲಾದವನ್ನು ಖಂಡಿಸಿ, ಪುನರ್ವಿವಾಹದ ಅವಕಾಶವನ್ನು ಖಚಿಡಿಸುವುದಲ್ಲದೆ, ಅಬಲೆಯರ ಉದ್ಧಾರಕ್ಕಾಗಿ ದೀಕ್ಷೆ ತೊಡುವುದನ್ನು ಈ ಸಂದರ್ಭದಲ್ಲಿ ವಿಧುರನಿಂದ ರಾಜಿ ಸಮಾಜ ಸುಧಾರಣೆಯ ಕಾರ್ಯವನ್ನು ಮಾಡುವುದನ್ನು ನೋಡುತ್ತೇವೆ. ಆದರೆ ಗೌರಮ್ಮನವರಿಗೆ ಮಾತ್ರ ಈ ಸಂಗತಿ ವಾಸ್ತವವಾದುದ್ದಲ್ಲ ಎಂಬುದನ್ನು ನಾವಿಲ್ಲಿ ಗುರುತಿಸಬಹುದು.

ಹೀಗೆ ಗೌರಮ್ಮನವರ ರಚನೆಗಳಲ್ಲಿ 'ಸಾಂಸ್ಕೃತಿಕ ಸಂಗತಿಗಳು' ಅನಾವರಣ ಗೊಂಡಿರುವುದನ್ನು ಈ ಕೆಳಗಿನಂತೆ ನೋಡುತ್ತೇವೆ. ಕುಟುಂಬ, ಸ್ತ್ರೀ ಪುರುಷರ ಸಂಬಂಧ, ಸ್ತ್ರೀಪುರುಷರ ಪಾತ್ರ ಚಿತ್ರಣ, ವಿವಾಹ, ಬಾಲ್ಯವಿವಾಹ, ಬಾಲ ವೈಧವ್ಯ, ವಿಧವಾ ವಿವಾಹ, ವಿಧುರ ವಿವಾಹ, ವಿವಾಹ ಪೂರ್ವ, ಗಂಡು-ಹೆಣ್ಣಿನ ಸಂಬಂಧ ಅಂತರ್‌ಜಾತಿ ವಿವಾಹ, ಅಂತರ್ ಧರ್ಮೀಯ ವಿವಾಹ, ಸ್ತ್ರೀಗೆ ಶಿಕ್ಷಣ, ಸ್ತ್ರೀ ಧರ್ಮ, ಧರ್ಮರಕ್ಷಕರು, ಮಠಾಧಿಪತಿಗಳು, ದೇವರು ಭಕ್ತಿ, ಆಸ್ತಿಯಲ್ಲಿ ಹೆಣ್ಣಿನ ಹಕ್ಕು. ಸೌಂದರ್ಯ ಈ ಸಂಗತಿಗಳನ್ನಲ್ಲದೆ ತಮ್ಮ ಜೀವನದ ಅನುಭವದ ಮಿತಿಯೊಳಗೆ ವೇಶ್ಯಾ ಸಮಸ್ಯೆ, ವರದಕ್ಷಿಣೆ, ಬಡತನ ಇತ್ಯಾದಿಗಳ ಸಾಮಾಜಿಕ ಪಿಡುಗನ್ನು ಹೋಗಲಾಡಿಸಲು ಬರೆಯುವ ಗೌರಮ್ಮನವರ ಮನೋಭಾವವನ್ನು ಅವರ ಈ ಕತೆಗಳಲ್ಲಿ ಕಾಣುತ್ತೇವೆ.

ಆಕರ ಗ್ರಂಥ

ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ - ೧-೨೦, ೨೧೯-೨೨೬, ೯೮-೧೦೭, ೨೧-೩೧, ೧೨೫-೧೩೫, ೧೫೫-೧೬೫, ೧೬೬-೧೭೩, ೧೩೯-೧೫೪, ೧೭೪-೧೮೫.

ಪರಾಮರ್ಶನ ಗ್ರಂಥಗಳು :

ಡಾ॥ ಗೀತಪ್ರಸಾದ್, ಆಧುನಿಕ ಮಹಿಳಾ ಅಭಿವೃದ್ಧಿ, ಧಾತ್ರಿ ಪುಸ್ತಕ, ಬೆಂಗಳೂರು. ಪುಟ-೧೫೦, ೧೫೧, ೧೬೩, ೧೬೪, ೧೬೫

# ಅಧ್ಯಾಯ – III

## ಸಮಾನತೆಗಾಗಿ ಹೋರಾಟ

ಗೌರಮ್ಮನ ಕಥೆಯ ಹಿನ್ನೆಲೆಯಲ್ಲಿ ಧಾರ್ಮಿಕ
ಮತ್ತು ಸಾಮಾಜಿಕ ಸ್ಥಾನಮಾನ
ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಗೌರಮ್ಮನ ಕಥೆಗಳು
ಸ್ತ್ರೀಗೆ ಶಿಕ್ಷಣ ಮತ್ತು ಆರ್ಥಿಕ ಸ್ವಾವಲಂಬನೆಯ ಚರ್ಚೆ

## ಗೌರಮ್ಮನ ಕಥೆಯ ಹಿನ್ನೆಲೆಯಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಸ್ಥಾನಮಾನ.

ಹೆಣ್ಣು ಹುಟ್ಟಿದ ಕ್ಷಣ ಸಡಗರವು ಇರುವುದಿಲ್ಲ. ಸಂಭ್ರಮವು ಪಡುವುದಿಲ್ಲ ಕಾರಣ ಹೆಣ್ಣು ಎಂಬ ಅತೃಪ್ತಿ. ಈ ಅತೃಪ್ತಿ ಆರೋಪವಾಗಿದೆ. ಹೆಣ್ಣು ಎನ್ನುವ ಶಬ್ಧವನ್ನು ತನ್ನ ಮೇಲೆ ಹೊತ್ತಿಕೊಂಡಿರುವುದಕ್ಕೆ ಯಾವ ವಿಚಾರಣೆಯಿಲ್ಲದೆ ಸಮಾಜದಲ್ಲಿ ಶಿಕ್ಷೆ ಅನುಭವಿಸಬೇಕಾದ ಸಂದರ್ಭ ಗೋಚರವಾಗುತ್ತಿದೆ. ಇದು ಎಂತಹ ದುರಂತ? ಮಹಿಳೆ ಎಷ್ಟು ದುಡಿದರೇನು? ಈ ಸಮಾಜದಲ್ಲಿ ಮಾತ್ರ ಅವಳಿಗೆ ಎರಡನೆಯ ಸ್ಥಾನ.  ಉದಾ: ಬುಡಕಟ್ಟು ಜನ ಹೆಣ್ಣು ಹುಟ್ಟಿತು ಎಂದರೆ ಸಪ್ಪೆಯ ಮುಖಮಾಡುತ್ತಾರೆ. ಬದಲಾಗಿ ಗಂಡುಮಗು ಎಂದರೆ ಕಂಚಿನ ಗಂಗಳ ಬಾರಿಸಿ ತಮ್ಮ ಹಿಗ್ಗನ್ನು ವ್ಯಕ್ತಪಡಿಸುತ್ತಾರೆ.

ಹೀಗೆ ಸಮಾಜದಲ್ಲಿ ಪುರುಷರು ಸ್ತ್ರೀಯರು ಬೇರೆಯಲ್ಲ ಇಬ್ಬರು ಒಂದೇ.  ಆದರೆ ಸಮಾಜದ ಭ್ರಾಂತಿ ಎಂದರೆ ಪುರುಷನೇ ಅತಿಬುದ್ಧಿವಂತ, ಸ್ತ್ರೀಯ ಬುದ್ಧಿಯೆಲ್ಲವು 'ಮೊಣಕಾಲಿನಿಂದ ಕೆಳಕ್ಕೆ' ಎಂದು ಹೇಳುತ್ತಾರೆ.  ಅದೇ ರೀತಿ 'ಅಳುವ ಗಂಡಸು, ನಗುವ ಹೆಂಗಸ' ನ್ನು ನಂಬಬಾರದು ಎನ್ನುತ್ತಾರೆ.  ಅಂದರೆ ಸಮಾಜದ 'ನಗು' ಎಲ್ಲವೂ ಕೇವಲ ಪುರುಷರಿಗೆ ಮಾತ್ರ ಮೀಸಲಾಗಿದೆಯೇ ? 'ಅಳು' ಎನ್ನುವುದು  ಮಹಿಳೆಯ ಆಜನ್ಮ ಸಿದ್ಧ ಹಕ್ಕಾಗಿದೆಯೇ? ಎಂದು. ಮಹಿಳೆ ಒಳಗೂ ಹೊರಗೂ ಎಷ್ಟೇ ದುಡಿದರು ಸಮಾಜದಲ್ಲಿ ಅವಳ ಸ್ಥಾನ ಬದಲಾಗಿಲ್ಲ. ಆದ್ದರಿಂದ ಅವಳನ್ನು ದುರ್ಬಲಳು ಎಂದು ಈ ಸಮಾಜ ಕರೆಯುತ್ತದೆ. ಆದರೆ ಬಿ.ಟಿ. ಲಲಿತಾನಾಯಕ್ ಹೇಳುತ್ತಾರೆ.

[೧]"ಹೆಣ್ಣು ಪಂಜರದ ಗಿಳಿಯೂ ಅಲ್ಲ, ಗಿಡದ ಹೂವು ಅಲ್ಲ ಕೊಟ್ಟಿಗೆಯ ದನವೂ ಅಲ್ಲ ಅವಳು ಪ್ರಜ್ಞಾವಂತೆಯಾದ ಮನುಷ್ಯಳು. ಈ ವ್ಯವಸ್ಥೆ ಕೇವಲ ಸಾಹಿತ್ಯದ ಭಾಷಣದಲ್ಲಿ ಮಾತ್ರ ಮೂಡಿ ಬರದೆ ಬದುಕಿನ ವಾಸ್ತವವೂ ಆಗಬೇಕೆಂದು ಬಯಸುತ್ತೇನೆ".ಎಂದು

ಇಂಥ ನಮ್ಮ ಸಮಾಜದಲ್ಲಿ ಹೆಣ್ಣಿನ ಬಗೆಯ ಸ್ಥಾನಮಾನಗಳು ಹೇಗೆ ಇವೆ. ಚಿತ್ರಿತಗೊಳ್ಳುತ್ತವೆ ಎಂದು ಗೌರಮ್ಮನವರು ತಮ್ಮ ಕಥೆಗಳ ಮೂಲಕ ತಿಳಿಸುತ್ತಾರೆ.

'ಮನುವಿನರಾಣಿ' ಕತೆಯನ್ನು ತೆಗೆದುಕೊಂಡಾಗ ಈ ಕಥೆಯಲ್ಲಿ ಬರುವ ಸಾಮಾಜಿಕ ಪಿಡುಗಾದ ವೇಶ್ಯೆಯರ  ಬದುಕಿನ ಚಿತ್ರಣವನ್ನು ನೋಡಬಹುದು. ವೇಶ್ಯಾವಾಟಿಕೆಯನ್ನು ನಡೆಸುವ ಜನರ ಸ್ಥಿತಿಗಳು ಹೇಗಿರುತ್ತದೆ? ಎಂಬುದನ್ನು ಈ ಕತೆಯಲ್ಲಿ ತಿಳಿಸುತ್ತಾರೆ.  ರಾಜಮ್ಮ ಈ ಕತೆಯ ನಾಯಕಿ.  ಈ ನಾಯಕಿಯನ್ನು ರಾಣಿ ಎಂದು, ರಾಜಮ್ಮನನ್ನು ಪ್ರೀತಿಸುತ್ತಿರುವ ಮೋಹನ. ಅವನನ್ನು ಮನು ಎಂದು  ಕತೆಯಲ್ಲಿ ಕರೆಯಲಾಗುತ್ತದೆ.  ರಾಜಮ್ಮನ ತಾಯಿ ವೇಶ್ಯೆ ಆದ್ದರಿಂದ ವಂಶ ಪರಂಪರೆಯಾಗಿ ಬಂದ ಈ ವೃತ್ತಿಯು ರಾಜಮ್ಮನಿಗೆ ಸಲ್ಲುತ್ತದೆ. ತಂದೆ ತಾಯಿ ಇಲ್ಲದ ಧನಿಕನಾದ ಮನು ರಾಜಮ್ಮನ ಹತ್ತಿರ ಬಂದವನು.  ಕೊನೆಗೆ ಅವಳ ಬಾಹ್ಯ ಸೌಂದರ್ಯವನ್ನು ಮಾತ್ರ ಮೋಹಿಸದೆ ಆಂತರ್ಯ ಸೌಂದರ್ಯಕ್ಕೆ ಮರುಳಾಗುತ್ತಾನೆ.  ಈ ವಿಚಾರ ತಿಳಿದ ರಾಜಮ್ಮನ ತಾಯಿ ಸೂಳೆಯರಿಗೆ ಹೃಯದವಿರಬಾರದು ಎಂದು ಮಗಳಿಗೆ

---

[೧]ಬಿ.ಟಿ. ಲಲಿತನಾಯಕ್, ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಸ್ತ್ರೀವಾದಿ ಚಿಂತನೆ, ಸೃಜನಶೀಲ ಪ್ರತಿಕ್ರಿಯೆ : ಪುಟ-೧೦೩

ಬುದ್ಧಿವಾದದ ಭೋಧನೆ ಮಾಡುತ್ತಾಳೆ. ಹೇಗಾದರೂ ಮಾಡಿ ಅವರ ಪ್ರೀತಿಯ ಬಾಂಧವ್ಯವನ್ನು ಅಳಿಸಿ ಹಾಕಬೇಕು ಎಂದು ಮೋಸದಿಂದ ಇಬ್ಬರನ್ನು ದೂರಮಾಡುತ್ತಾಳೆ. ನಿಜ ವಿಚಾರವನ್ನು ಅರಿತ ರಾಜಮ್ಮ ತಾನು ಮನೆ ಬಿಟ್ಟು ಹೊರಡುತ್ತಾಳೆ. ಮನುವನ್ನು ಸೇರುವ ವೇಳೆಗೆ, ಮನು ರೋಗಕ್ಕೆ ತುತ್ತಾಗಿ ಕಣ್ಣು ಕಳೆದುಕೊಡು ಹುಚ್ಚನಾಗಿ ಸಂಕಷ್ಟದಲ್ಲಿ ಇರುತ್ತಾನೆ. ಮನುವಿಗೆ ಪ್ರೀತಿಯಿಂದ ಸೇವೆಮಾಡಿ, ಗುಣಮುಖನನ್ನಾಗಿ ಮಾಡುತ್ತಾಳೆ. ಆದರೂ ಮನು ಬದುಕಿ ಉಳಿಯಲಾರನು. ಮನುವಿನ ಕೊನೆಯ ಸಮಯದಲ್ಲಿ ಉಪಚರಿಸಿದ ಡಾಕ್ಟರ್ ಪಾರ್ವತಿಯ ಗಂಡ, ರಾಜಮ್ಮನಿಗೆ ಮನು ದೂರವಾದ ನಂತರ ತನ್ನಲ್ಲಿ ಇರುವ ದು:ಖ ದುಗುಡವನ್ನು ಹೊರಹಾಕಲು ಯಾರಿಗೂ ಹೇಳದಿರುವ ಸತ್ಯವನ್ನು ವೈಯಕ್ತಿಕ ವಿಚಾರವನ್ನು– ಡಾಕ್ಟರ್‌ಗೆ ಕಾಗದದ ಮುಖಾಂತರ ತಿಳಿಸುತ್ತಾಳೆ. ತಿರಸ್ಕಾರದ ಮನೋ ಭಾವನೆಯಿಂದ ಕಂಡ ಸಮಾಜವನ್ನು ನೋಡಿ ಬೇಸತ್ತ ರಾಜಮ್ಮ ಹೃದಯವಂತಿಕೆಯಿಂದ ಬಂದು ಮನುವನ್ನು ಉಪಚರಿಸಿದ ಕಾರಣಕ್ಕಾಗಿ ಧನ್ಯವಾದಗಳನ್ನು ತಿಳಿಸುತ್ತಾ, ವೇಶ್ಯೆಯರು ಎಂದರೆ ಸಮಾಜ ಅವರನ್ನು ಕಾಣುವ ಬಗೆಯೇ ಬೇರೆ. ಹಣಕ್ಕಾಗಿ ಮೈಮಾರಿಕೊಳ್ಳುವ ಸೂಳೆಯರೆಂದೇ ಪರಿಗಣಿಸುತ್ತದೆ.

ಕತೆ ವೇಶ್ಯಾವಾಟಿಕೆಯಾದರು ಕತೆಯ ವಿಸ್ತಾರ ಮಾತ್ರ ಸಮಾಜದ ಸುತ್ತಮುತ್ತಲಿನ ಚಿತ್ರಣವನ್ನೇ ಕೊಡುತ್ತದೆ. ಪಾರ್ವತಿಯ ಗಂಡನಾದ ಡಾಕ್ಟರ್ ಕಥೆಯ ನಿರೂಪಕನಾಗಿ ಕಾಣಿಸುತ್ತಾನೆ. ೬ ಘಂಟೆಗೆ ಮನೆ ಬಿಟ್ಟರೆ ಮನೆಗೆ ಬರುವುದು ರಾತ್ರಿ ೧೧ ಗಂಟೆಯಾಗುತ್ತಿತ್ತು. ಸುಬ್ಬ ಹೊರಗೆ ಬಾಗಿಲು ತಟ್ಟುತ್ತಿದ್ದ ರಾಜಮ್ಮನವರ ಮನೆಯಲ್ಲಿ ಎಂದು ಆ ಹೆಸರನ್ನು ಕೇಳುತ್ತಲೇ ಪಾರ್ವತಿಗೆ ಕೋಪ ಬಂದು ಕದ ತೆಗೆಯುಲಿಲ್ಲ. ಮತ್ತೊಂದು ಸಾರಿ ತಟ್ಟಿದಾಗ ಡಾಕ್ಟರ್ ತನಗೆ ಕರ್ತವ್ಯವೇ ದೇವರು, ಉಳಿದವೆಲ್ಲವೂ ಬೇಡದ ವಿಚಾರ ಎಂದು ಪರಿಗಣಿಸಿ ರಾಜಮ್ಮನ ಮನೆಗೆ ಬಂದು, ರಾಜಮ್ಮನನ್ನು ಕಂಡನಂತರ, ವೈದ್ಯರಿಗೆ ತನ್ನ ವರ್ತನೆಯ ಬಗ್ಗೆ ತನಗೆ ನಾಚಿಕೆಯಾಯಿತು.

ಯಾರು ಸಮಾಜದಲ್ಲಿ ಅಂತಹವಳ ಹೆಸರು ಹೇಳಲು ನಾಚಿಕೆ ಪಡುತ್ತಾರೆಯೋ ಅದನ್ನು ಲೆಕ್ಕಿಸದೆ ಅಂತಹ ಹೆಂಗಸನ್ನು ಡಾಕ್ಟರ್ ತಮ್ಮ ಮಗಳು ಶಾಂತಿಗೆ ಹೋಲಿಸುವುದನ್ನು ನೋಡಿದರೆ ವೈದ್ಯರಿಗೆ ಎಂತಹ ಮಾನವೀಯತೆ ಇದೆ, ಎಂದು ತಿಳಿಯುತ್ತದೆ. ತಂದೆಯಂತೆ ಮಗಳು ಶಾಂತಿ ರಾಜಮ್ಮನನ್ನು ಸಮಾಧಾನ ಪಡಿಸಲು ಕೆಲಸದವಳ ಜೊತೆ ಹೋಗಲು ತಿಳಿಸುತ್ತಾಳೆ. ಅದಕ್ಕೆ ತಾಯಿ ಪಾರ್ವತಿ ತಿರಸ್ಕರಿಸುತ್ತಾಳೆ. ಕಾರಣ ಮಗಳು ಶಾಂತಿಯ ಭವಿಷ್ಯವೇ ಮುಖ್ಯವೇ ಹೊರತು ರಾಜಮ್ಮನ ಸ್ಥಿತಿಗತಿಗಳು ಅಲ್ಲ ಎಂದು ಅದಕ್ಕೆ ಪಾರ್ವತಿ ಹೇಳುತ್ತಾಳೆ,. ಎಲ್ಲೋ ಆಸ್ತಿಗಾಗಿ, ಹಣಕ್ಕಾಗಿ ರಾಜಮ್ಮ ವಿಷವನ್ನು ಹಾಕಿ ಕೊಂದಿರಬೇಕು. ಹಣಕ್ಕಾಗಿ ಏನನ್ನು ಬೇಕಾದರೂ ಮಾಡುವ ಕೆಟ್ಟ ಜನ ಅವರು. ಪಾರ್ವತಿ ಹಾಗೆ ತಿಳಿದ್ದುದರಲ್ಲಿ ತಪ್ಪಿಲ್ಲ. ಏಕೆಂದರೆ ಸಾಮಾನ್ಯಳಂತೆ ಪಾರ್ವತಿಯು ಒಬ್ಬಳು.

ಆದರೆ ಡಾಕ್ಟರ್ ಪಾರ್ವತಿಯ ಸಂಶಯವನ್ನು ತೆಗೆದು ಹಾಕಿ, ರಾಜಮ್ಮನ ಅವಳ ವ್ಯಕ್ತಿತ್ವದ ಬಗೆ ಅತ್ಯುತ್ತಮವಾದ ಗೌರವದ ಮಾತುಗಳನ್ನಾಡುತ್ತಾರೆ. ಈಗ ರಾಜಮ್ಮ

ಕರೆಯದಿದ್ದರು, ತನ್ನ ಮನೆಗೆ ಬಂದು ಕಾಗದ ಓದಿ ಪಾರ್ವತಿಯನ್ನು ಕರೆದುಕೊಂಡು ರಾಜಮ್ಮನ ಮನೆಗೆ ಹೋಗುತ್ತಾರೆ. ಆದರೆ ಅಲ್ಲಿ ರಾಜಮ್ಮ ಇರುವುದಿಲ್ಲ ಅವಳ ಕರುಣಾ ಜನಕವಾದ ಮಾತುಗಳು ಮಾತ್ರ ಇರುತ್ತವೆ.

ನಮ್ಮಂತಹ ಜನರಿಗೆ ಕಷ್ಟ ಬಂದಾಗ ಸಹಾಯ ಮಾಡುವುದು ಸಹ ಮನುಷ್ಯ ಧರ್ಮಕ್ಕೆ ವಿರೋಧವೆಂದು ಭಾವಿಸುವವರೇ ಹೆಚ್ಚು. ಇಷ್ಟು ವರ್ಷಗಳಲ್ಲಿ ನಮ್ಮಿಬ್ಬರ ವಿಷಯದಲ್ಲಿ ಮಾನವೀಯತೆಯ ದೃಷ್ಟಿಯಲ್ಲಿ ಕಂಡವರು ನೀವೊಬ್ಬರೆ ಎಂದು ನಿಮ್ಮಂತಹ ಉತ್ತಮರಿಗೆ ಕೊಡಲಿಕ್ಕೆ ಈ ದಟ್ಟ ದಾರಿದ್ರ್ಯ ಪ್ರಾಣಿಯಲ್ಲಿ ಏನು ಇದೆ ಹೇಳಿ ಎಂದು ಆ ಭಗವಂತ ನಿಮಗೆ ಒಳ್ಳೆಯದನ್ನು ಮಾಡಲಿ, ಅವನ ಅನುಗ್ರಹ ನಿಮ್ಮ ಮೇಲೆ ಸದಾ ಕಾಲ ಇರಲಿ, ಎಂದು ಕೇಳುವ ಮೂಲಕವೇ ರಾಜಮ್ಮನ ಆಂತರ್ಯವನ್ನು ಅರ್ಥಮಾಡಿಕೊಳ್ಳಬೇಕು.

ರಾಜಮ್ಮನನ್ನು ಈ ಹಿನ್ನೆಲೆಯಲ್ಲಿ ನೋಡಿದರೆ ಆಗ ವಾಸ್ತವದ ಸತ್ಯ ತಿಳಿಯುತ್ತದೆ, ಹಣಕ್ಕಾಗಿ ಈ ವೃತ್ತಿಯನ್ನು ಹಿಡಿದವಳಲ್ಲ, ತಾಯಿಯಿಂದ ಬಳುವಳಿಯಾಗಿ ತೆಗೆದು ಕೊಂಡವಳು 'ನೂಲಿನಂತೆ ಸೀರೆ ತಾಯಿಯಂತೆ ಮಗಳು' ಎನ್ನುವ ಗಾಥೆಯ ಮಾತನ್ನು ಸುಳ್ಳಾಗಿಸಿದಳು. ತಾಯಿಯ ಶೋಷಣೆಗೆ ರಾಜಮ್ಮ ಈಡಾದಳು. ಹೀಗಾಗಿ ಈ ಕತೆಯಲ್ಲಿ ವೇಶ್ಯೆ ಬದುಕಿನ ಚಿತ್ರಣ–ಸಮಾಜ ಅದನ್ನು ನೋಡುವ ದೃಷ್ಟಿಕೋನದಲ್ಲಿ ಬದಲಾವಣೆ ಕಾಣುವುದು ಹೇಗೆ ಅನಿವಾರ್ಯ ಎಂಬುದನ್ನು ಗೌರಮ್ಮನವರು ನಿರೂಪಿಸಿದ್ದಾರೆ.

ಹೀಗೆ ಸಮಾಜದಲ್ಲಿ ವೇಶ್ಯೆಯರ ಬದುಕು ಎಷ್ಟು ದುರಂತವಾಗಿ ಇರುತ್ತದೆ, ಎಂಬುದನ್ನು ನಾವು ಕಲ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಪ್ರೀತಿ ಎನ್ನುವುದು ಕೇವಲ ಕೆಲವೊಬ್ಬರ ಸ್ವತ್ತಲ್ಲ. ಅದು ಸರ್ವಾಂತರ್ಯಾಮಿ ಹಾಗಾದರೆ, ವೇಶ್ಯೆಯಲ್ಲಿ ಪ್ರೀತಿ ಹುಟ್ಟಬಾರದೆ? ಹಾಗೇನಾದರೂ ಹುಟ್ಟಿದರು ಆ ಪ್ರೀತಿಗೆ ಸಮಾಜದಲ್ಲಿ ಯಾವ ಬೆಲೆಯು ಇಲ್ಲವೇ? ಸಮಾಜ ಈ ವೇಶ್ಯೆಯರಲ್ಲಿ ಕಲ್ಮಶವಿಲ್ಲದ ನಿರ್ಮಲವಾದ ಪ್ರೀತಿ ಇರುವುದಿಲ್ಲ ಎಂದು ಹೇಗೆ ನಿರ್ಧರಿಸುತ್ತದೆ?. ಪ್ರೀತಿ ಎನ್ನುವುದು ಮೇಲ್ನೋಟಕ್ಕೆ ಸಿಗುವ ವಸ್ತುವಲ್ಲ. ಭಾವನೆಗಳಿಂದ ದೊರೆಯುವ ಸುಖವೇ ಪ್ರೀತಿ. ಹಾಗಾದರೆ ವೇಶ್ಯೆಯರಿಗೆ ಉತ್ತಮ ಭಾವನೆಗಳು ಹುಟ್ಟುವುದೇ ಇಲ್ಲವೇ? ಹುಟ್ಟಿದರು, ಸಮಾಜ ಮಾತ್ರ ನೋಡುವ ರೀತಿಯೇ ಬೇರೆಯಾಗಿರುತ್ತದೆ. ಹಾಗಾದರೇ? ವೇಶ್ಯೆಯರು ಮನುಷ್ಯರಲ್ಲವೇ? ಅವರಿಗೆ ಮಾನವನ ಹೃದಯವಿಲ್ಲವೇ? ಹೀಗೆ ನಾನಾ ರೀತಿಯ ಪ್ರಶ್ನೆಗಳು ಏಳುತ್ತವೆ.

ಆದ್ದರಿಂದ ಸಮಾಜದಲ್ಲಿ ವೇಶ್ಯೆಯರನ್ನು ನೋಡುವ ದೃಷ್ಟಿಕೋನ ಮೊದಲು ಬದಲಾಗಬೇಕು. ಪ್ರತಿಯೊಬ್ಬ ಮನುಷ್ಯನು ವೇಶ್ಯೆಯರನ್ನು ಮಾನವೀಯತೆಯ ದೃಷ್ಟಿಯಿಂದ ಕಾಣಬಹುದು. ಏಕೆಂದರೆ, ಮೊದಲು ನಮ್ಮ ಪ್ರಜ್ಞೆಗೆ ಬರುವುದು ಅವಳು ಒಬ್ಬಳು ಮನುಷ್ಯಳು ಎಂದು, ಆನಂತರ ಅವಳು ಮಾಡುವ ವೃತ್ತಿಯನ್ನು ಪರಿಗಣಿಸಬೇಕು.

ಹೀಗೆ ವೇಶ್ಯೆಯರಲ್ಲೂ ಪ್ರೀತಿಯ ಸಾಕ್ಷಾತ್ಕಾರವಿದೆ ಎಂದು ಮನುವನ್ನು ಮತ್ತು ರಾಜಮ್ಮನನ್ನು ನೋಡಿದಾಗ ನಮಗೆ ಅರಿವಾಗುತ್ತದೆ. ಆದ್ದರಿಂದಲೇ ಮೇಲ್ನೋಟಕ್ಕೆ ಸಮಾಜ

ಯಾವುದನ್ನು ಹೀಗೆಂದು ನಿರ್ಧರಿಸಬಾರದು. ಇಲ್ಲಿ ಮನುಷ್ಯನ ಅಂತರ್ಯವೇ ಮುಖ್ಯ ಎಂಬುದನ್ನು ಪರಿಗಣಿಸಬೇಕು. ರಾಜಮ್ಮನನ್ನು ನೋಡಿದರೆ ಎಂತಹ ಮಾನವೀಯತೆ ಉಳ್ಳಂತಹ ಹೆಣ್ಣು ಎಂದು ತಿಳಿಯುತ್ತದೆ. ಅದನ್ನು ಈ ಕಥೆಯಲ್ಲಿ ಬರುವ ಡಾಕ್ಟರ್ ಪಾತ್ರದಲ್ಲಿ ಗೌರಮ್ಮನವರು ತಿಳಿಸುತ್ತಾರೆ.

ಹೀಗೆ ವೇಶ್ಯೆಯರೆಲ್ಲರು ಹಣಕ್ಕಾಗಿ ಮೈಮಾರುವವರು ಎಂಬ ತುಚ್ಛ ಭಾವನೆಯನ್ನು ಬಿಡಬೇಕು. ಎಲ್ಲ ವೇಶ್ಯೆಯರು ಆ ರೀತಿ ಇರುವುದಿಲ್ಲ. ಹಣವನ್ನು ತಿರಸ್ಕರಿಸಿ, ಮನಸ್ಸನ್ನು ನೀಡುವ ರಾಜಮ್ಮನಂತವರು ಸಮಾಜದಲ್ಲಿ ಇರುತ್ತಾರೆ. ಅವರನ್ನು ಮಾನವೀಯತೆಯಿಂದ ಕಾಣಬೇಕೆಂಬ ಧೋರಣೆ ಗೌರಮ್ಮನವರದು.

ಹಾಗಾಗಿ ಈ ಕತೆಯ ಕೇಂದ್ರ ಕಾಳಜಿ ವೇಶ್ಯಾ ಬದುಕಿನ ಅನಾವರಣವಾದರೂ, ಸಮಾಜ ಮಾತ್ರ ಇಂತಹದನ್ನು ನೋಡುವ ದೃಷ್ಟಿಕೋನ ಬದಲಾಗಬೇಕು ಎಂಬುದೇ ಈ ಕತೆಯ ಮುಖ್ಯ ಗುರಿ ಎಂದು ಲೇಖಕಿ ಹೇಳಿದ್ದಾರೆ.



'ಒಂದು ಪುಟ್ಟ ಚಿತ್ರ' ಈ ಕತೆಯ ನಾಯಕಿ ಶಾಂತ. ಇಲ್ಲಿ ಶಾಂತ ತಂದೆ ತಾಯಿ ಇಲ್ಲದ ಅಣ್ಣ ಅತ್ತಿಗೆಯ ಆಶ್ರಯದಲ್ಲಿ ಇರುವ ಬಾಲ ವಿಧವೆ. ಅತ್ತಿಗೆಯ ಅಣ್ಣ ರಘುವಿನ ಕಾಮದ ಮೋಹಕ್ಕೆ ಬಲಿಯಾಗಿ ಅಡ್ಡದಾರಿ ಹಿಡಿಯುತ್ತಾಳೆ. ನಯವಂಚಕನಾದ ರಘುವಿನ ಮಾತನ್ನು ಕೇಳಿ ಮೋಸ ಹೋಗುತ್ತಾಳೆ, ಮೊದಲೇ ಹೇಳಿದ ಹಾಗೆ ಮರುಮದುವೆ ಮಾಡಿಕೊಳ್ಳುತ್ತೇನೆ. ಎಂದ ರಘುವಿಗೆ ತನ್ನ ಸ್ಥಿತಿಯನ್ನು ಪತ್ರದ ಮುಖಾಂತರ ತಿಳಿಸುತ್ತಾಳೆ.

ಹಿಂದೆ ಓಡಿಹೋದ ಕೆಲಸದವಳ ಮಗಳ ದುರಂತವನ್ನು ಪ್ರಸ್ತಾಪಿಸುತ್ತಾಳೆ. [೨]"ರಘು ಅವಳನ್ನು ಕೆಡಿಸಿದವನಿಗೆ ಶಿಕ್ಷೆಯೇ ಇಲ್ಲವೇ? ಇರಲಾರದು; ಏಕೆಂದರೆ ಅವನು ಗಂಡು ಅಪರಾಧವು ಹೆಂಗಸರದೇ ಅವಳನ್ನು ಕೆಟ್ಟದಾರಿಯಲ್ಲಿ ಕರೆದುಕೊಂಡು ಹೋದಾತನಿಗೆ ಇನ್ನೊಬ್ಬಳನ್ನು ಅದೇ ಹಾದಿಯಲ್ಲಿ ಕರೆದೊಯ್ಯಲು ಯತ್ನಿಸುತ್ತಿರಬಹುದು. ಗಂಡಸಾದುದರಿಂದ ಅವನಿಗೆ ಶಿಕ್ಷಯಿಲ್ಲ ಆಚಾರದ ಅಧಿಕಾರ ಅಬಲೆಯರ ಮೇಲೆಯೇ"[೨] ಇತ್ಯಾದಿಯಾಗಿ ಪತ್ರ ಬರೆಯುತ್ತಾಳೆ.

ಆದರೆ ರಘು ಶಾಂತಳಿಗೆ ಕೊಟ್ಟ ಮಾತನ್ನು ನಡೆಸಿಕೊಡದೆ [೩]"ನಾನೇ ನಿನ್ನನ್ನು ಕೊಚ್ಚೆಗೆ ನೂಕಿದೆ ಎಂದು ಬರೆದಿರುವೆ, ನೀನು ಬೀಳಲು ಆತುರದಿಂದ ಇದ್ದಿದ್ದರಲ್ಲವೆ ನಾನು ನೂಕಿದ್ದು ? ಇನ್ನಾರಾದರೂ ಮದುವೆಯಾಗುವವರಿದ್ದರೆ ಮದುವೆಯಾಗು ನನ್ನಡ್ಡಿಯೇನಿಲ್ಲ"[೩] ಎಂದು ಉತ್ತರಿಸುವ ನಯವಂಚಕ ರಘುವನ್ನು ಮುಗ್ದೆ ಶಾಂತೆ ಹೀಗೆ ಅವನ ಸಂಚಿಗೆ ಬಲಿಯಾಗುತ್ತಾಳೆ ಎಂಬುದನ್ನು ನೋಡುತ್ತೇವೆ.

ಶಾಂತಳ ಅಣ್ಣ, ಅತ್ತಿಗೆಗೆ ಮುಖ ತೋರಿಸುವುದಕ್ಕೆ ಹೆದರಿ ಕಂಗಾಲಾಗಿ, ಸಮಾಜದ ಕ್ರೂರ ನುಡಿಗಳನ್ನು ಹೇಗೆ ಸಹಿಸಲಿ ಎಂದು ಶಾಂತ ಕೆರೆಗೆ ಹಾರಿ ಆತ್ಮಹತ್ಯೆಯ ದಾರಿ ಹಿಡಿದಳು. ಆದರೆ ಶಾಂತಳ ಬಾಳು ಇಲ್ಲಿ ದುರಂತಮಯವಾಗಿರುವುದನ್ನು ನೋಡುತ್ತೇವೆ.

---

[೨] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೩೩

[೩] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೩೪

ರಘು ಮದುವೆಯಾಗಿದ್ದರೆ ಆಗ ಶಾಂತ ಪುನರ್ವಿವಾಹವಾಗಿ ಸಮಾಜದಲ್ಲಿ ಕ್ರೂರ ಮನುಷ್ಯನ ಜೊತೆಯಲ್ಲಿ ಮತ್ತೊಂದು ರೀತಿಯ ಸಮಸ್ಯೆಯನ್ನು ಎದುರಿಸಬೇಕಿತ್ತು. ಇಲ್ಲಿ ಮುಖ್ಯವಾಗಿ ಪುನರ್‌ವಿವಾಹ ಆದರೂ, ಆಗದಿದ್ದರೂ ದುರಂತ ಮಾತ್ರ ಹೆಣ್ಣಿನದೇ ಎಂಬುದನ್ನು ಗೌರಮ್ಮನವರು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಈ ಕತೆಯಲ್ಲಿ ಕತೆಗಾರ್ತಿಯ ಗ್ರಹಿಕೆಯ ಪಕ್ವತೆ ಬಂದಿರುವುದನ್ನು ಇಲ್ಲಿ ನೋಡುತ್ತೇವೆ.

ಶಾಂತಳ ಪಾತ್ರದ ಮುಖಾಂತರ ಲೇಖಕಿ ಹೆಣ್ಣಿನ ವಯೋಸಹಜ ಕಾಮನೆಯ ಭಾವನೆಗಳನ್ನು ಹತ್ತಿಕ್ಕಲಾರದೆ, ಕಾಮುಕನಾದ ರಘುವಿನ ಮೋಸಕ್ಕೆ ಬಲಿಯಾಗುವ ಒಂದು ಹೆಣ್ಣಿನ ದುರಂತವನ್ನು ಕಟ್ಟಿಕೊಡುತ್ತಾರೆ. ಮೊದಮೊದಲು 'ಪುನರ್ವಿವಾಹ' ದ ರಾಜಿಯ ಕತೆಯನ್ನು ನೋಡಿದಾಗ, ನಂತರ ಬರೆದ 'ವಾಣಿಯ ಸಮಸ್ಯೆಯ' ಇಂದುವಿನ ಕಥೆ ನಂತರ ಬರೆದ ಕಥೆಯೇ ಒಂದು ಪುಟ್ಟ ಚಿತ್ರದ ಶಾಂತಾಳ ಕಥೆ ಒಟ್ಟಾರೆ ಈ ಮೂರು ಪಾತ್ರಗಳನ್ನು ನೋಡಿದಾಗ ಲೇಖಕಿ ಮೊದಲಿಗೆ ಅವಾಸ್ತವತೆಯಿಂದ ವಾಸ್ತವದ ನೆಲೆಗೆ ಹಂತ ಹಂತವಾಗಿ ಬಂದಿರುವುದನ್ನು ನೋಡುತ್ತೇವೆ ಮೊದಲೇ ಲೇಖಕಿ ಹೇಳಿದ ಮಾತನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ.

. ಕತೆಗಾರ್ತಿಯ ಈ ಚಿಂತನೆಯ ಕ್ರಮ ದಿನದಿನಕ್ಕೆ ಹೇಗೆ ಸಾಗುತ್ತಿದೆ ಎಂಬುದನ್ನು ಗುರುತಿಸಬಹುದು.ಸ್ತ್ರೀ ಸಂವೇದನೆಯ ದೃಷ್ಟಿಯಿಂದ ಈ ಬೆಳೆವಣಿಗೆ ಬಹಳ ಮುಖ್ಯವಾದದ್ದು.

ಮುಗ್ದೆಯಾದ ಶಾಂತ, ದಿಟ್ಟ, ನೇರ ಸ್ವಭಾವದ ಹೆಣ್ಣು 'ನಾನ' ಮತ್ತು ರಾಜನ ದುಷ್ಟ ಹೆಂಡತಿ ಶಾಂತಾಳ ಬಾಳಿಗೆ ಕ್ರೂರಳಾಗುತ್ತಾಳೆ ಎಂಬುದನ್ನು ನಾವಿಲ್ಲಿ ಕಾಣಬಹುದು. ಈ ಕತೆಯಲ್ಲಿ ಒಂದೇ ಬಾರಿಗೆ ಎಷ್ಟು ವ್ಯಕ್ತಿತ್ವಗಳು ಕಾಣಿಸಿಕೊಂಡು ಏಕಕಾಲದಲ್ಲೇ ಎಂತೆಂತಹ ಸ್ತ್ರೀಯ ಪಾತ್ರಗಳು ಬೆಳಕಿಗೆ ಬರುವುದನ್ನು ನೋಡಬಹುದು.

ಮುಗ್ಧೆಯಾದ ಶಾಂತಾಳನ್ನು ತೆಗೆದುಕೊಂಡರೆ, ಎಲ್ಲದಕ್ಕೂ ಇಲ್ಲಿ ಆತ್ಮಹತ್ಯೆಯೇ ಔಷಧಿಯೇ ?

ಹೀಗೆ ಶಾಂತ ಸಮಾಜದ ಸನ್ನಿವೇಶಕ್ಕೆ, ಕಟ್ಟುಪಾಡುಗಳಿಗೆ ಅಳುಕಿ ಆತ್ಮಹತ್ಯೆಗೆ ಶರಣಾಗುವ ದುರಂತ ನಾಯಕಿಯನ್ನು ನೋಡುತ್ತೇವೆ. ಈ ವಿಚಾರ ದಿನಪತ್ರಿಕೆಯಲ್ಲಿ ನೋಡಿ ಇಂಥ ಘಟನೆಗಳು ಖಾಸಗಿ ವಿಷಯವಾದರು ಅದಕ್ಕೆ ಸಾಮಾಜಿಕ ಆಯಾಮ ಒದಗಿಸುವ ಕತೆಗಾರ್ತಿಯನ್ನು ಕಾಣುತ್ತೇವೆ.

'ಮುನ್ನಾದಿನ' ಈ ಕತೆಯ ನಾಯಕ ಕಾಡ ತಂದೆ ಇಲ್ಲ ತಾಯಿ ಇದ್ದು ತಬ್ಬಲಿಯಾಗಿದ್ದ, ಹುಟ್ಟಿನಿಂದ ಗಾಣಿಗನಾದವನು ತನ್ನ ಹೊಟ್ಟೆಪಾಡಿಗಾಗಿ ತನ್ನ ಧರ್ಮವನ್ನು ತೊರೆದು ಕ್ರಿಶ್ಚಿಯನ್ ಧರ್ಮಕ್ಕೆ ಸೇರಿ ಜೋಸೆಫ್ ಕಾಡನಾಗುತ್ತಾನೆ. ಈತನಿಗೆ ಯಾವುದೇ ಜಾತಿಮತ ಧರ್ಮಗಳ ಭೇದ ಇರಲಿಲ್ಲ. ಹರಕು ಮುರುಕು ಇಂಗ್ಲೀಷ್ ಕಲಿತ ಕಾಡನನ್ನು ನೋಡಿದರೆ ಹೆತ್ತ ತಾಯಿಯೇ ಗುರುತಿಸಲು ಸಾಧ್ಯವಾಗುತ್ತಿರಲಿಲ್ಲ. ಇಲ್ಲಿ ಕಾಡನಿಗೆ

ಹೊಸದಾಗಿ ಬಂದ ಮ್ಯಾನೇಜರು ಕುದುರೆ ಓಡಿಸುವ ಮತ್ತು ಊರಿನಿಂದ ದಿನಕ್ಕೆ ಎರಡು ಬಾರಿ ಟಪಾಲು ತರುವ ಕೆಲಸ ದೊರೆಯಿತು.

ಟಪಾಲಿಗಾಗಿ ತೋಟದಿಂದ ಊರಿಗೆ ಹೋಗುತ್ತಿದ್ದ ಕಾಡ, ಮಾಪಿಳ್ಳಿ ಚಿಲ್ಲರೆ ಅಂಗಡಿಯ ಯಜಮಾನ ಮುಮ್ಮಕಾಕ ಅಂಗಡಿಯಲ್ಲಿ ತಂಗಿ ಹುಸೇನ್ ಬೀಬಿಯು ಇದ್ದಾಗ ಮಾತ್ರ ವ್ಯಾಪಾರ ಮತ್ತಷ್ಟು ಜೋರಾಗಿ ನಡೆಯುತ್ತಿತ್ತು, ಹುಸೇನ್‌ಬಿಯು ನಿಪುಣೆಯು ಆಗಿದ್ದಳು. ಸುತ್ತಮುತ್ತಲ ಮೇಸ್ತ್ರಿಗಳ ಜೊತೆಗೆ ಕಾಡನು ಬರುತ್ತಿದ್ದನು. ಪ್ರತಿನಿತ್ಯ ಕುದುರೆಯ ಮೇಲೆ ಸವಾರಿ ಮಾಡಿಕೊಂಡು ಹೋಗುವ ಕಾಡ ಎಲ್ಲರಿಗಿಂತಲೂ ಹೆಚ್ಚು ಎಂಬ ಭಾವನೆ ಅವಳಲ್ಲಿ ಬೆಳೆದಿತ್ತು. ಅಷ್ಟೇ ಅಲ್ಲದೆ ಅವನ ಆಧುನಿಕತೆಯ ಉಡುಗೆ ತೊಡುಗೆ ಮಾತು ಎಲ್ಲವೂ ಅವಳಿಗೆ ಬಹು ಆಕರ್ಷಣೀಯವಾಗಿತ್ತು. ಕಾಡ ಬೀಡಿ ಸೇದಲು ಬೆಂಕಿ ಪೊಟ್ಟಣವನ್ನು ಅವಳ ಬಳಿ ತೆಗೆದುಕೊಂಡು ಹಣಕೊಡುವಾಗ ಅವಳನ್ನು ಒಮ್ಮೆ ನೋಡಿದ ಅಂದಿನಿಂದ ಕಾಡನಿಗೆ ಪ್ರೀತಿ ಪ್ರೇಮ ಪ್ರಾರಂಭವಾಯಿತು.

ಕಾಡನಿಗೆ ಜಾತಿಯ ಬಗ್ಗೆ ಯಾವ ಒಲವಾಗಲಿ, ಅಭಿಮಾನವಾಗಲಿ, ಇರಲಿಲ್ಲ ಎಷ್ಟು ಬೇಗ ಕ್ರಿಶ್ಚಿಯನ್ ಆಗಿದ್ದನೋ ಅಷ್ಟೇ ಬೇಗ ಮುಸಲ್ಮಾನನಾಗಲೊಪ್ಪಿದ. ಕಾಡ ಹಿಂದೆ ಅನ್ನಕ್ಕಾಗಿ ಜಾತಿ ಬಿಟ್ಟ, ಈಗ ಪ್ರೇಮಕ್ಕಾಗಿ ಜಾತಿಬಿಟ್ಟ, ಅಷ್ಟೇ ವ್ಯತ್ಯಾಸ, ಕಾಡನ ದೃಷ್ಟಿಯಲ್ಲಿ ಜಾತಿ ಎನ್ನುವುದು ಅಂತ ಮೌಲ್ಯವಾದುದ್ದೇನಾಗಿರಲಿಲ್ಲ. ಪ್ರೀತಿಗಾಗಿ ಹುಸೇನ್‌ಬಿಗಾಗಿ ಜೀವಬಿಡಲು ಸಿದ್ಧನಿದ್ದ [೪]"ಬಹುಶಃ ಅವನ ಹಿಂದಿನ ದೊರೆಯಿದ್ದಿದ್ದರೆ ಈ ಸಂದರ್ಭದಲ್ಲಿ ಕೊಂಚ ತೊಂದರೆಯಾಗುತ್ತಿತ್ತೇನೋ! ಆದರೆ ಈಗಿನ ಮ್ಯಾನೇಜರ್ ಹಿಂದೂ ಆದುದರಿಂದ ಕ್ರಿಶ್ಚಿಯನ್ ಕಾಡ ಮುಸಲ್ಮಾನನಾದರೆ ತಮಗೇನೆಂದು ಸುಮ್ಮನಿದ್ದು ಬಿಟ್ಟರು"[೪]

ಪ್ರೇಮದ ಸಲುವಾಗಿ ಎರಡನೇ ಬಾರಿ ಕಾಡ ಜಾತಿ ಬದಲಾಯಿಸಿ ಇಸ್ಮಾಯಿಲ್ ಕಾಡಕಾಕ ಆಗಿ ಹುಸೇನ್ ಬೀಯನ್ನು ನಿಖಾ ಮಾಡಿಕೊಂಡ. ಆದರೆ ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ಕಾಡ ಮೊದಲಿಗೆ ಅನಾಥನಾಗಿ ಸ್ವಧರ್ಮವನ್ನು ಬಿಟ್ಟು ನಂತರ ಕ್ರಿಶ್ಚಿಯನ್ ಧರ್ಮಕ್ಕೆ ಸೇರಿ ಜೋಸೆಫ್ ಕಾಡನಾಗುತ್ತಾನೆ. ನಂತರ ತನ್ನ ಒಲುಮೆಯ ಗೆಳತಿಗಾಗಿ ಮುಸಲ್ಮಾನನಾಗುತ್ತಾನೆ, ಹೀಗೆ ಕಾಡ ಯಾವಾಗಲು ಅಗತ್ಯಕ್ಕೆ ತಕ್ಕಂತೆ ತನ್ನ ಧರ್ಮವನ್ನೇ ಬದಲಾಯಿಸಿ ಕೊಳ್ಳುತ್ತಾನೆ. ಆದರೆ ಕಾಡನನ್ನು ಮಾತ್ರ ಯಾವ ಸಮಾಜವು ಅವಹೇಳನ ಮಾಡುವುದಾಗಲಿ, ಶಿಕ್ಷೆ ನೀಡುವುದಾಗಲಿ, ತಿರಸ್ಕರಿಸವುದಾಗಲಿ ಬಹಿಷ್ಕಾರ ಹಾಕುವುದಾಗಲಿ ಮಾಡುವುದಿಲ್ಲ.

ಇದು ಅಂತರ್ ಧರ್ಮೀಯ ಕತೆ ಎಂದು ಹೇಳಬಹುದು. ಅಷ್ಟೇ ಅಲ್ಲದೆ ಅಂತರ್ ಧರ್ಮಿಯ ವಿವಾಹದ ಕತೆ ಎಂದು ಕರೆಯಬಹುದು ಅಷ್ಟೇ ಅಲ್ಲದೆ ಗಾಂಧೀಜಿಯವರ ತತ್ವದ ಪ್ರಕಾರ ಹಿಂದೂ-ಮುಸ್ಲಿಂ ಐಕ್ಯತೆಯ ಸಮ್ಮೇಳನವನ್ನು ಕಾಡನ ಮುಖಾಂತರ ಆತನ ಕಾರ್ಯಾಚರಣೆಯ ಮುಖಾಂತರ ಗಾಂಧಿ ತತ್ವದ ಪ್ರತಿಕಾರ ಕಾಡ ಮೇಸ್ತ್ರಿ ಎಂದು ಈ ಕಥೆಯಲ್ಲಿ ಗಾಂಧೀಜಿಯ ತತ್ವವನ್ನು ಗೌರಮ್ಮನವರು ಹೇಗೆ ಪ್ರತಿಪಾದನೆ ಮಾಡಿದ್ದಾರೆ ಎಂಬುದನ್ನು

---

[೪] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ - ೨೫೦

ನೋಡಬಹುದು. ಇದು ಗೌರಮ್ಮನವರು ತಾವು ಸಾಯುವ ಮುನ್ನಾದಿನ ಬರೆದಿರುವ ಎರಡು ಅಂಕಗಳ ಕಥೆ. ಹೀಗೇನಾದರು ಗೌರಮ್ಮನವರು ಬದುಕಿದ್ದರೆ, ಕಾಡ ಮೇಸ್ತ್ರಿಯ ಕತೆ ಯಾವ ನೆಲೆಯಲ್ಲಿ ತಿರುಗುತ್ತಿತ್ತೋ ತಿಳಿಯದು ಆದರೆ ಇದೇ ಕತೆಯನ್ನು ಮಹಿಳೆಯರ ದೃಷ್ಟಿಕೋನದಲ್ಲಿ ಗಮನಿಸಿದಾಗ ಇಂತಹ ಸಾಮಾಜಿಕ ಕಟ್ಟು ಪಾಡುಗಳೆಲ್ಲ ಹಾಗೂ ಧಾರ್ಮಿಕ ಕಟ್ಟು ಪಾಡುಗಳೆಲ್ಲಾ ಹೆಣ್ಣಿಗೇ ಮಾತ್ರ ನಿರ್ಬಂಧಗಳನ್ನು ವಿಧಿಸುತ್ತದೆ ಹೊರತು ಪುರುಷರಿಗಲ್ಲ ಈ ಕತೆಯಲ್ಲಿ ಬರುವ ಕಾಡ ಹುಸೇನಬಿಗಾಗಿ ಮುಸಲ್ಮಾನನಾಗಿ ನಿಖಾ ಮಾಡಿಕೊಳ್ಳುವುದರ ಮುಖಾಂತರ ತಿಳಿಯಬಹುದು. ಇಲ್ಲಿ ಹುಸೇನಬಿ ಕ್ರಿಶ್ಚಿಯನ್‌ನಾಗಲಿಲ್ಲ ಕಾಡನೇ ಇಸ್ಮಾಯಿಲ್. ಕಾಡ ಕಾಕನಾದನು. ಎಂಬುದನ್ನು ಗಮನಿಸ ಬಹುದಾದ ಅಂಶ. ಹೀಗೆ ಕಾಡನ ಜೀವನ ಸುಖಾಂತ್ಯವಾಗುತ್ತದೆ. ಆದರೆ ಕಾಡನ ಜಾಗದಲ್ಲಿ ಒಂದು ಮಹಿಳೆ ಇದ್ದಿದ್ದರೆ ಸಮಾಜ ಇದೇ ರೀತಿಯ ಪ್ರತಿಕ್ರಿಯೆಯನ್ನು ನೀಡುತ್ತಿತ್ತಾ? ಆ ಮಹಿಳೆಯ ಜೀವನ ಕಾಡನಷ್ಟೇ ಸುಖಾಂತ್ಯವಾಗುತ್ತಿತ್ತಾ? ಎಂದು ಯೋಚಿಸಬೇಕಾದ ಸಂದರ್ಭವನ್ನು ಇಲ್ಲಿ ನೋಡುತ್ತೇವೆ.

ಪ್ರಸ್ತುತ ಈ ಕಾಲದಲ್ಲೇ ಸಮಾಜದಲ್ಲಿ ಅಂತರ್ ಜಾತಿ ವಿವಾಹವನ್ನೆ ಬೆರಳು ಮಾಡಿ ತೋರಿಸುತ್ತಿರುವ ಸನ್ನಿವೇಶವನ್ನು ನೋಡುತ್ತೇವೆ. ಆದರೆ ಆಗಲೇ ಗೌರಮ್ಮನವರು ಅಂತರ್ ಧರ್ಮಿಯ ವಿವಾಹವನ್ನು ಕಾಡನ ಮುಖಾಂತರ ತನ್ನ ಕಥೆಯಲ್ಲಿ ತಂದು ಸಾಮಾಜಿಕ ಪಿಡುಗನ್ನು ಹೋಗಲಾಡಿಸುವ ಒಂದು ಉತ್ತಮ ಸುಧಾರಣ ಸಮಾಜವನ್ನು ನಿರ್ಮಿಸುವ ಪ್ರಯತ್ನವನ್ನು ಈ ಕಥೆಯ ಮುಖಾಂತರ ಮಾಡುತ್ತಾರೆ. ಇನ್ನು ಆಳವಾಗಿ ಈ ಕತೆಯ ಪ್ರಸ್ತಾಪವನ್ನು ನೋಡಿದರೆ ಯಾವ ಸಾಮಾಜಿಕ ಸಮಸ್ಯೆಗೂ ಪರಿಹಾರವೆಂದು ಕತೆಗಾರ್ತಿ ಪ್ರತಿಪಾದಿಸಿದಂತಿಲ್ಲ. ಸ್ತ್ರೀ ಮತ್ತು ಪುರುಷನ ನಡುವಿನ ಸ್ವಭಾವ ಹೇಗೆ ಸಹಜ ವ್ಯಾಪಾರವಾಗಿ ಒಡಮೂಡಿದೆ 'ಪ್ರೀತಿ'ಯ ಹಿನ್ನೆಲೆಯಲ್ಲಿ 'ಅಂತರ್ ಧರ್ಮೀಯ ವಿವಾಹವನ್ನೇ ಕೇಂದ್ರವಾಗಿಟ್ಟು ಕೊಂಡು ಚಿತ್ರಿಸಿದಂತೆ ಇದೆ. ಗೌರಮ್ಮನವರ ಅತ್ಯುತ್ತಮ ಕತೆಗಳಲ್ಲಿ ಇದು ಒಂದು. ಇದು ಅಪೂರ್ಣವಾಗಿರುವುದರಿಂದ ಇದರ ಅಂತ್ಯ ಹೇಗಿರುತ್ತಿತ್ತು ಎಂಬ ಕುತೂಹಲ ಹಾಗೆಯೇ ಉಳಿದುಬಿಟ್ಟಿದೆ.

'ಸನ್ಯಾಸಿ ರತ್ನ' ದ ಕಥೆಯನ್ನು ನೋಡಿದರೆ ಸಮಾಜದಲ್ಲಿ ಅಂದಿನಿಂದ ಇಂದಿನವರೆಗೂ ನಡೆಸಿಕೊಂಡು ಬಂದಿರುವ ಪದ್ಧತಿ 'ಮದುವೆ'. ಮದುವೆ ಇಲ್ಲದೆ ಮನುಷ್ಯನ ಬಾಳು ಪರಿಪೂರ್ಣಗೊಳ್ಳುವುದಿಲ್ಲ. ಎಂಬ ಮಾತು ಇನ್ನೂ ಅಲ್ಲಲ್ಲಿ ಕೇಳಿ ಬರುತ್ತಿರುವುದನ್ನು ನೋಡುತ್ತೇವೆ. ಅಂತಹ 'ಮದುವೆ' ಯ ಚಿತ್ರಣವನ್ನು ಈ ಕತೆಯಲ್ಲಿ ನೀಡುತ್ತಾರೆ. ಇಲ್ಲಿನ ಪಾತ್ರಗಳನ್ನು ನೋಡಿದಾಗ ರಾಜ ಮತ್ತು ರತ್ನ ಇಬ್ಬರು ಗೆಳೆಯರು ರತ್ನನ ಸಹೋದರಿ ಸೀತೆ. ಇಲ್ಲಿ ಸೀತೆಯನ್ನು ರಾಜ ಪ್ರೀತಿಸುತ್ತಾನೆ. ಸೀತೆಯು ಅಷ್ಟೇ ಪ್ರೀತಿಸುತ್ತಾಳೆ. ಆದರೆ ಈ ಒಂದು ವಿಚಾರದಲ್ಲಿ ರಾಜ-ರತ್ನನ ನಡುವೆ ಸಾಮ್ಯತೆ ಇಲ್ಲ. ರತ್ನನ ಆಕಾಂಕ್ಷೆ ಏನೆಂದರೆ, ರಾಜನು ನನ್ನ ಹಾಗೆ ಮದುವೆಯಾಗದೆ ಸನ್ಯಾಸಿಯಾಗಬೇಕು ಎಂದು. ಆದರೆ ಈ ಕತೆಯಲ್ಲಿ ಬರುವ ಮುಖ್ಯ ವಿಚಾರವೇ, ಸನ್ಯಾಸಿ ರತ್ನ ಸಂಸಾರಿ ಹೇಗೆ ಆಗುತ್ತಾನೆ ಎಂದು. ಇಲ್ಲಿ ಗೆಳೆಯ ರಾಜನಿಗೆ ಮದುವೆ ಬೇಡ ಎನ್ನುತ್ತಿದ್ದ ರತ್ನ ಮೊದಲಿಗೆ 'ಮದುವೆ'ಯ ವಿಚಾರ ಎತ್ತಿದರೆ ಸಾಕು ಕೋಪದಿಂದ ಕೆಂಡವಾಗುತ್ತಿದ್ದ. ತನ್ನ ಎರಡು ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡು 'ಥೂ'

ಎಂದು ಮದುವೆಯನ್ನು ತಿರಸ್ಕರಿಸುತ್ತಿದ್ದ. ನನ್ನ ಬಳಿ ಪ್ರಸ್ತಾಪ ಮಾಡಬೇಡಿ ಎಂಬುದೇ ರತ್ನನ ಸಿದ್ಧಾಂತ. ಈ ಮದುವೆಯ ವಿಚಾರಕ್ಕಾಗಿ ರಾಜ-ರತ್ನರಿಗೆ ಪ್ರತಿನಿತ್ಯವು ಚರ್ಚೆ, ಕೊನೆಗೆ ಚರ್ಚೆ ಎಲ್ಲಿಗೆ ಮುಟ್ಟಿತೆಂದರೆ, [೫೫]"ರತ್ನ ಮದುವೆಯಾಗದೇ ಉಳಿದರೆ ತಾನು ಮೊನ್ನೆ ತಾನೆ ಕೊಂಡ್ಕೊಂಡ ಕೆಮರಾ ಕೊಡುತ್ತೇನೆ ಎಂದ ರಾಜ. ಅದಕ್ಕೆ ರತ್ನ ನಾನು ನನ್ನ ಕೈಯಲ್ಲಿರೋ ವಜ್ರದ ಉಂಗುರವನ್ನೇ ಕೊಡುತ್ತೇನೆ"[೫೫]. ಎಂದ ಈ ರೀತಿಯ ಪಂಥವನ್ನು ಕಟ್ಟಿಕೊಂಡರು.

ಆದರೆ ಸಂಗೀತಗಾರ್ತಿ ವಾಣಿಯ ಕಂಠಧ್ವನಿಗೆ, ಅವಳ ಸೌಂದರ್ಯಕ್ಕೆ ಆಕರ್ಷಣೆಗೊಂಡು ರತ್ನ ತನ್ನ ಪಂಥದಲ್ಲಿ ಸೋಲುತ್ತಾನೆ. ವಜ್ರದುಂಗುರ ರಾಜನ ಕೈ ಸೇರುತ್ತದೆ. ಹೀಗೆ 'ಸನ್ಯಾಸಿ ರತ್ನ' ನು ಸಂಸಾರಿ ರತ್ನ ನಾಗುತ್ತಾನೆ. ಹೀಗೆ ಗೌರಮ್ಮನವರು ಸಾಮಾಜಿಕ, ಧಾರ್ಮಿಕ ಕಟ್ಟುಪಾಡುಗಳಿಂದ ಕೂಡಿರುವ 'ಮದುವೆಯ' ಸಾಫಲ್ಯ ವೈಫಲ್ಯಗಳನ್ನು ಈ ಸನ್ಯಾಸಿ ರತ್ನನ ಕಥೆಯಲ್ಲಿ ನಿರೂಪಿಸಲಾಗಿದೆ, ಎಂದು ರತ್ನನಿಂದ ತಿಳಿಸುತ್ತಾರೆ.

ಇಲ್ಲಿ ಒಬ್ಬ ಉತ್ತಮ ಪ್ರಜ್ಞಾವಂತನಿಗೂ ತನ್ನ ಮನಸ್ಸಿನ ಭಾವನೆಗಳನ್ನು ಯಾವ ರೀತಿಯಲ್ಲಿ ಹತೋಟಿಯಲ್ಲಿ ಇಟ್ಟುಕೊಳ್ಳಬೇಕು ಎಂದು ತಿಳಿಯದೆ, ಆ ಭಾವನೆಗಳಲ್ಲಿ ಆದ ಏರುಪೇರು ನೋಡಿ, ತಾನು ಸಾಧಿಸಬೇಕಾದ ಕಾರ್ಯವನ್ನು ಸಾಧಿಸದೆ ವಿಫಲನಾಗುವ ರತ್ನನ ಪಾತ್ರವನ್ನು ನೋಡುತ್ತೇವೆ. ಆದರೆ ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ವರದಕ್ಷಿಣೆಯ ಪ್ರಸಂಗವೇ ಇಲ್ಲಿ ಸುಳಿಯುವುದಿಲ್ಲ. ಕತೆಯು ಸುಖಾಂತ್ಯವನ್ನು ಕಾಣುವುದನ್ನೇ ನೋಡುತ್ತೇವೆ. ಸಮಾಜದಲ್ಲಿ ಇರುವ ಸ್ನೇಹಿತರ ಸಂಬಂಧವನ್ನು ಗಮನಿಸುತ್ತೇವೆ. ಅಷ್ಟೇ ಅಲ್ಲದೆ. ಸಮಾಜದಲ್ಲಿ ಬರುವ ಹೆಣ್ಣಿನ ಸ್ವರೂಪವನ್ನು ನೋಡುತ್ತೇವೆ. ಇಲ್ಲಿ ರತ್ನನ ತಂಗಿ ಸಮಾಜದ ಪರಿವೇ ಇಲ್ಲದೆ ಕೇವಲ 'ಅಡುಗೆಮನೆಯ ಹುಡುಗಿ' ಎನ್ನುವಂತಹ ಮನೋಭಾವನೆ. ಆದರೆ ಅದೇ ರತ್ನ ಪ್ರೀತಿಸುತ್ತಿರುವ ಹುಡುಗಿ ಮಿಸ್ ವಾಣಿ. ಅವಳು ಸಂಗೀತ ಕ್ಷೇತ್ರದಲ್ಲಿ ಆ ಸಣ್ಣ ವಯಸ್ಸಿನಲ್ಲೇ ಮಾಡಿರುವ ಸಾಧನೆ, ಮೂರ್ತಿ ಚಿಕ್ಕದಾದರು ಕೀರ್ತಿ ದೊಡ್ಡದು ಎನ್ನುತ್ತಾರಲ್ಲ ಹಾಗೆ, ಇಡೀ ಸಮಾಜವನ್ನು ತನ್ನ ಅರಳುವ ಕಣ್ಣುಗಳಿಂದ ನೋಡುವ ವಾಣಿಯ ದೃಷ್ಟಿಕೋನ, ಒಂದು ಹೆಣ್ಣಿಗೆ ಒಂದು ಗಂಡು ಎಂಬ ಸಮಾಜದ ಸಾಮಾನ್ಯ ಮಾತು, ಸನ್ಯಾಸಿ ರತ್ನನ ವಿಷಯದಲ್ಲಿ ಸುಳ್ಳಾಗಲಿಲ್ಲ. ಎಂಬುದು ಕತೆಯಿಂದ ತಿಳಿಯುತ್ತದೆ.

'ಆಹುತಿ' ಈ ಕತೆಯಲ್ಲಿ ವರದಕ್ಷಿಣೆ ಪಿಡುಗಿಗೆ ಬಲಿಯಾಗುವ ಅಮಾಯಕ ಹೆಣ್ಣಿನ ಚಿತ್ರಣವಿದೆ. ಕತೆಯ ನಾಯಕಿ ಶಾಂತಿ ನಾಯಕ ರಘು. ರಘುವಿಗೆ ಮೊದಲಿನಿಂದಲೂ ತಾನು ಶ್ರೀಮಂತ ಮನೆತನದ ಅಳಿಯನಾಗಬೇಕೆಂಬ ಆಕಾಂಕ್ಷೆ ಇದೆ. ಏಕೆಂದರೆ, ನಾಯಕನ ತಂದೆ ತಾಯಿ ಇಂಗ್ಲೇಂಡಿಗೆ ಕಳುಹಿಸುವಷ್ಟು ಸ್ಥಿತಿವಂತರಲ್ಲ. ಹಾಗೆಂದು ತನ್ನ ತಂದೆ ತೋರಿಸಿದ ಬಡತನದ ಮನೆಯ ಹೆಣ್ಣನ್ನು ವಿವಾಹವಾಗಲು ರಘುವಿಗೆ ಇಷ್ಟವಿಲ್ಲ. ವರದಕ್ಷಿಣೆಯನ್ನು ತೆಗೆದುಕೊಂಡು, ಮಗನಿಗೆ ವಿವಾಹಮಾಡುವುದು ರಘುವಿನ ತಂದೆಗೆ ಸಲ್ಲದ ವಿಚಾರ.

---

[೫೫] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ - ೨೩

ಈ ಕಾರಣದಿಂದಲೇ ಅತಿಸುಂದರವಾದ, ಸೌಂದರ್ಯ ರಾಶಿಯಿಂದ ಕೂಡಿರುವ, ರತಿ ದೇವತೆಯಂತೆ ಇರುವ ಹೆಣ್ಣನ್ನು ರಘು ತಿರಸ್ಕರಿಸುತ್ತಾನೆ. ಅದಕ್ಕೆ ರಘುವಿನ ತಂಗಿ, ಇಂತಹ ಹೆಣ್ಣಿನ ಜೊತೆ ೫೦೦ರೂ ವರದಕ್ಷಿಣೆ ಕೊಡುತ್ತೇನೆ ಎಂದರೂ ತಂದೆಯೇ ತಿರಸ್ಕರಿಸಿದರೂ, ತಂದೆಗೆ ಇರುವ ಸಾಮಾಜಿಕ ಪ್ರಜ್ಞೆಯ ಕಳಕಳಿ ನಿನಗೆ ಇಲ್ಲವೇ? ನೀನು ಓದಿ ವಿದ್ಯಾವಂತನಾಗಿರುವವನು ನೀನ್ನನ್ನು ನೀನು ಮಾರಿಕೊಳ್ಳುತ್ತೀದ್ದಿಯಾ? ಎಂದು ಆವೇಶದಿಂದಲೇ ಗೌರಮ್ಮನವರು 'ವಿಜಿಯ' ಮುಖಾಂತರ ಹೇಳಿಸುತ್ತಾರೆ. ಈ ರೀತಿಯ ಬೇಡಿಕೆಗಳನ್ನು ಇಂದಿನ ಯುವಜನಾಂಗ ನಿರೀಕ್ಷಿಸುತ್ತಿರುವುದು ತಪ್ಪು ಎಂದು ಹೇಳುತ್ತದೆ.

ಇಷ್ಟಾದರು ರಘು ತಂದೆಯ ಮಾತನ್ನು ತಿರಸ್ಕರಿಸಿ ಮನೆ ಬಿಟ್ಟು ಬಾಂಬೆಗೆ ಹೋಗುತ್ತಾನೆ. ಅಲ್ಲಿ ಶ್ರೀಮಂತರ ಮನೆಯ ಹೆಣ್ಣುಮಕ್ಕಳಿಗೆ ಪಾಠ ಹೇಳುವ ಕೆಲಸವನ್ನು ಪಡೆಯುತ್ತಾನೆ. ಅಲ್ಲಿ ರಘುವಿನಿಂದ ಪಾಠವನ್ನು ಕಲಿಯುತ್ತಿರುವವರು, ಶಾಂತಿ ಮತ್ತು ಸೀತೆ. ಶಾಂತಿಯನ್ನು ಎಷ್ಟು ನೋಡಿದರೂ, ಮತ್ತೊಮ್ಮೆ ನೋಡಬೇಕು ಎನ್ನಿಸುವ ಸೌಂದರ್ಯ ಅವಳಲ್ಲಿ ಆವರಿಸಿತ್ತು, ಶಾಂತಿ ಹೈಕೋರ್ಟ್ ಜಡ್ಜ್ ತಂಗಿಯ ಮಗಳಾದರೂ, ಅವಳ ತಂದೆ ತಾಯಿಯರು ಅಷ್ಟೇನೂ ಅನುಕೂಲಸ್ಥರಾಗಿರಲಿಲ್ಲ. ಆದರೆ ಇವಳನ್ನು ವಿವಾಹವಾದರೆ, ಲಂಡನ್ನಿಗೆ ಹೋಗುವ ಆಸೆ ಪೂರೈಸಿಕೊಳ್ಳುವುದಕ್ಕೆ ಸಾಧ್ಯವಿಲ್ಲವೆಂದು, ಬುದ್ಧಿ ಬೇಡ ವೆಂದರೂ, ಮನಸ್ಸು ಮಾತ್ರ ಶಾಂತಿಯ ಕಡೆಗೆ ಹರಿಯುತ್ತಿತ್ತು. ರಘುವಿನ ಮನಸ್ಸಿನಲ್ಲಿ ಒಂದು ಕಡೆ ಲಂಡನ್ ವಿದ್ಯಾಭ್ಯಾಸದ ಕನಸು, ಮತ್ತೊಂದು ಕಡೆ ಶಾಂತಿಯ ಸ್ನಿಗ್ಧ ಸೌಂದರ್ಯದ ಸೆಳೆತ. ಈ ಎರಡರ ನಡುವೆ ಅಡ್ಡಗೋಡೆಯಂತಿರುವ ಶಾಂತಿಯ ಬಡತನ ಹೀಗೆ ರಘು ದ್ವಂದ್ವ ಸಂದರ್ಭಕ್ಕೆ ಎದುರಾಗಿ ನಿಲ್ಲುತ್ತಾನೆ, ಎಂಬುದನ್ನು ನಾವು ನೋಡಬಹುದು.

ಸೀತೆಯಿಂದ ಶಾಂತಿಯ ಮದುವೆ ನಿಶ್ಚಯವಾಗಿದೆ ಎಂದು ತಿಳಿದ ಮೇಲೆ, ಆ ದಿನವೆಲ್ಲಾ ಒಂದೇ ಸಮನೆ ಪರಿತಪಿಸುತ್ತಿರುವಾಗಲೇ ಶಾಂತಿ ಸೀತೆಗೆ ಬರೆದ ಕಾಗದವನ್ನು ತೋರಿಸುತ್ತಾಳೆ. ಅದರಲ್ಲಿ [೬] "ಅಣ್ಣ ನನ್ನ ಮದುವೆ ನಿಶ್ಚಯ ಮಾಡಿದ್ದಾರೆ. ಅಣ್ಣನಿಗಿಂತಲೂ ವಯಸ್ಸಾದವರು, ಮೂರನೆಯ ಮದುವೆಗೆ ನಾನು ವಧು. ನಾಲ್ಕು ಜನ ಮೊಮ್ಮಕ್ಕಳು ವರನಿಗಿರುವರಂತೆ, ವರದಕ್ಷಿಣೆಯನ್ನು ಕೊಡಲು ಶಕ್ತಿಯಿಲ್ಲದುದಕ್ಕಾಗಿ ನನಗೆ ಮೊದಲು ನಿಶ್ಚಿತವಾದ ವರನು, ನನ್ನನ್ನು ಮದುವೆಯಾಗಲು ಒಪ್ಪುವುದಿಲ್ಲವಂತೆ, ಸೀತಾ ಆ ಮುದುಕನ ಮಡದಿಯಾಗಿ ಸತ್ತು ಹೆಣದಂತೆ ಜೀವನವನ್ನು ಕಳೆಯುವುದಕ್ಕಿಂತಲೂ ನನಗೆ ಸಾವೇ ಲೇಸೆಂದು ತೋರುವುದು. ಲೇಸಾದ ಕಾರ್ಯವನ್ನೇಕೆ ಮಾಡಬಾರದು? ಆತ್ಮಹತ್ಯೆಯು ಪಾಪವಾದರೆ, ನನಗಾ ಪುಣ್ಯಕ್ಕಿಂತಲೂ ಆತ್ಮಹತ್ಯೆಯ ಪಾಪವೇ ಲೇಸೆಂದು ತೋರುವುದು. ನಿನಗೆ ಈ ಕಾಗದವು ತಲುಪುವ ವೇಳೆಗೆ ನಿನ್ನ ನಿರ್ಭಾಗ್ಯ ಸಹೋದರಿಯು ಈ ಪ್ರಪಂಚದಿಂದ ಹೊರಟು ಹೋಗಿರುವಳು. ಆತ್ಮಹತ್ಯೆಯನ್ನು ಮಾಡಿಕೊಂಡ ಪಾಪಿಯೆಂದು ನೀನೊಬ್ಬಳಾದರು ಜರಿಯುವುದಿಲ್ಲವೆಂದು ನನಗೆ ಗೊತ್ತಿದೆ, ನನ್ನನ್ನು ಕ್ಷಮಿಸು"[೬] ಪತ್ರವನ್ನು ಓದಿದ ರಘು ತಾನು ವರದಕ್ಷಿಣೆ ಬೇಕು ಎಂದು ಮನೆ ಬಿಟ್ಟು ಬಂದಿರುವುದೆಂಬುದನ್ನು ಮರೆತು, ಶಾಂತಿಯನ್ನು ಮದುವೆಯಾಗಲು ವರದಕ್ಷಿಣೆ ಕೇಳಿದ ನೀಚನನ್ನು ನಿಂದಿಸುತ್ತಾನೆ.

---

[೬] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೭೨.

ಮನಸ್ಥಿತಿ ಸರಿಯಿಲ್ಲದ ಕಾರಣ ಆದಿನವೇ ತನ್ನ ಊರಿಗೆ ಹಿಂತಿರುಗುತ್ತಾನೆ.

ಮರುದಿನ ಮನೆಗೆ ತಲುಪಿ ಅಮ್ಮನ ಪ್ರೀತಿಯಲ್ಲಿ ಕರಗುತ್ತಾನೆ. ಆದರೆ ತಂಗಿ ಒಳಗೆ ಇದ್ದರೂ, ನೋಡಿಯೂ ಸಹಾ ಮಾತನಾಡುವುದಿಲ್ಲ. ತಂಗಿ ಪೇಪರ್‌ನಲ್ಲಿ ಚಿತ್ರ ನೋಡುತ್ತಿದ್ದಳು. ನನ್ನನ್ನು ನೋಡಿ ಆ ಚಿತ್ರವನ್ನು ಬಚ್ಚಿಟ್ಟಳು. ಆಶ್ಚರ್ಯದಿಂದ ನೋಡುತ್ತಿದ್ದದ್ದೇನು 'ಏ' ಎಂದೆ, ಆಗವಳು 'ನೀನು ಕೊಂದ ಹುಡುಗಿ' ಎಂದಳು ? ಬಹಳ ಆಶ್ಚರ್ಯದಿಂದ ಪತ್ರಿಕೆ ತೆಗೆದು ನೋಡಿದೆ. ಶಾಂತಿಯ ಚಿತ್ರ ವರದಕ್ಷಿಣೆಗೆ ಆಹುತಿ ಶಾಂತಿ ವಿದ್ಯಾವಂತೆ, ಬುದ್ಧಿವಂತಳು ಆದರೆ ಬಡತನ ಅವಳಿಗೆ ಕಿತ್ತುತಿನ್ನುತ್ತಿತ್ತು. ವಯಸ್ಸಾದ ತಂದೆ–ತಾಯಿಗೆ ಹೊರೆಯಾಗಲಿ ಚ್ಚಿಸದೆ, ಮುದಿ ವರನಿಗೆ ಪತ್ನಿಯಾಗಲು ಇಷ್ಟಪಡದೆ, ಆತ್ಮಹತ್ಯೆಗೆ ಮೊರೆ ಹೋದಳು, ಈ ವರದಕ್ಷಿಣೆ ಎನ್ನುವುದು ಸಮಾಜದಲ್ಲಿ ಶಾಂತಿಯಂತಹ ಎಷ್ಟೋ ಹೆಣ್ಣು ಮಕ್ಕಳನ್ನು ಬಲಿತೆಗೆದು ಕೊಳ್ಳುತ್ತದೆ. ಈ ಸಮಾಜಿಕ ಪಿಡುಗಿನ ಅನಾವರಣ ಮಾಡಿ, ಇದನ್ನು ಹೋಗಲಾಡಿಸಲು ವಿದ್ಯಾವಂತರಾದ ಯುವಪೀಳಿಗೆ, ಪಣ ತೊಡಬೇಕು ಎಂದು ಹೇಳುತ್ತಾರೆ. ಗೌರಮ್ಮನವರಿಗೆ ಸಾಮಾಜಿಕ ಸನ್ನಿವೇಶದಲ್ಲಿ ಸ್ತ್ರೀಪರವಾಗಿ ವರ್ತಿಸುವುದನ್ನು ನಾವು ಅವರ ಕತೆಯಲ್ಲಿನ ಪಾತ್ರಗಳ ಮುಖಾಂತರ ತಿಳಿಯಬಹುದು. ಗೌರಮ್ಮನವರಿಗೆ ವರದಕ್ಷಿಣೆ ತೆಗೆದುಕೊಳ್ಳುವ ಪದ್ಧತಿಯ ಬಗ್ಗೆ ತಿರಸ್ಕಾರವಿದ್ದರೂ, ಅದನ್ನು ತೆಗೆದುಕೊಳ್ಳುವ ವ್ಯಕ್ತಿಯ ಪಾತ್ರವನ್ನು ಗೌರಮ್ಮನವರು ದ್ವೇಷಿಸುವುದಿಲ್ಲ. ಹಾಗಾಗಿ ಲೇಖಕಿಗೆ ವ್ಯವಸ್ಥೆಯ ಬಗ್ಗೆ ದ್ವೇಷವಿದೆಯೋ ವಿನಃ ವ್ಯಕ್ತಿಗಳ ಬಗ್ಗೆ ಅಲ್ಲ ಎನ್ನುವುದು ಮನದಟ್ಟಾಗುತ್ತದೆ. ಸ್ತ್ರೀಯ ಅಸಹಾಯಕತೆಯನ್ನು ಕಾಣುವ ಮನಸ್ಸು ಇಲ್ಲಿನ ಪಾತ್ರಗಳಿಗೆ ಇದೆ. ಅದೇ ರೀತಿ ಮೇಲಿನ ಪಾತ್ರಗಳ ಮುಖಾಂತರ ಸಾಮಾಜಿಕ ಸಂಪ್ರದಾಯವನ್ನು ಪ್ರಶ್ನಿಸುವ ಸುಧಾರಕ ಬುದ್ಧಿಯಿದೆ ಎಂಬ ಮಾತುಗಳು, ಕತೆಗಳಲ್ಲಿ ಸೇರಿಕೊಂಡಿರುವುದನ್ನು ನೋಡುತ್ತೇವೆ. ಆದರೆ ರಘು ಮಾತ್ರ ತನ್ನ ಬಡತನದ ಕಾರಣದಿಂದಾಗಿ, ಲಂಡನ್‌ನಲ್ಲಿ ಉನ್ನತ ವ್ಯಾಸಂಗವನ್ನು ಮಾಡುವ ಇಚ್ಛೆಯನ್ನು ಈಡೇರಿಸಿಕೊಳ್ಳಲಾರದೆ ಪೂರೈಸಿಕೊಳ್ಳಲಾರದೇ, ತಾನು ಪ್ರೀತಿಸಿದ ಹುಡುಗಿ ಶಾಂತಿಯನ್ನು ವಿವಾಹವಾಗಲೂ ಆಗದೆ ತೊಳಲಾಡುವ 'ದುರಂತ ನಾಯಕ' ನಾಗಿ ಈ ಕತೆಯಲ್ಲಿ ಗೌರಮ್ಮನವರು ಬಿಂಬಿಸಿದ್ದಾರೆ.

ಇದು ಮಹಿಳಾ ಪರ ಕಾಳಜಿ ಇರುವ ಕತೆ. ಆದರೆ ಈ ಕಥೆಯ ಕೇಂದ್ರಬಿಂದು ವರದಕ್ಷಿಯಂಥಹ ಸಾಮಾಜಿಕ ಪಿಡುಗಿನ ಅನಾವರಣ ಅಷ್ಟೇ ಅಲ್ಲದೆ ವಿದ್ಯಾವಂತ ಯುವಕರು ಇಂಥಹ ಸಾಮಾಜಿಕ ಸಮಸ್ಯೆಯನ್ನು ಹೋಗಲಾಡಿಸಲು ಎಚ್ಚೆತ್ತುಕೊಳ್ಳಬೇಕು. ಎಂಬುದು ಕತೆಗಾರ್ತಿಯ ಆಶಯವಾಗಿದೆ.

'ಮರದ ಗೊಂಬೆ' ಕತೆಯಲ್ಲಿ ಬರುವ ನಾಯಕಿ ಶೈಲೆ. ಹಾಸ್ಟೆಲಿನಲ್ಲಿರುವ ಎಲ್ಲ ಹುಡುಗಿಯರಿಗಿಂತ ಹೆಚ್ಚು ಎಂದೇ ಹೇಳಬಹುದಾದ ಹುಡುಗಾಟ, ತುಂಟಾಟ, ಮೊಂಡಾಟ ಅಷ್ಟೇ ಅಲ್ಲದೆ, ಧೈರ್ಯ, ಆತ್ಮವಿಶ್ವಾಸ, ಗೆಲ್ಲಲೇ ಬೇಕು ಎನ್ನುವ ಛಲ ಇತ್ತು. ಆದರೆ ತನ್ನ ಎಲ್ಲ ಗುಣಗಳನ್ನು ಉತ್ತಮ ಕಾರ್ಯಕ್ಕೆ ಮಾತ್ರ ಉಪಯೋಗಿಸುವ ಒಂದು ಅಮೂಲ್ಯ ಶಕ್ತಿ ಶೈಲನ ಬಳಿ ಇತ್ತು. ಅಷ್ಟೇ ಅಲ್ಲ ಪಾಠ ಮಾಡುವ ಉಪಾಧ್ಯಾಯನ ಪಾಠವನ್ನು ಅವನ ರೀತಿಯನ್ನು

ವಿಮರ್ಶಿಸುವುದು, ಆತನನ್ನೇ ತಿದ್ದುವ ರೀತಿಯನ್ನು ಅವಳ ಪಾತ್ರದ ಮುಖಾಂತರ ತುಂಬಾ ಸೊಗಸಾಗಿ ನಿರೂಪಿಸಿದ್ದಾರೆ.

ಕಥೆಯ ಶೀರ್ಷಿಕೆಗೆ ತಕ್ಕಂತೆ ಉಪಾಧ್ಯಾಯ ಕೃಷ್ಣ ಮೂರ್ತಿಯ ವ್ಯಕ್ತಿತ್ವವನ್ನು ನೋಡುತ್ತೇವೆ. ಯಾವುದೇ ಭಾವನೆಗಳು ಇಲ್ಲದ ಜೀವಂತಿಕೆಯನ್ನು ಕಳೆದು ಕೊಂಡಿರುವ ಮನುಷ್ಯನ ರೀತಿ ತರಗತಿಯಲ್ಲಿ ಇರುತ್ತಿದ್ದ. ಯಾರ ಬಳಿಯಲ್ಲೂ ಯಾವ ಮಾತುಗಳನ್ನು ಆಡುತ್ತಿರಲಿಲ್ಲ. ಈಗ ಇದ್ದ ಪರಿಸ್ಥಿತಿಯಲ್ಲಿ ಕೃಷ್ಣಮೂರ್ತಿ [೭]"ನಮಗೆ ವಾರಕ್ಕೆ ಐದು ಗಂಟೆಯ ಲೆಕ್ಕ, ಮೂರು ಗಂಟೆ ಕನ್ನಡ ಪಾಠಕ್ಕೆ ಬರುತ್ತಿದ್ದರು. ಬಂದಾಕ್ಷಣವೇ ಬೋರ್ಡಿನ ಮೇಲೆ ಒಂದೆರಡು ಲೆಕ್ಕಗಳನ್ನು ಬರೆದು ಅವುಗಳನ್ನು ಮಾಡುವ ರೀತಿಯನ್ನು ವಿಧಾನವನ್ನು ತಿಳಿಸುತ್ತಿದ್ದರು"[೭]. ಒಮ್ಮೆಯೂ ತರಗತಿ ಕಡೆ ತಿರುಗಿ ಹೇಳಿದ್ದೆ ಇಲ್ಲ, ಸದಾಕಾಲ ಬೋರ್ಡಿನ ಕಡೆ ತಿರುಗಿಯೇ ಹೇಳುತ್ತಿದ್ದರು. ನಮಗೆ ಆ ವಿಚಾರ ತಿಳಿದಿದೆಯೋ ಇಲ್ಲವೋ ಎಂಬ ಪ್ರಶ್ನೆ ಮಾಡುವ ಗೋಜಿಗೆ ಹೋಗುತ್ತಿರಲಿಲ್ಲ. ಒಂದು ಪ್ರಶ್ನೆ ಮಾಢುವ ಗೋಜಿಗೆ ಹೋಗುತ್ತಿರಲಿಲ್ಲ. ಒಂದು ಬಾರಿಯಾದರೂ ತರಗತಿಯ ಕಡೆ ತಿರುಗಿ ನೋಡುತ್ತಿರಲಿಲ್ಲ.

ಒಮ್ಮೆ ಒಂದು ಬಾರಿ ಹುಡುಗಿಯರೆಲ್ಲಾ ಸಭೆ ಸೇರಿ, ಶೈಲಳಾ ಅಧ್ಯಕ್ಷತೆಯಲ್ಲಿ ಒಂದು ತೀರ್ಮಾನಕ್ಕೆ ಬಂದರು. ಕೃಷ್ಣಮೂರ್ತಿ ಉಪಾಧ್ಯಾಯರು ಯಾವ ಪ್ರಶ್ನೆ ಕೇಳಿದರೂ ಉತ್ತರಿಸುವ ಗೋಜಿಗೆ ಹೋಗಬಾರದು ಎಂದು, ತರಗತಿಯಲ್ಲಿ ಹುಡುಗಿಯರು ಹಾಗೆಯೇ ನಡೆದುಕೊಂಡರು. ಈ ಸನ್ನಿವೇಶವನ್ನು ನೋಡಿದ ಉಪಾಧ್ಯಾಯ ತರಗತಿಯನ್ನು ಉದ್ದೇಶಿಸಿ ಬೈಯತೊಡಗಿದ, ಆಗ ಶೈಲೆಯು ಎದ್ದು ನಿಂತು ಅವನನ್ನು ಕುರಿತು 'ಗೊತ್ತಿಲ್ಲ ಎಂದವರಾರು? ಎಂದು ಪ್ರಶ್ನಿಸಿದಳು.' ಹಾಗಾದರೆ ಅದಕ್ಕೆ ಜವಾಬು ಕೊಡದಿದ್ದರೆ ಅರ್ಥವೇನು? ಎಂದು ಕೇಳಿದ. ಹೀಗೆ ಇಬ್ಬರ ನಡುವೆ ಪ್ರಶ್ನೆಗಳ ವಾಗ್ವಾದಗಳು ನಡೆಯಿತು. ಕೊನೆಗೆ ಎಲ್ಲಾ ಹುಡುಗಿಯರು ಸೇರಿ ತರಗತಿಯಲ್ಲಿ ಹೇಗಾದರೂ ಮಾಡಿ ಉಪಾಧ್ಯಾಯರಿಗೆ ಬುದ್ದಿಕಲಿಸಬೇಕು ಎಂದು ಹೋಗಿ, ಬದಲಾಗದೆ ಇರುವ ಆ ಮನುಷ್ಯನನ್ನು ಕಂಡು, ಶೈಲೆ ಆತನಿಗೆ 'ಮರದ ಗೊಂಬೆ' ಎಂದು ನಾಮಕರಣ ಮಾಡಿದಳು. ಅಷ್ಟೇ ಅಲ್ಲ ಆಗೊಂಬೆಯನ್ನು ಮನುಷ್ಯನನ್ನಾಗಿ ಮಾಡಬೇಕು. ಸಮಾಜದಲ್ಲಿ ಆತನು ಇತರರೊಂದಿಗೆ ಸಹಜವಾಗಿಯೇ ಬೆರೆಯಬೇಕು ಎಂದು. ಗುರುವಿಗೆ ತಿರುಮಂತ್ರ ಹೇಳುತ್ತಾರಲ್ಲ ಹಾಗೆ, ಪಾಠಮಾಡುವ ಉಪಾಧ್ಯಾಯರಿಗೆ ಪಾಠ ಹೇಳಿಕೊಡಲು ಹೋಗುವ ಶೈಲೆಯ ದಿಟ್ಟತನವನ್ನು ನೋಡುತ್ತೇವೆ.

ಈ ಮರದ ಗೊಂಬೆಯನ್ನು ಮನುಷ್ಯನಾಗಿ ಮಾಡಲು ಬೇರೆ ಯಾರಿಂದಲೂ ಸಾಧ್ಯವಿಲ್ಲ. ಅದು ಅವನ ಹೆಂಡತಿ ಮಾತ್ರ ಆಗಿರಬೇಕು, ಎಂದು ಆ ಜವಾಬ್ದಾರಿಯನ್ನು ಶೈಲಳಿಗೆ ಕೊಟ್ಟರು. ಕೊನೆಗೂ ಶೈಲಳ ತಲೆಗೆ ಈ ಮರದ ಗೊಂಬೆಯನ್ನು ಕಟ್ಟಿದರು. ಅಂತು ಶೈಲೆ ಈ ಮರದ ಗೊಂಬೆಗೆ ಸಮಾಜದಲ್ಲಿ ಮನುಷ್ಯ ಮನುಷ್ಯನ ನಡುವೆ ಇರುವ ಮಾತುಮತ್ತು ಭಾವನೆಗಳ ಪರಸ್ಪರ ವಿಚಾರ ವಿನಿಮಯ ಇವೆಲ್ಲವನ್ನು ತಿಳಿಸಿದಳು. ಮನುಷ್ಯ ವ್ಯವಹಾರವನ್ನು ಚೆನ್ನಾಗಿ ಕಲಿಸಿದಳು. ಹೀಗೆ ಹುಡುಗಿಯರ ಅಂದಿನ ಎಳೆತನದ ಚೇಷ್ಟೆ, ಹುಡುಗಾಟಿಕೆ ಒಂದು ಪ್ರೇಮಮಯವಾದ ಕಟುಂಬವಾಗುವುದಕ್ಕೆ ಸಾಧ್ಯ ಎಂದು

[೭]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೨೩೬

ಗೌರಮ್ಮನವರು ತಮ್ಮ ವಾಕ್ ಚಾತುರ್ಯದಲ್ಲಿ ಬೆಳೆಸಿದ್ದಾರೆ. ಅಷ್ಟೇ ಅಲ್ಲದೆ ಇಲ್ಲಿ ಶೈಲ ಮತ್ತು ಸೀತೆಯ ಒಂದು ನಿರ್ಮಲವಾದ ಗೆಳೆತನವನ್ನು ನೋಡುತ್ತೇವೆ. ಇಲ್ಲಿ ಗೌರಮ್ಮನವರು ನವಿರಾದ ಭಾಷೆಯಲ್ಲಿ ಹೇಗೆ ಕತೆಯನ್ನು ಚಿತ್ರಿಸಿದ್ದಾರೆ ಎಂದು ನೋಡುತ್ತೇವೆ. ಶಾಲೆಯ ಬಾಲ್ಯದಲ್ಲಿ ಎಲ್ಲ ಹುಡುಗಿಯರಲ್ಲಿದ್ದ ಒಂದು ಮನೋಭಾವನೆ, ಅವರ ತರಗತಿಯಲ್ಲಿ ಇದ್ದ ಒಗ್ಗಟ್ಟು, ಸೀತೆ & ಶೈಲೆಯ ಸ್ನೇಹ, ಸಂಸಾರವನ್ನು ಮಾಡಿಕೊಂಡ ನಂತರವೂ ಹೇಗೆ ಮುಂದುವರೆಯುತ್ತದೆ, ಮತ್ತು ಕಥೆಯು ಅಲ್ಲಲ್ಲಿ ಬರುವ ಹಾಸ್ಯಮಯ ಪ್ರಸಂಗ, ಮಾನವೀಯ ಸಂಬಂಧಗಳ ಬೆಸುಗೆ, ಗಂಡು ಹೆಣ್ಣಿನ ಮೂಲಕ ಅಭಿವ್ಯಕ್ತಿಗೊಳಿಸುವುದು. ಮುಖ್ಯವಾಗಿ ಮಾನವೀಯ ಸಂಬಂಧದಲ್ಲಿ ಗೆಳೆತನಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡುವುದು. ಈ 'ಗೆಳೆತನ' ದಂಥ ಸಂಬಂಧವು ಮನುಷ್ಯನ ಜೀವನದಲ್ಲಿ ಎಷ್ಟು ಅಮೂಲ್ಯವಾದದ್ದು ಎಂದು ತಿಳಿಸುವುದು.

ಶೈಕ್ಷಣಿಕ ಪರಿಸರದ ಹಿನ್ನೆಲೆಯಲ್ಲಿ ಕೃಷ್ಣಮೂರ್ತಿ ಮತ್ತು ಶೈಲರ ಒಂದು ಸುಖಿ ಸಂಸಾರದ ಚಿತ್ರಣವನ್ನು ಚಿತ್ರಿಸುವುದು. ಕತೆಯ ಮೂಲಕೇಂದ್ರ ಒಂದು ಹೆಣ್ಣು, ಆ ಹೆಣ್ಣಿನ ದಿಟ್ಟತನವನ್ನು ನಾವಿಲ್ಲಿ ಗುರುತಿಸಬೇಕು. ಒಂದು ಹೆಣ್ಣು ಜೀವವಿಲ್ಲದ ಮರದಗೊಂಬೆಗೆ ಜೀವಂತಿಕೆಯ ಸೃಷ್ಟಿಯನ್ನು ಹೇಗೆ ಕೊಡುತ್ತಾಳೆ ಎಂಬುದನ್ನು ಕಾಣಬಹುದು. ಗೌರಮ್ಮನ ಕಥನ ಪ್ರಜ್ಞೆ, ಕಥೆಯ ಕಲಾವಂತಿಕೆಯನ್ನು ನಾವಿಲ್ಲಿ ನೋಡಬಹುದು. ಇಲ್ಲಿ ಕಥೆಯು ಸುಖಾಂತ್ಯವನ್ನು ಪಡೆದಿರುವುದು ಗೌರಮ್ಮನವರ ಸಮಾಜ ಮುಖಿ ಧೋರಣೆಯ ಸಂಕೇತವನ್ನು ಸೂಚಿಸುತ್ತದೆ.

ಅವಳ ಭಾಗ್ಯ : ಕತೆಯ ಕೇಂದ್ರ ಪಾತ್ರ ಪಾರು. ಇಲ್ಲಿ ಪಾರುವಿನ ಬಡತನ ಹಾಗೂ ಅವಳ ಆಂತರಿಕ ಸೌಂದರ್ಯದ ಅನಾವರಣವನ್ನು ಕುರಿತು ಚರ್ಚಿಸುತ್ತೇವೆ. ಈ ಕತೆಯಲ್ಲಿ ಬರುವ ಪಾರು ಕುರೂಪಿ, ಹೇಳಿಕೊಳ್ಳುವಂತಹ ಯಾವ ಬಾಹ್ಯ ಸೌಂದರ್ಯವು ಈ ಹೆಣ್ಣಿಗೆ ಇಲ್ಲ. ಸೊಗಸಾದ ರೆಪ್ಪೆ ಒಂದು ಬಿಟ್ಟು [೮]"ಹುಡುಗಿ ಹದಿನೈದು ವರ್ಷ ಪ್ರಾಯದ ಹೆಣ್ಣು, ಆದರೆ ಅವಳನ್ನು ಗಮನಿಸಿದರೆ ಪ್ರಾಯ ಇನ್ನು ಹೆಚ್ಚಾಗಿದೆ ಎನ್ನಿಸುವಂತೆ ಇದ್ದಳು. ಇದ್ದಲಿನಂತಹ ಮೈಬಣ್ಣ, ಕೆಲವು ತಿಂಗಳ ಹಿಂದೆ ರೋಗದಿಂದ ತತ್ತರಿಸಿದ್ದಾಳೆ ಎನ್ನುವಂತೆ ಅವಳ ಮುಖದ ಛಾಯೆ ಇತ್ತು. ತಲೆಯ ಕೂದಲೆಲ್ಲಾ ಉದುರಿ ಆಗ ತಾನೇ ಮತ್ತೆ ಬರಲು ಪ್ರಾರಂಭಿಸಿದ್ದವು. ಚಪ್ಪಟೆ ಮೂಗು, ಯಾವಾಗಲೂ ರೆಪ್ಪೆಗಳ ಅಡಿಯಲ್ಲೇ ಅಡಗಿಕೊಂಡಿರುವ ಅವಳ ಕಣ್ಣುಗಳನ್ನು ನಾನು (ನಿರೂಪಕಿ) ನೋಡಿರಲಿಲ್ಲ"[೮]. ಆದರೂ ಅವುಗಳನ್ನು ಮುಚ್ಚಿಕೊಂಡಿದ್ದ ಉದ್ದವಾದ ರೆಪ್ಪೆಯ ಈ ಅವಲಕ್ಷಣದ ಮುಖಕ್ಕೆ ಇಷ್ಟೊಂದು ಸೊಗಸಾದ ರೆಪ್ಪೆಯೋ ಎಂದೆನಿಸಿತು.

ಈ ಕತೆಯಲ್ಲಿ ಗಾಂಧೀ ತತ್ವದ ಧೋರಣೆಯನ್ನು ಗಮನಿಸಬಹುದು. ಪಾರು ಕಿಟ್ಟಣ್ಣನ ಮಾವನ ಗುಮಾಸ್ತರ ಮಗಳು. ಮೊದಲೇ ಕುರೂಪಿ ಹುಡುಗಿ ಜೊತೆಗೆ ಬಡತನ ಬೇರೆ, ಈ ಎರಡು ಸೇರಿ ಅವಳಿಗೆ ವರ ಸಿಗದಂತೆ ಮಾಡಿತ್ತು. ಎಲ್ಲರಿಗೂ ಅಷ್ಟೆ ಅವಳೆಂದರೆ ತಾತ್ಸರ. ಕಿಟ್ಟಣ್ಣನ ಮದುವೆಗೆ ಬಂದ ಪಾರುವನ್ನು ಹಾಡುವಂತೆ ಹೇಳಿದ. ಆದರೆ ಪಾರು, ಕಿಟ್ಟಣ್ಣ

[೮] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೪೦, ೪೧

ಹೇಳಿದ್ದನ್ನೇ ಗಂಭೀರವಾಗಿ ತೆಗೆದುಕೊಂಡು ಅತ್ಯಂತ ಮಾಧುರ್ಯದ ಸ್ವರದಿಂದ 'ಪರಮಾತ್ಮಾ ಹರೇ ಪಾವನನಾಮ, ನಾನ್ಯಾಕೆ ಬಡವನಯ್ಯಾ' ಹಾಡುಗಳನ್ನು ಹಾಡುತ್ತಾಳೆ. ಈಗ ಪಾರುವಿನ ವ್ಯಕ್ತಿತ್ವ ಎಂತಹದು ಎಂದು ತಿಳಿಯುತ್ತದೆ. ಕತೆಯ ಮೊದಲಿನಿಂದ ಪಾರುವಿನ ಬಗ್ಗೆ ಇದ್ದ ಅಭಿಪ್ರಾಯವನ್ನೆಲ್ಲ ಬುಡಮೇಲು ಆಗುವುದಕ್ಕೆ ಪ್ರಾರಂಭವಾಗುತ್ತದೆ. ಸುಂದರವಲ್ಲದ ರೂಪದ ಒಳಗೂ ಅತ್ಯಂತ ಸುಂದರವಾದ ಹೃದಯಗಳಿರುವುವು ಎಂಬುದನ್ನು ಪಾರುವಿನ ಕಣ್ಣುಗಳು ನನಗೆ ತೋರಿಸಿಕೊಟ್ಟವು. ಈ ಕತೆಯಿಂದ ಕತೆಗಾರ್ತಿ ಹೇಳುತ್ತಿರುವುದೇನೆಂದರೆ, ಆಕರ್ಷಕ ಚೆಲುವು ಮೃದುವಾದ ಮಾತಿನ ಮೋಡಿ, ಸುಂದರವಾದ ವೇಷ, ಭೂಷಣ, ನಯನಾಗರಿಕ ವರ್ತನೆ, ಇವುಗಳು ಅಂತರಂಗದ ವ್ಯಕ್ತಿತ್ವವನ್ನು ಹೇಳಲಾರವು. ಸಮಾಜದಲ್ಲಿ ಪ್ರತಿಯೊಬ್ಬ ಮನುಷ್ಯನು ಮೊದಲು ಗಮನಿಸ ಬೇಕಾದದ್ದು, ಅಂತರಂಗದ ಮಾನವೀಯ ಮೌಲ್ಯದರ್ಶಿಗಳನ್ನೇ ವಿನ ಬಾಹ್ಯ ವೇಷ-ಭೂಷಣಗಳಲ್ಲ. ಎಂಬ ನೀತಿಯನ್ನು ಈ ಪಾರುವಿನ ಪಾತ್ರದಿಂದ ಅರ್ಥೈಸುತ್ತಾರೆ. ಮನುಷ್ಯನ ಬೆಲೆ ಆಂತರ್ಯದ ಒಳನೋಟದಿಂದ ತಿಳಿಯಬೇಕೇ ಹೊರತು ಬಹಿರಂಗದ ಸೌಂದರ್ಯದಿಂದ ಅಲ್ಲ ಎಂದು ಹೇಳುತ್ತಾರೆ.

ಮೊದಲೇ ಪಾರು ಹೇಳುವಂತೆ ನಾನ್ಯಾಕೆ ಬಡವನಯ್ಯ ಎಂಬ ಹಾಡಿನ ಮೂಲಕ, ತನ್ನ ಬಡತನವನ್ನು ಪಾರುವೇ ಪರಿಚಯಿಸುತ್ತಾಳೆ. ಈ ಕತೆಯಲ್ಲಿ ಬಡತನದ ಅನಾವರಣ ವಾಗುತ್ತದೆ. ಮೇಲೆ ಹೇಳಿದಂತೆ ೧೫ವರ್ಷ ಪ್ರಾಯವಾದರು ಪಾರುವಿಗೆ ವಿವಾಹವಾಗಿಲ್ಲ. ಕಾರಣ ಅವರ ಮನೆಯಲ್ಲಿ ತಾಂಡವವಾಡುತ್ತಿದ್ದ ಬಡತನ ಈ ಬಡತನದ ಬೇಗೆಯಲ್ಲಿ ಬೇಯುತ್ತಿದ್ದ ಕ್ಷಯರೋಗಿ ಡಾ. ಕೃಷ್ಣಸ್ವಾಮಿ ವರನಾಗಿ ಬರುತ್ತಾನೆ. ಇದು ಪಾರುವಿನ ವರವೇ ಎಂದು ನಿರೂಪಕಿ ಹೇಳುತ್ತಾರೆ. ಆದರೆ ಐಶ್ವರ್ಯವಂತ ಕ್ಷಯರೋಗಿ ಡಾ. ಕೃಷ್ಣಸ್ವಾಮಿ ಊಟ ಬಟ್ಟೆಗಳಿಗೆ ಕೊರತೆಯಿಲ್ಲದಾತ. ಮದುವೆಯ ಎರಡು ಕಡೆಯ ಖರ್ಚನ್ನು ತಾನೇ ವಹಿಸಿ ಕೊಂಡು ಪಾರುವನ್ನು ಮದುವೆಯಾಗುತ್ತೇನೆ ಎಂದು ಹೇಳಿದನು.

[೯]"ಗಂಡನ ಮನೆಯಲ್ಲಿ ಅತ್ತೆ, ಮಾವ ಯಾರೂ ಇಲ್ಲ. ಗಂಡನನ್ನು ಸ್ವಲ್ಪ ಆರೈಕೆ ಮಾಡಿಕೊಂಡರೆ ಸರಿ- ಉಂಡುಟ್ಟು ಸುಖವಾಗಿರಲು ಯಾವ ತೊಂದರೆಯೂ ಇಲ್ಲ - ನಿಜವಾಗಿಯೂ ಪಾರು ಭಾಗ್ಯಶಾಲಿನಿ"

ಸಮಾಜದಲ್ಲಿ ಆವರಿಸಿರುವ ಸಾಮಾಜಿಕ ಸಮಸ್ಯೆಗಳಲ್ಲಿ ಒಂದಾದ ಬಡತನ, ದಾರಿದ್ರ್ಯ, ತಾರತಮ್ಯ ಭಾವನೆ, ವರ್ಣಬೇದ ನೀತಿ ಇವುಗಳೆಲ್ಲದರ ಮೇಲೂ ಗೌರಮ್ಮನವರಿಗೆ, ಸಾಮಾಜಿಕ ಕಳಕಳಿ ಇರುವುದನ್ನು ನೋಡುತ್ತೇವೆ. ವ್ಯಕ್ತಿ ಸೌಂದರರ್ಯ ಎಂದರೆ ಮೇಲ್ನೋಟಕ್ಕೆ ಕಾಣುವ ಸೌಂದರ್ಯವಲ್ಲ. ಕಪ್ಪು ಬಣ್ಣದಲ್ಲೂ ಸೌಂದರ್ಯವನ್ನು ಕಾಣುವ ದೃಷ್ಟಿಕೋನ ಬೆಳೆಸಿಕೊಳ್ಳಬೇಕು. ಬಣ್ಣಕ್ಕಿಂತ ಗುಣವೇ ಮುಖ್ಯ ಎಂಬುದನ್ನು ಮೊದಲು ಪರಿಗಣಿಸಬೇಕು. ಅದೇ ಕಥೆಯ ನಿರೂಪಕಿಯ ಅಭಿಪ್ರಾಯ. ಮಾಧುರ್ಯದ ಧ್ವನಿ ಹೊಂದಿದ ಸದ್ಗುಣಗಳನ್ನು ಮೈಗೂಡಿಸಿಕೊಂಡಿರುವ ಪಾರು ಕ್ಷಯರೋಗಿಯನ್ನು ಕೈ ಹಿಡಿದಿರುವುದು ಅವಳ ಭಾಗ್ಯ! ಎಂಬ ಮಾತು ವ್ಯಂಗ್ಯದೋರಣೆಯನ್ನು ತೋರಿಸುತ್ತದೆ.

---

[೯] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೪೪.

'ಹೋಗಿಯೇ ಬಿಟ್ಟಿದ್ದ' ಕತೆಯ ನಿರೂಪಕನೆ ನಾಯಕನಾಗಿ ಕಾಣಿಸಿಕೊಳ್ಳುತ್ತಾನೆ. ಇದು ಅಂತರ್ ಧರ್ಮೀಯ ವಿವಾಹದ ವೈಫಲ್ಯವನ್ನು ಕುರಿತು ಹೇಳುವ ಕತೆ ನಾಯಕ ೩೦ವರ್ಷದ ಹಿಂದಿನ ಕತೆಯನ್ನು ಹೇಳುತ್ತಾನೆ.

೮ನೇ ವರ್ಷದ ಬಾಲಕನಿಂದ ೨೫ವರ್ಷ ಪ್ರಾಯದವರೆಗೂ ಯುವಕ ಬೆಳಗಿನಿಂದ ರಾತ್ರಿಯವರೆಗೂ ಹೊಲ, ಮನೆ, ದನ, ಮಕ್ಕಳು ಹೀಗೆ ಎಲ್ಲ ಕೆಲಸಗಳನ್ನು ಬಿಡುವಿಲ್ಲದೆ ಸತತವಾಗಿ ಮಾಡುತ್ತಾನೆ. ಬಿಸಿಲು, ಮಳೆ, ಗಾಳಿ ಯಾವುದನ್ನು ಲೆಕ್ಕಿಸದೆ ಕೆಲಸವನ್ನು ಆಟದಂತೆ ನಿರ್ವಹಿಸುತ್ತಾನೆ. ಹೀಗಿರಬೇಕಾದರೆ ಜಾತಿಯಿಂದ ಮುಸಲ್ಮಾನಳಾದ ಲತೀಫಾಳ ಪರಿಚಯ ನಂತರ ಪ್ರೇಮದ ಕಡೆಗೆ ತಿರುಗುತ್ತದೆ.

ಲತೀಫಾಳ ಪ್ರೇಮ ಪ್ರಕರಣ ತಿಳಿದ ಅವಳ ಚಿಕ್ಕಪ್ಪ ಅವಳ ಮದುವೆಯನ್ನು ಗೊತ್ತುಮಾಡಿ ೧೦೦ರೂ. ಗಳನ್ನು ಸಹಾ ಪಡೆದಿರುತ್ತಾನೆ. ಇಲ್ಲ ಲತೀಫಾಳ ಆಸೆ ಆಕಾಂಕ್ಷೆಯನ್ನು ಕೇಳಲೇ ಇಲ್ಲ. ಲತೀಫಾಳನ್ನು ಎಲ್ಲೂ ಹೋಗದಂತೆ ಎಚ್ಚರ ವಹಿಸುತ್ತಾನೆ.

ಆ ದಿನ ಲತೀಫಾಳನ್ನು ನೋಡದೆ ನಾಯಕನಿಗೆ ಸಮಾಧಾನವಿಲ್ಲ. ಮರುದಿನ ಅವಳನ್ನು ಕಾಣಲು ಹೋಗುತ್ತಾನೆ. ಅಲ್ಲಿ ಅವಳಿಂದ ಎಲ್ಲ ವಿಚಾರ ತಿಳಿಯುತ್ತಾನೆ. ಅದಕ್ಕೆ ಲತೀಫಾ ನಿನ್ ಕೈಯಿಂದಲೇ ನನ್ನನ್ನು ಕೊಂದುಬಿಡು ಎಂದಳು. ಆದರೆ ಅವನಿಗೆ ಯಾವುದೇ ವಿಚಾರವನ್ನು ವಿವೇಚಿಸುವ ಶಕ್ತಿ ಇರಲಿಲ್ಲ. ಅವಳನ್ನು ಹತ್ತಿರಕ್ಕೆ ಸೆಳೆದುಕೊಂಡು ಅವಳ ಮುಖವನ್ನು ತನ್ನೆದೆಯಲ್ಲಿ ಆನಿಸಿಕೊಂಡು ಅವಳ ಬೆನ್ನಿಗೆ ಚೂರಿ ಹಾಕಿದ. ಮತ್ತೆ ಒಂದೇ ಒಂದು ಕ್ಷಣದಲ್ಲಿ ಅವನ ಸೆಳೆತವು ಸಡಿಲವಾದಾಗ ಅವಳು ಶವವಾಗಿದ್ದಳು. ಒಂದರೆಕ್ಷಣದ ಮೊದಲು ಅರಳಿದ ಮುಖ, ಬೆಳಗಿನಗು, ಕಣ್ಣುಗಳ ಶಾಂತ ನೋಟ ಎಲ್ಲವೂ ಹಾಗೆ ಇತ್ತು.

[೧೦]"ಆದರೆ ಅವನಿಗೊಂದು ಕಾಣದು. ರಕ್ತ ಮಡುವಿನಲ್ಲಿ ಬಿದ್ದಿದ್ದ ಶರೀರ ಅವನಿಗೆ ಕಾಣಿಸಲಿಲ್ಲ. ಜಾತಿ ಬಂಧನದ ಆಚೆ ನಿಂತು ಮುಗುಳುನಗು ನಗುತ್ತ ತನ್ನನ್ನೇ ಕೂಗುತ್ತಿದ್ದ ಅವಳೆಡೆಗೆ ಸೇರಲು ಹತ್ತಿರದಲ್ಲೇ ಇದ್ದ ಬಾವಿಗೆ ಹಾರಿದ ಬಾವಿಗೆ ಹಾರಿದ ಸತ್ತು ಅವಳೆಡೆಯನ್ನು ಸೇರುವ ಸಲುವಾಗಿ ; ಆದರೆ ಅವನು ಸಾಯಲಿಲ್ಲ .. ಸಾಯಲಿಲ್ಲ"[೧೦]

ನಾಯಕ ತನ್ನ ಗೆಳತಿಯನ್ನು ಕಳೆದು ಕೊಂಡ ನಂತರ ಬದುಕ್ಕದ್ದು ಸತ್ತಂತೆ ಆಯಿತು ಅವನ ಸ್ಥಿತಿಗತಿ. ಲತೀಫಳ ಚಿಕ್ಕಪ್ಪ ನಾಯಕನನ್ನು ಕೋರ್ಟಿಗೆ ಕರೆದುಕೊಂಡು ಹೋಗಿದ್ದರಿಂದ ವ್ಯಾಜ್ಯವೂ ಆಯಿತು. [೧೧]"ಹುಚ್ಚನಲ್ಲದಿದ್ದರು ಹುಚ್ಚನೆನ್ನಿಸಿಕೊಂಡು ೩೦ವರ್ಷ ಹುಚ್ಚರ ಆಸ್ಪತ್ರೆಯಲ್ಲಿ ಕಳೆದ ತರುವಾಯ ಒಂದು ದಿನ ಬಿಡುಗಡೆಯಾಯಿತು. ಇನ್ನೇನು ಹೋಗಬಹುದಲ್ಲ ಎಂದು ನೀವು ಕೇಳಬಹುದು. ಹೌದು ಹೋಗಬಹುದು ಇದೋ ಹೊರಟೆ ಹೋಗುತ್ತೇನೆ"[೧೧]. ಎಂದು ಅವನು ಮಿಂಚಿನ ವೇಗದಿಂದ ಹೋಗುತ್ತಿದ್ದ ಆ ರೈಲಿನ ಕಿಟಕಿಯಿಂದ ಕೆಳಗೆ ಹಾರಿಬಿಟ್ಟ. ಈ ಸಾರಿ ೩೦ವರ್ಷಗಳಿಂದ ದಾರಿಕಾಯುತ್ತಿದ್ದ ಲತೀಫಾಳೆಡೆಗೆ ಅವನು ಹೋಗಿಯೇ ಬಿಟ್ಟಿದ್ದ.

---

[೧೦+೧೧] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೯೫, ೯೬

[೧೨]"ಪ್ರೇಮಕ್ಕೆ ಜಾತಿಕುಲ ಕಟ್ಟಿಕೊಂಡು ಮಾಡಬೇಕಾದುದೇನು? ಅದು ಕುರುಡು. ಅದರಲ್ಲೂ ನಿಜವಾದ ಪ್ರೇಮವಾದರೆ ಅದರ ಹಾದಿ ಎಂದೆಂದಿಗೂ ನಿಷ್ಕಂಳಂಕವಲ್ಲ"[೧೨]. ಇದು ಅಂತರ್‌ಧರ್ಮೀಯ ಕಥೆ. ಅಂತರ್ ಧರ್ಮೀಯ ವಿವಾಹದ ಕಥೆ ಈ ನಿರ್ಮಲವಾದ ಪ್ರೀತಿಗೆ ಲೌಕಿಕ ಜೀವನದಲ್ಲಿ ಜಾತಿ, ಧರ್ಮಗಳ ಅಡ್ಡಿಯಿದ್ದರೂ ಸಾವಿನಲ್ಲಿ ಯಾವ ಅಡೆತಡೆಗಳು ಇರಲಾರದೆಂಬ ಧೋರಣೆ ಈ ಕತೆಯದು. ಗಂಡು ಹೆಣ್ಣಿನ ಸ್ವಭಾವ ಸಹಜ ವ್ಯಾಪಾರವಾಗಿ ಒಡಮೂಡಿದ 'ಪ್ರೀತಿ' ಯ ಹಿನ್ನೆಲೆಯಲ್ಲಿ ಅಂತರ್ ಧರ್ಮೀಯ ವಿವಾಹದ ಪ್ರಶ್ನೆಯನ್ನೆತ್ತಿದ್ದಾರೆ. ಆದರೆ ಈ ಕತೆ ದುರಂತದಲ್ಲಿ ಕೊನೆಯಾಗುತ್ತದೆ. ಆದರೆ ಈ ಕಥೆಯಲ್ಲಿ ಇದು ಯಾವ ಸಾಮಾಜಿಕ ಸಮಸ್ಯೆಗೂ ಪರಿಹಾರವೆಂದು ಕತೆಗಾರ್ತಿ ಪ್ರತಿಪಾದಿಸಿದಂತಿಲ್ಲ.

'ನನ್ನ ಮದುವೆ' : ಕತೆಯ ನಾಯಕ ರಾಮುವಿಗೂ, ಜೀವನದಲ್ಲಿ ಇಂಗ್ಲೇಂಡಿಗೆ ಹೋಗುವ ಗುರಿಯನ್ನು ಬೆಳಸಿಕೊಳ್ಳುತ್ತಾನೆ. ಗುರಿಗೆ ತಕ್ಕ ಸಾಧನೆಯನ್ನು ಬಹಳ ಶ್ರಮಪಟ್ಟು ಮಾಡುತ್ತಾನೆ. ರಾಮು ತಾನು ಬಾಲ್ಯದಿಂದ –ಬೆಳೆಸಿಕೊಂಡು ಬಂದ ಆಸೆಯನ್ನು ತಂದೆಯ ಮುಂದೆ ಇಟ್ಟ.

ರಾಮುವನ್ನು ಇಂಗ್ಲೆಂಡಿಗೆ ಕಳುಹಿಸುವಂತಹ ಸ್ಥಿತಿವಂತರಲ್ಲ. ಆರ್ಥಿಕತೆಯ ಅನುಕೂಲ ಇವರಿಗೆ ಇರಲಿಲ್ಲ. ಆ ದಿನವೆಲ್ಲ ಹಣಕ್ಕೆ ಏನು ಮಾಡುವುದು ಎಂದು ನಿದ್ರೇನೆ ಮಾಡದೇ ರಾಮು ಏಳುವುದಕ್ಕೆ ಇಷ್ಟಪಡದೆ ಮಲಗಿದ್ದ ನಿದ್ರೆಯೂ ಇಲ್ಲ, ಇಂತಹ ದ್ವಂದ್ವದ ಪರಿಸ್ಥಿತಿಯಲ್ಲಿ ಇರಬೇಕಾದರೆ, ರಾಮೂ ಅಣ್ಣ ಕೂಗ್ತಾರೆ ಎಂದಳು ತಂಗಿ..

ರಾಮುವನ್ನು ಕರೆಸಿ ಮದುವೆಯ ಪ್ರಸ್ತಾಪ ಮಾಡಿದರು, ರಾಮುವಿಗೆ ನನ್ನ ಭವಿಷ್ಯದ ಬದುಕೆ ಕಳಚಿ ಬೀಳುವಾಗ, ಮದುವೆ ಎನ್ನುವುದು ಸಂತಸದ ವಿಚಾರ ಆಗಿರಲಿಲ್ಲ. ಅದಕ್ಕೆ ತಂದೆ ಹೇಳಿದರು, [೧೩]"ನೀನೀಗ ಮದ್ವೆ ಆದ್ರೆ ನಿನ್ನ ಇಚ್ಛೆಯಂತೆ ಯೂರೋಪಿಗೆ ಹೋಗಬಹುದು. ನಿಮ್ಮ ಮಾವನ್ಮನೆಯೋರೇ ನಿನ್ನ ಓದಿಸ್ತಾರಂತೆ"[೧೩]. ಏನಂತಿ ಎಂದರು. ರಾಮು ದ್ವಂದ್ವಕ್ಕೆ ಈಡಾದ.

ಆದರೆ ಕಾಲೇಜಿನಲ್ಲಿ ಅಧ್ಯಯನ ಮಾಡುತ್ತಿದ್ದಾಗ ವರದಕ್ಷಿಣೆಯ ವಿರೋಧವಾಗಿ ಎಷ್ಟೋ ವಾದ ವಿವಾದಗಳನ್ನು ಮಾಡಿ, ಸಮಾಜದಲ್ಲಿ ಇರುವ ಈ ಕೆಟ್ಟಚಾಳಿಯನ್ನು ಹೋಗಲಾಡಿಸಬೇಕು ಎಂದು ಖಂಡಿಸಿದ್ದೇನೆ. ಇಂತಹ ಆತ್ಮಾಭಿಮಾನವನ್ನು ಬಲಿಕೊಟ್ಟು ಮನಸ್ಸಿಗೆ ವಿರೋಧವಾಗಿ ನಡೆದು, ಇಂಗ್ಲೆಂಡಿಗೆ ಹೋಗಿ, ಆಸೆ ಪೂರೈಸಿಕೊಳ್ಳಲೇ, ಅಥವಾ ಆತ್ಮಗೌರವ ಕಾಪಾಡಿಕೊಳ್ಳಲೇ, ಆದರೆ ರಾಮುವಿಗೆ ಎರಡೂ ಅತ್ಯಂತ ಪ್ರಿಯವಾದವು. ಯಾವುದನ್ನು ತೆಗೆದುಕೊಳ್ಳಲಿ, ಎಂದು ಆಲೋಚಿಸಿತ್ತಿರುವಾಗಲೇ, ಅನಂತ ರಾಮು ಒಳ್ಳೆ ಆಫರ್, ನೀ ಮದ್ವೆ ಆದ್ರೆ ಇಂಗ್ಲೆಂಡಿಗೆ ಹೋಗಬಹುದು. ಹುಡುಗಿ ಮೆಟ್ರಿಕ್, ಆದ್‌ಮೇಲೆ ಕಾಲೇಜಿಗೆ ಹೋಗುತ್ತಾಳೆ. ಸಂಗೀತ ಬೇರೆ ಅಧ್ಯಯನ ಮಾಡುತ್ತಾಳೆ. ತಂದೆ ಜಮೀನ್‌ದಾರ, ಒಳ್ಳೆ ಮಗ್ಳು, ಬಡವರ ಹತ್ತಿರ ಹಣ ತೆಗೆದುಕೊಳ್ಳಬಾರದು. ಆದರೆ ರಾಮುಗೆ ಯಾವುದನ್ನು

---

[೧೨] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೯೨

[೧೩] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೨೨೨

ಒಪ್ಪಬೇಕು, ಯಾವುದನ್ನು ಒಪ್ಪಬಾರದು ಒಂದು ತಿಳಿಯಲಿಲ್ಲ. ಅವರುಗಳು ತನ್ನ ಅನ್ನಿಸಿಕೆ ಕೇಳುವಾಗ ಏನೆಂದು ನಾನು ನಿಶ್ಚಯಿಸಿರಲಿಲ್ಲ. ಆಕಸ್ಮಿಕವಾಗಿ 'ಬಾಯಿಂದ ಅಗ್ಗಿ' ಎಂದೇ ಥಟ್ಟನೆ ಆನಂತ ರಾಮು ಮದುವೆಗೆ ಒಪ್ಪಿದ ಎಂದು ಹೇಳಿದ.

ಲವ್ ಮ್ಯಾರೇಜ್‌ಗಳಲ್ಲಿ ವಿಶ್ವಾಸ ಇಟ್ಟುಕೊಂಡ ನಾನು ಹಣಕ್ಕೋಸ್ಕರ ನನ್ನನ್ನೇಕೆ ನಾನೇ ಮಾರಿಕೊಂಡೆ?. ಇದು ಮದುವೆಯ ಮಾರಾಟವೋ, ಹಣಕ್ಕಾಗಿ ಒಂದು ಹುಡುಗಿಯ ಜೀವನವೇ ಬಲಿತೆಗೆದು ಕೊಂಡಿರುವೆನಲ್ಲ ಎಂದು ಆತನ ಮನಸ್ಸಿನಲ್ಲಿ ಒಂದೊಂದೇ ಆಲೋಚನೆಗಳು ಏಳಲು ಪ್ರಾರಂಭವಾಯಿತು. ಮರುದಿನ ಹುಡುಗಿಯನ್ನು ನೋಡುವುದಕ್ಕಾಗಿ ಕರೆದರೆ ರಾಮು ಹಣಕ್ಕಾಗಿ ಮದುವೆಯಾಗುತ್ತಿರುವ ನಾನು ಹುಡುಗಿ ನೋಡಿ ಮಾಡಬೇಕಾದುದ್ದೇನು?. ಹೇಗಿದ್ರು ಒಪ್ಪಿದ್ದೇನೆ ಎಂದ, ಮದುವೆ ನಿಶ್ಚಯವಾಯ್ತು. ಹೈದರಾಬಾದಿನಲ್ಲಿ ಮದುವೆ, ಯೂನಿವರ್ಸಿಟಿಗೆ ಪ್ರಪ್ರಥಮನಾಗಿ ಪಾಸಾದ ರಾಮು. ಅಪ್ಪ, ಅಮ್ಮ, ಅತ್ತೆ ಮಾವಂದಿರಿಗೆ ಬಹಳ ಆನಂದ, ಆದರೆ ಆ ಆನಂದ ರಾಮುವಿಗೆ ಇರಲಿಲ್ಲ. ಅವನ ಮನಸ್ಸನಲ್ಲಿ ಈ ದ್ವಂದ್ವ ಹೋರಾಟವೇ ನಡೆಯುತ್ತಿತ್ತು.

ಮದುವೆ ಚಪ್ಪರದಲ್ಲಿ ಶಾರಿಯು ರಾಮುವನ್ನು ಎದುರು ಬದರಾಗಿ ನಿಂತಿದ್ದರು. ಮದ್ಯದಲ್ಲಿ, ಒಂದು ತೆರೆ. ೫ ನಿಮಿಷದಲ್ಲಿ ಅವಳನ್ನು ಕಾಣಬೇಕು ೫ ಯುಗಗಳಾಗಿ ಮಾರ್ಪಟ್ಟಿತ್ತು, ರಾಮುವಿಗೆ, ಶಾರಿ ಎಣ್ಣೆಗೆಂಪು ಬಣ್ಣ, ತೆಳ್ಳಗೆ ಉದ್ದವಾಗಿದ್ದಳು, ಪುರೋಹಿತರು ಮಾಲೆ ಹಾಕಮ್ಮ ಎಚಿದರೂ ಸುಮ್ಮನೆ ನಿಂತಿದ್ದಳು. ಶಾರಿಯ ತಾಯಿ ಬಂದು ನಿನ್ನೆದುರು ನಿಂತವರು ವರ ಅವರಿಗೆ ಮಾಲೆ ಹಾಕು ಎಂದಳು, ಶಾರಿ ಹೂಮಾಲೆಯನ್ನು ಹಿಡಿದು ಕೊಂಡು ಮೆಲ್ಲನೆ ತಡವರಿಸಿ ಬಗ್ಗಿದ ತನ್ನ ಶಿರಕ್ಕೆ ಮಾಲೆ ಹಾಕಿದಳು. ಶಾರಿ ಏಕೆ ಹೀಗೆ ಮಾಡುತ್ತಿದ್ದಾಳೆ ಎಂದು ಪುನಃ ಅವಳ ಮುಖ ನೋಡಿದೆ, ಶಾರಿಯ ಕಣ್ಣುಗಳಲ್ಲಿ ತುಂಬಿದ್ದ ಕಣ್ಣೀರಿನ ತೊಟ್ಟುಗಳೆರಡು ಕಪೋಲಗಳ ಮೇಲುರುಳಿ ಮಾಯವಾದವು. ಮದುವೆಗೆ ಬಂದಿದ್ದ ನಮ್ಮ ಕಡೆಯ ಅಷ್ಟೊಂದು ಜನರಿಗೆ ಗೊತ್ತಾಗದ ಆ ವಿಷಯ ನನಗೆ ತಿಳಿಯಿತು ನನ್ನ ಹೆಂಡತಿ ಶಾರಿ ಕುರುಡಿ ಎಂದು.

ಮೇಲಿನ ಕಥೆಯನ್ನು ಗಮನಿಸಿದಾಗ ಬಾಳ ಸಂಗಾತಿಯನ್ನು ನಿರ್ಧರಿಸುವ ಪರಿಣಾಮದ ದುರಂತವನ್ನು ಮನಗೊಂಡರೆ ವ್ಯಕ್ತಿ ತನ್ನ ವ್ಯಕ್ತಿತ್ವವನ್ನು ಮತ್ತು ಆದರ್ಶವನ್ನೇ ದುರಂತಕ್ಕೆ ಈಡುಮಾಡಬಹುದಾದ ಸ್ಥಿತಿ ಕಾಣುತ್ತದೆ. 'ಹಾಸಿಗೆ ಇದ್ದಷ್ಟು ಕಾಲು ಚಾಚು' ಎನ್ನುತ್ತಾರೆ. ಹಾಗೆ ನಮ್ಮ ಕುಟುಂಬದ ಇತಿಮಿತಿಗಳೇನು ಎಂಬುದನ್ನು ತಿಳಿಯದ ನಾವು ದೊಡ್ಡ ದೊಡ್ಡ ಆಸೆಗಳನ್ನು ಹೊಂದಿದಾಗ, ಪ್ರೀತಿ ಪ್ರೇಮದಂತಹ ಮನುಷ್ಯನ ಸಾಮಾನ್ಯ ಆಸೆಗಳನ್ನು ಹತ್ತಿಕ್ಕಿದಾಗ, ಇದೆಲ್ಲವನ್ನು 'ಅರ್ಥವ್ಯವಸ್ಥೆ' ಹೇಗೆ ನಿಯಂತ್ರಿಸುತ್ತದೆ, ಅದರಿಂದ ಉಂಟಾಗುವ ವಿಶಾದದ ಅಂತ್ಯವನ್ನು ಈ ಕತೆಯಲ್ಲಿ ಚಿತ್ರಿಸುತ್ತದೆ. ಆದ್ದರಿಂದ ಸಮಾಜದಲ್ಲಿ ವಾಸಿಸುವ ಎಲ್ಲರೂ ತಮ್ಮ ಕೈಗೆ ಎಟುಕುವ ಹಣ್ಣಿಗೋಸ್ಕರ ಆಸೆ ಪಡಬೇಕೇ ಹೊರತು ದೊರಕದೇ ಇರುವ ದ್ರಾಕ್ಷಿಗಾಗಿ ಅಲ್ಲ ಎಂದು. ಬೇಸರಗೊಳ್ಳುವ ಅಗತ್ಯವಿಲ್ಲ (ಇದು ವರದಕ್ಷಿಣೆ ಕುರಿತಾದ ಕಥೆ)

ಬಹಳಷ್ಟು, ಕಥೆಗಳು, ಗೌರಮ್ಮನವರು ನೋಡುವ ಅಂಶವೆಂದರೆ ವಿವಾಹ ಎನ್ನುವುದು ಮಾನವನ ಮಜಲಿನ ಒಂದು ಹಂತ ಎಂದು ಹೇಳಬಹುದು. ಈ ವಿವಾಹ ವೈಯಕ್ತಿಕ ವಿಚಾರವಾದರೂ, ಇದನ್ನು ಸಾಮಾಜಿಕ ಧಾರ್ಮಿಕ ಕಟ್ಟು ಪಾಡುಗಳೇ ನಿಯಂತ್ರಿಸುತ್ತವೆ. ಕುಟುಂಬದ ಆರ್ಥಿಕ ಪರಿಸ್ಥಿತಿಯು ವಿವಾಹದ ಮೇಲೆ ನಿಂತಿರುತ್ತದೆ. ಎಚಿಬುದನ್ನು ನೋಡುತ್ತೇವೆ. ಅಂತಸ್ತಿಗೆ ತಕ್ಕಹಾಗೆ ಸಂಬಂಧ ಬೆಳೆಸಬೇಕು ಎಂದು, ಸಂಬಂಧ ಬೆಳೆಸಲು ಯೋಗ್ಯತೆ ಇರಬೇಕು. ಹೀಗೆ ನಾನಾ ರೀತಿಯ ಮಾತುಗಳನ್ನು ಆಡುತ್ತಿರುವುದನ್ನು ನಾವು ಕೇಳುತ್ತೇವೆ. ಅದಕ್ಕೆ ಹೇಳುವುದು ಮದುವೆ ಸಾಮಾಜಿಕ ಧಾರ್ಮಿಕ ನೀತಿ ನಿಯಮಗಳಿಗೆ ಒಳಪಟ್ಟಿರುವುದು ಎಂದು. ಈ ಕತೆಯಲ್ಲಿ ಗೌರಮ್ಮನವರು ಗುರುತಿಸುವ ಮುಖ್ಯವಸ್ತುವೆಂದರೆ ವರದಕ್ಷಿಣೆ, ಈ ವರದಕ್ಷಿಣೆಯಿಂದ ಸಮಾಜ ಎಂತೆಂಥಹ ಕಷ್ಟಕಾರ್ಪಣ್ಯಗಳನ್ನು ಎದುರಿಸುತ್ತದೆ ಎಂದು ತಿಳಿಸುತ್ತದೆ. ಇದರ ಪರಿಣಾಮದಿಂದ ಯುವಕ ಯುವತಿಯ ದುರಂತ ಕಥೆಯ ಸ್ಥಿತಿಯನ್ನು ಕಾಣುತ್ತೇವೆ. ಇಂತಹ ಸಾಮಾಜಿಕ ಪಿಡುಗನ್ನು ಬುಡಸಮೇತ ಕಿತ್ತು ಎಸೆಯ ಬೇಕು ಎಂಬುದೇ ಗೌರಮ್ಮನವರ ಮನೋಧರ್ಮದ ಉದ್ದೇಶವಾಗಿದೆ. ಇದಕ್ಕೆ ಸಮಾಜದ ಪ್ರತಿಯೊಂದು ಯುವ ಪೀಳಿಗೆ ಸಹಕರಿಸಬೇಕು ಎಂದು ಹೇಳಿದ್ದಾರೆ.

'ಅದೃಷ್ಟದ ಆಟ' : ಕತೆಯ ನಾಯಕ ಮಣಿ ನಾಯಕಿ ಲತ ಇವರಿಬ್ಬರಿಗೂ ಮದುವೆಯ ಒಪ್ಪಂದವಾಗಿತ್ತು. ಮಣಿ ಲತೆಯನ್ನು ಬಹಳಷ್ಟು ಪ್ರೀತಿಸುತ್ತಿದ್ದ. ಆದ್ರೆ, ತನಗೆ ಕೆಲಸವಿಲ್ಲವೆಂದು, ಕೆಲಸ ಸಿಕ್ಕಮೇಲೆ ಮದುವೆಯೆಂದು ಮನೆಯವರಿಗೆ ಹೇಳಿ ಕೆಲಸದ ಅನ್ವೇಷಣೆಯನ್ನು ಮಾಡತೊಡಗಿದ. ದಿನಗಳೆದಂತೆ ಮಣಿಗೆ ಕೆಲಸ ದೊರೆಯುವುದು ಬಹಳ ಕಷ್ಟವಾಗುತ್ತಿತ್ತು. ಆದರೆ ಇಲ್ಲಿ ಲತೆಯ ತಂದೆಗೆ ದಿನದಿನಕ್ಕೆ ಆತಂಕ ದುಗುಡ ತಲ್ಲಣ ಹೆಚ್ಚಾಗುತ್ತಿತ್ತು. ಹಾಗಾಗಿ ಲತೆಯನ್ನು [೧೪]"ಮದುವೆಮಾಡಿ ಕೊಂಡರೆ ಸಾಕು ಲತೆ ನಿನಗೆ ಕೆಲಸ ಸಿಗುವತನಕ ನಮ್ಮಲ್ಲೇ ಇರಲಿ"[೧೪] ಎಂದು ಕಾಗದ ಬರೆಯುತ್ತಾರೆ . ಮಣಿಗೆ ಅವರ ಮಾತು ಸರಿದೂಗದೆ 'ಉದ್ಯೋಗಂ ಪುರುಷ ಲಕ್ಷಣಂ' ಎಂದು ಅಷ್ಟೇ ಅಲ್ಲದೆ ಮದುವೆ ಮಾಡಿಕೊಂಡು ತನ್ನ ಹೆಂಡತಿಯನ್ನು ಮಾವನ ಮನೆಯಲ್ಲೇ ಬಿಡುವುದು ಎಷ್ಟರಮಟ್ಟಿಗೆ ಸರಿಯೆಂದು ಯೋಚಿಸಿ [೧೫]"ಹೇಗಾದರೂ ಲತೆಯನ್ನು ನಾನೇ ಮದುವೆ ಆಗುತ್ತೇನೆ. ನನಗೆ ಕೆಲಸವಾದ ತರುವಾಯ ಆದರೇನು?"[೧೫] ಎಂದು ಉತ್ತರಿಸಿದನು. ಅಲ್ಲಿಯ ತನಕ ಕಾಯದೆ ಇರುವ ಲತೆಯ ತಂದೆ ಗೋವಿಂದ್ರಾಯರಿಗೆ ಕೊಟ್ಟು ಮದುವೆ ಮಾಡಿದರು. ಆದರೆ ಕೆಲವೇ ದಿನಗಳಲ್ಲಿ ಲತೆ ವಿಧವೆಯಾಗುತ್ತಾಳೆ. ಆದರೆ ಈ ಯಾವ ವಿಚಾರ ತಿಳಿಯದ ಮಣಿ, ಕೆಲವು ವರ್ಷಗಳ ನಂತರ ಲಕ್ಷ್ಮಿಯನ್ನು ವಿವಾಹವಾಗುತ್ತಾನೆ. ವಿವಾಹವಾಗಿ ಕೆಲವೇ ದಿನಗಳಲ್ಲಿ ಲಕ್ಷ್ಮಿಯ ಕೈಯಿಂದ್ದ ಎಂ.ಎಲ್ ಎನ್ನುವ ಉಂಗುರನವನ್ನು ನೋಡಿ ಆಶ್ಚರ್ಯದಿಂದ ಪ್ರಶ್ನಿಸುತ್ತಾನೆ. ಆಗ ಲಕ್ಷ್ಮಿ ಲತಾನ ಕಡೆಯ ಪ್ರೆಸೆಂಟ್ ಎಂದು ಹೇಳಿ ನಡೆದ ಕತೆಯನ್ನು ಹೇಳುತ್ತಾಳೆ. ಆದರೆ ಎಂ.ಎಲ್ ಅನ್ನುವ ಉಂಗುರ ಮಣಿ ಪ್ರೀತಿಯಿಂದ ಲತೆಗೆ ಕೊಟ್ಟಿರುವ ವಿಚಾರ ಲಕ್ಷ್ಮಿಗೆ ತಿಳಿದಿರುವುದಿಲ್ಲ. ಆದರೆ ಲಕ್ಷ್ಮಿ ಮಾತ್ರ ಈ ಉಂಗುರಕ್ಕಾಗಿ ಏಕೆ ಇಷ್ಟು ಯೋಚನೆ ಎಂದು ತನ್ನ ಮನಸ್ಸಿನಲ್ಲಿ ತಾನೆ ಅಂದುಕೊಳ್ಳುತ್ತಾಳೆ ಅಷ್ಟೆ. ಆದರೆ ವಿಚಾರ ತಿಳಿಸುವ

---

[೧೪+೧೫] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೨೧೬

ಗೋಜಿಗೆ ಹೋಗುವುದಿಲ್ಲ. ಕೊನೆಗೆ ಮಣಿ ಎಲ್ಲ ಅದೃಷ್ಟದ ಆಟ ಎಷ್ಟೊಂದು ವಿಚಿತ್ರ ಎಂದು ನಿಟ್ಟುಸಿರು ಬಿಡುತ್ತಾನೆ.

ಹೀಗೆ ಸಮಾಜದಲ್ಲಿ ಅದೃಷ್ಟವೆನ್ನುವುದು ಯಾರಿಗೆ ಯಾವ ಸಮಯದಲ್ಲಿ ಬರುತ್ತದೆ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ ಅಷ್ಟೆ. ಅಲ್ಲದೆ ಮದುವೆ ಎನ್ನವುದು, ನಮಗೆ ಬ್ರಹ್ಮಹಾಕಿದ ಗಂಟು ನಾವು ಎಷ್ಟೇ ಪ್ರೀತಿಸಿ ವಿವಾಹ ಮಾಡಿಕೊಳ್ಳಬೇಕು ಎಂದರು, ಋಣಾನುಬಂಧ ಎಂಬ ಮಾತನ್ನು ಮೀರಿ ನಡೆಯಲು ಸಾಧ್ಯವಿಲ್ಲ ಎನ್ನುವ ನುಡಿಯನ್ನು ಸಮಾಜದ ಕಟ್ಟಳೆಯಲ್ಲಿ ಬದುಕುವ ಜನರ ಚಿತ್ರಣವನ್ನು ಗೌರಮ್ಮ ಚಿತ್ರಿಸಿದ್ದಾರೆ. ಅಷ್ಟೆ ಅಲ್ಲದೆ ಉದ್ಯೋಗವೆನ್ನುವುದು ಪುರುಷನಿಗೆ ಎಷ್ಟು ಅಗತ್ಯ ಎಂಬುದನ್ನು ಮಣಿಯ ಪಾತ್ರ ಮುಖಾಂತರ ಸಾಬೀತು ಪಡಿಸುತ್ತಾಳೆ. ಸಮಾಜದಲ್ಲಿ ಓದಿ ವಿಧ್ಯಾವಂತರಾದ ಯುವಕರಿಗೆ, ಈ ನಿರುದ್ಯೋಗ ಸಮಸ್ಯೆಯಿಂದ ಎಷ್ಟೆಲ್ಲಾ ಅನಾಹುತಗಳು ಸಂಭವಿಸುತ್ತವೆ ಎಂದು ಹೇಳುತ್ತಾರೆ. ಅದರ ಜೊತೆಗೆ ಲತೆಯ ಪಾತ್ರ ಮುಖಾಂತರ ಹೆಣ್ಣಿಗೆ ಸ್ವಾತಂತ್ರ್ಯ ಇಲ್ಲದೆ ಇರುವುದನ್ನು ಮತ್ತೊಬ್ಬರ ಮೇಲೆ ಅವಲಂಬಿತವಾಗುವುದನ್ನು ಕುಟುಂಬದ ಇಚ್ಛೆಯಲ್ಲೇ ಮಹಿಳೆಯ ಬದುಕು ನೆಲೆಗಟ್ಟಬೇಕು ಎಂದು ಗೌರಮ್ಮನವರು ಈ ಕತೆಯ ಮುಖಾಂತರ ತಿಳಿಸುತ್ತಾರೆ.'

ಪ್ರಾಯಶ್ಚಿತ : ಕತೆಯ ನಾಯಕ ಮೂರ್ತಿ ನಾಯಕಿ ನಲಿನ, ಪಕ್ಕದ ಮನೆಯ ನಲಿನಳನ್ನು ಮೂರ್ತಿ ಪ್ರೀತಿಸುತ್ತಾನೆ. ಮೂರ್ತಿಗೆ ತಾಯಿಯಲ್ಲದೆ ಬೇರೆ ಪ್ರಪಂಚವಿಲ್ಲ. ಆದರೆ ಈಗಷ್ಟೆ ಮದುವೆಯು ಆಗಬೇಕೆಂದು ನಿರ್ಧರಿಸುತ್ತಾನೆ. ನಲಿನಳು ತಾಯಿ, ತಂದೆಯಿಲ್ಲದ ಅನಾಥೆ, ಚಿಕ್ಕಪ್ಪ ಮತ್ತು ಚಿಕ್ಕಮ್ಮನ ಆಶ್ರಯದ ಪ್ರೀತಿಯಲ್ಲಿ ಬೆಳೆಯುತ್ತಾಳೆ. ಅವರು ಎಷ್ಟೇ ಪ್ರೀತಿಸಿದರು ಸಮಾಜ ಅವಳನ್ನು ನೆಮ್ಮದಿಯಿಂದ ಬಿಡಬೇಕಲ್ಲ. [೧೬]"ನಲಿನಿಯ ತಾಯಿಯ ವಿಷಯವಾಗಿ ಜನರ ಮಾತು ಕೇಳಿ ಕೇಳಿ ನಲಿನಿಯ ಮನಸ್ಸು ನೊಂದು ಹೋಗಿತ್ತು. ಅವಳ ಚಿಕ್ಕಪ್ಪ ಅವಳ ಮದುವೆಯ ಸಲುವಾಗಿ ಬಹಳ ಪ್ರಯತ್ನ ಪಟ್ಟಿದ್ದರೂ ತಾಯಿಯ ಶೀಲ ನಡತೆಗಳು ಚೆನ್ನಾಗಿರಲಿಲ್ಲ. ಮಗಳು ಅವಳ ದಾರಿ ಹಿಡಿಯದಿರಲಾರಳು ಎಂದುಕೊಂಡು ಅವಳಿಗೆ ಹದಿನೈದು ವರ್ಷಗಳು ತುಂಬಿದರೂ ಯಾರೂ ಅವಳನ್ನು ಮದುವೆಯಾಗಲಿಲ್ಲ"[೧೬]. ಇಂತಹ ನಲಿನಿಯ ಮೇಲೆ ಸಾಕಷ್ಟು ಒಲವಿದ್ದ ಮೂರ್ತಿ ತನ್ನ ತಂದೆಯ ಹತ್ತಿರ ವಿಷಯ ಪ್ರಸ್ತಾಪ ಮಾಡಲು ಹೆದರುತ್ತಿದ್ದನು. ಅಷ್ಟೆ ಅಲ್ಲದೆ ಮೂರ್ತಿಯ ತಂದೆ ಕೋಪಿಷ್ಟ, ಕಲ್ಲಿನಂತಹ ಮನಸ್ಸು, ವಿಚಿತ್ರವಾದ ಮನೋಭಾವ, ಇಂತಹ ನಲಿನಿಯ ಮೇಲೆ ಸಾಕಷ್ಟು ಒಲವಿದ್ದ ಮೂರ್ತಿ ತನ್ನ ತಂದೆಯ ಹತ್ತಿರ ವಿಷಯ ಪ್ರಸ್ತಾಪ ಮಾಡಲು ಹೆದರುತ್ತಿದ್ದನು. ಇಂತಹ ತಂದೆಯ ಬಳಿ ಮೂರ್ತಿ ಯಾವತ್ತು ಏನೂ ಕೇಳಿರಲಿಲ್ಲ. ಎಲ್ಲವನ್ನು ತನ್ನ ತಾಯಿಯಿಂದ ಕೇಳಿ ಪಡೆಯುತ್ತಿದ್ದನೇ ಹೊರತು, ಎದುರು ನಿಂತು ಧೈರ್ಯವಾಗಿ ಮಾತನಾಡುತ್ತಿರಲಿಲ್ಲ. ಇಂತಹ ಸನ್ನಿವೇಶದಲ್ಲಿ ಮೂರ್ತಿ ಒಂದು ದಿನ ತಂದೆಯ ಹತ್ತಿರ ನಿಂತು, ನಾನು ನಲಿನಯನ್ನು ವಿವಾಹವಾಗುವುದಾಗಿ ಹೇಳುತ್ತಾನೆ. ಅವನೆಣಿಸಿದಂತೆ ಆತನ ತಂದೆ ಈ ವಿವಾಹಕ್ಕೆ ಒಪ್ಪಿಗೆಯನ್ನು ನೀಡದೆ ವಿರೋಧಿಸುತ್ತಾನೆ. ಆದರೆ ಅಪ್ರತಿಭಟನಾಗಲಿಲ್ಲ.

---

[೧೬] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ - ೭೨

ಧೈರ್ಯದಿಂದ ನಿರ್ಧಾರದ ಧ್ವನಿಯಲ್ಲಿ ಹೇಳಿದ ನಾನು ಅವಳನ್ನೇ ಮದುವೆಯಾಗುತ್ತೇನೆ ಎಂದು ಹೇಳಿ ನಿಮ್ಮಿಚ್ಛೆ ವಿರೋಧವಾಗಿ ನಡೆಯುವುದಕ್ಕೆ ಕ್ಷಮಿಸಿ ಎಂದು ಹೇಳಿದ ಮೂರ್ತಿಗೆ ಹಿರಿಯರ, ಕಿರಿಯರ ಮೇಲೆ ಭಕ್ತಿಭಾವ ಗೌರವ ಮರ್ಯಾದೆ, ಪ್ರೀತಿ ವಿಶ್ವಾಸಗಳನ್ನು ಇಟ್ಟುಕೊಂಡಿರುವಂತಹ ವ್ಯಕ್ತಿಅಷ್ಟೇ ಅಲ್ಲದೆ ಯೂನಿವರ್ಸಿಟಿಯಲ್ಲಿ ಪ್ರಥಮವಾಗಿ ಪಾಸಾದ ಪ್ರೊಫೆಸರುಗಳ ಶಿಫಾರಸ್ಸಿನಿಂದ ಒಳ್ಳೆಯ ಕೆಲಸ ಕೈತುಂಬ ಸಂಬಳವು ದೊರೆಯುತ್ತಿತ್ತು. ಬಹುದಿನಗಳ ಆಸೆಯ ಪ್ರತಿಫಲದಂತೆ ಮೂರ್ತಿ ಸ್ವತಂತ್ರನಾದ, ತಾಯಿಯನ್ನು ತನ್ನ ಜೊತೆಯೇ ಇರಿಸಿಕೊಂಡು ಇನ್ನು ನಲಿನಿಯನ್ನು ವಿವಾಹವಾಗುವ ವಿಚಾರ ಬಾಕಿ ಇರುವಾಗಲೇ ನಳಿನಿಯನ್ನು ವಿವಾಹ ವಾಗಲು ತಾಯಿ ಎಲ್ಲಾ ರೀತಿಯ ಅನುಕೂಲತೆಯನ್ನು ಮಾಡಿಕೊಡುತ್ತಿದಳು. ಎಲ್ಲಿಯವರಗೆ ಎಂದರೆ, ಅವನ ತಾಂಯಿ [೧೭]"ವಿಷಮ ಶೀತಜ್ವರದಿಂದ ಮಗನ ತೊಡೆಯ ಮೇಲೆ ತಲೆ ಇಟ್ಟುಕೊಂಡು ನಲಿನಿಯನ್ನು ಮದುವೆಯಾಗಿ ಸುಖವಾಗಿ ಬಾಳು ನನ್ನ ಕಂದ"[೧೭] ಎಂದಾಶೀರ್ವಾದ ಮಾಡಿ ಪರಲೋಕ ಯಾತ್ರೆ ಮಾಡಿದಳು.

ಇನ್ನು ಅವನ ಪಾಲಿಗೆ ಉಳಿದಿದ್ದು, ನಲಿನಿ ಮಾತ್ರ. ಆದರೆ ನಲಿನಿ ಇಲ್ಲದೆ ಬದುಕುವುದು ಅಸಾಧ್ಯವಾಯಿತು. ಕೊನೆಗೆ ಮೂರಿ ತಂದೆಯನ್ನು ವಿರೋಧಿಸಿ ಮದುವೆ ಯಾದನು. ಆದರೆ ನಲಿನಿಯ ಆಸೆಯನ್ನು ಪೂರೈಸುವುದಕ್ಕೆ ತಂದೆಗೆ ಕ್ಷಮಾ ಯೋಚನೆಯ ಪತ್ರ ಬರೆಯುತ್ತಾನೆ. ನಲಿನಿಯ ಆಸೆಯ ಅನುಗುಣವಾಗಿ ಬರೆದ ಪತ್ರವನ್ನು ಓದುತ್ತಾ ಅವನ ತಂದೆ ನನ್ನ ಪಾಪದ ಪ್ರಾಯಶ್ಚಿತ್ತವಿದು. ಎಂದು ನಿಟ್ಟುಸಿರಿಟ್ಟು, ಪಶ್ಚಾತ್ತಾಪದ ಕಂಬನಿ ಮಿಡಿಯುವ ಮೂಲಕ ಮೂರ್ತಿ ನಲಿನಿಯ ಮದುವೆಗೆ ಒಪ್ಪಿಗೆಯನ್ನು ತಿಳಿಸುತ್ತಾನೆ.

ಇಲ್ಲಿ ಮದುವೆ ಎನ್ನುವುದು ಗೌರಮ್ಮನ ಕಥೆಯಲ್ಲಿ ಸಮಾಜ, ಕುಟುಂಬ ನಿರ್ಮಿತ ಎಂದು ಹೇಳುತ್ತಿದ್ದರು. ಆದರೆ ಇಲ್ಲಿ ಅದಕ್ಕೆ ವಿರುದ್ಧವಾಗಿ ಮದುವೆ ಎನ್ನುವುದು ಖಾಸಗಿ ನಿರ್ಮಿತ ಎಂಬುದನ್ನು ಇಲ್ಲಿ ಮೂರ್ತಿಯ ಪಾತ್ರದಿಂದ ಸಾಬೀತಾಗುತ್ತದೆ. ಇಲ್ಲಿ ಮೂರ್ತಿಯ ತಂದೆಯಿಂದ ಕತೆಯಲ್ಲಿ ಬರುವ ಮೂವರು ಸ್ತ್ರೀಯರು ಹೇಗೆ ಅಸಹಾಯಕರಾಗಿ ನಿಲ್ಲುತ್ತಾರೆ ಎಂಬುದನ್ನು ತಿಳಿಸುತ್ತದೆ. ಮೂರ್ತಿಯ ತಾಯಿಗೆ ತನ್ನ ಗಂಡನ ಆವೇಶದಿಂದ 'ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಎಳೆದರು' ಎಂಬ ಹಾಗೆ ಮೂರ್ತಿಯ ಕೋಪವನ್ನು ಹೆಂಡತಿಯ ಮೇಲೆ ತೋರಿಸುತ್ತಾನೆ. ಇಲ್ಲಿ ನಲಿನಿಯ ತಾಯಿಯ ಆತ್ಮಹತ್ಯೆಯ ವಿಚಾರ ತಿಳಿದ್ದಿದ್ದರು, ಆತ ಹೇಳದಿರುವುದೇ, ಸಮಾಜ ನಲಿನಿ ನಲಿನಿಯ ತಾಯಿ ಮೇಲೆ ಸಂಶಯವನ್ನು ವ್ಯಕ್ತಪಡಿಸಿ, ಕಠೋರವಾದ ನುಡಿಯಿಂದ ಅಸಹಾಯಕಳಾದ ನಲಿನಿಯನ್ನು ನೋಯಿಸುತ್ತಿರುವ ಸಮುದಾಯವನ್ನು ನಾವು ನೋಡುತ್ತೇವೆ. ಹೀಗೆ ಒಂದಲ್ಲಾ ಒಂದು ಕಾರಣದಿಂದ ಶತ ಶತಮಾನಗಳಿಂದ ಪುರುಷನಿಂದ ಸ್ತ್ರೀ ಶೋಷಿತಳಾಗುತ್ತಾಳೆ ಎಂಬುದನ್ನು ಈ ಕತೆಯಲ್ಲಿ ಹೇಳುವುದರ ಜೊತೆಗೆ ಗಂಡಸಿನ ದರ್ಪ, ಅಹಂಕಾರ, ಗರ್ವವನ್ನು ಇಲ್ಲಿ ಮೂರ್ತಿಯ ತಂದೆಯಿಂದ ಚಿತ್ರಣಗೊಳ್ಳುತ್ತದೆ. ತನ್ನ ತಪ್ಪಿಗೆ ಪ್ರಾಯಶ್ಚಿತದ ಮುಖಾಂತರ ಪಶ್ಚಾತ್ತಾಪ ಪಡುವ ಚಿತ್ರಣವನ್ನು ಒಟ್ಟಾರೆ ಸಮಾಜದಲ್ಲಿನ ಸುಧಾರಣ ಕಾರ್ಯವನ್ನು ಇವರ ಕತೆಗಳ ಮುಖಾಂತರ ಕಾಣುತ್ತೇವೆ.

---

[೧೭] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೮೦

ಪಾಪನ ಮದುವೆ : ಪಾಪ ನವನಾಗರೀಕತೆಯನ್ನು ಹೊಂದಿರುವವನು, ಆಧುನಿಕತೆಯನ್ನು ಮೈಗೂಡಿಸಿಕೊಂಡಿರುವುದನ್ನು (ಪಾಪನ ಸೂಟ್ ಹ್ಯಾಟ್ ನೋಡಿ) ತಿಳಿಯುತ್ತದೆ. ಪಾಪ ವಕೀಲ ವೃತ್ತಿಯನ್ನು ಕೈಗೊಂಡಿರುವನು, ಪಾಪನು ನಿರೂಪಕಿಯು ಬಾಲ್ಯದಿಂದಲೂ ಆಡಿ ಬೆಳೆದಿರುವರು. ಹೀಗೆ ಪಾಪ ಓದಿ ವಿದ್ಯಾವಂತನಾದ ಮೇಲೆ ಆತನಿಗೆ ಒಂದು ಹೆಣ್ಣನ್ನು ಮದುವೆ ಮಾಡಬೇಕೆಂದು, ವಧುವನ್ನು ಹುಡುಕಿಕೊಂಡು ಹೊರಟೆವು. ಆದರೆ ಪಾಪನ ತಾಯಿಗೆ ಹಳ್ಳಿಯ ಹುಡುಗಿಬೇಕು, ಪಾಪನಿಗೆ ಓದಿ ವಿದ್ಯಾವಂತಳಾಗಿರುವಳು ಬೇಕು, ಆದ್ದರಿಂದಲೇ ಪಾಪ ಹೇಳಿ [೧೮]"ಹಳ್ಳಿ ಹುಡುಗೀರ್ನ ಕಟ್ಕೊಂಡು ಸಂಸಾರಮಾಡು ಅಂದ್ರೆ ಹೇಗೆ?"[೧೮] ಅವರ ಅಪನ್ನ ನೋಡಿದ ಮೇಲೆ ಮಗಳನ್ನು ನೋಡೋದೆ ಬೇಡ ಎಂದು ಉತ್ತರಿಸುತ್ತಿದ್ದ.

ಇಲ್ಲಿ ನಿರೂಪಕಿ ಪಾಪ ಜ್ಯೋಯಿಸರ ಊರು ತಲುಪುವುದರಲ್ಲಿ, ಎಲ್ಲಿ ಮೂಳೆಗಳು ಮುರಿಯುತ್ತವೋ ಎಂದು ಹೇಳುತ್ತಾ ಮದ್ಯಾಹ್ನ ೧-೦೦ ಗಂಟೆಗೆ ಆ ಊರಿಗೆ ಹೋದೆವು. ಜೋಯಿಸರು ಮನೆಗೆ ಹೋಗುತ್ತಿದ್ದಂತೆ ಜ್ಯೋಯಿಸರು ಅಳಿಯ ದೇವೋಭವ! ಎಂದು ಪಾಪನಿಗೆ ಸ್ನಾನಕ್ಕೆ ವ್ಯವಸ್ಥೆಮಾಡಿ, ಊಟ ಉಪಚಾರ ಕಾಫಿ ತಿಂಡಿಗಳನ್ನು ಮುಗಿಸಿದ ಬಳಿಕ, ಪಾಪನನ್ನು ಊರುಸುತ್ತಾ ಕರೆದುಕೊಂಡು ಹೋಗಿ, ಊರಿನವರಿಗೆ ಪರಿಚಯ ಮಾಡುವ ಜೋಯಿಸರನ್ನು ನೋಡುತ್ತೇವೆ.

ಕೊನೆಗೆ ನೆರೆಮನೆಯ ಶಾಸ್ತ್ರಿಗಳು ಬಂದು ಲಕ್ಷ್ಮಿ ಮತ್ತು ಹಾರ್ಮೋನಿಯಮ್ ಅನ್ನು ತರಿಸಿ, ಲಕ್ಷ್ಮಿಗೆ ಹಾಡಲು ಹೇಳಿ, ಓದಲು ಹೇಳಿ ಕನ್ಯಾಪರೀಕ್ಷೆ ಮಾಡಿದರು. ಲಕ್ಷ್ಮಿ ಓದುವಾಗ ಶಾಸ್ತ್ರಿಗಳು ಎಲೆ ಅಡಿಕೆ ಉಗುಳಲು ಹೋದರು. ಅಷ್ಟು ಹೊತ್ತಿಗೆ ಲಕ್ಷ್ಮಿಯ ಓದು ಮುಗಿದು ತಲೆಯೆತ್ತುವುದಕ್ಕೆ ಸರಿಯಾಗಿ ೪ ಕಣ್ಣುಗಳು ಒಟ್ಟಿಗೆ ಸೇರಿದವು. ಲಕ್ಷ್ಮಿಯ ಮುಖ ಕೆಂಪಾಯಿತು. ಪಾಪನ ಕಣ್ಣುಗಳು ಮಾತ್ರ ಬೇರೆ ಕಡೆ ತಿರುಗಲಿಲ್ಲ. ಆಗ ಪಾಪ ಧೈರ್ಯಮಾಡಿ ಕುಳಿತುಕೊಳ್ಳಿ ಎಂದ. ಇಲ್ಲಿಂದ ಪಾಪನ ಪ್ರಶ್ನೆಗಳ ಸುರಿಮಳೆ ಲಕ್ಷ್ಮಿಯ ಮೇಲೆ ಪ್ರಾರಂಭವಾದವು. ಆತನ ಪ್ರಶ್ನೆಗಳನ್ನು ನೋಡಿದರೆ ಪಾಪನಿಗೆ ಲಕ್ಷ್ಮಿ ಹಿಡಿಸಿದಳು ಎಂದು ತಿಳಿದುಕೊಂಡ ಪಾಪ ಒಪ್ಪಿದ ಮೇಲೆ ಏನು ಕೆಲಸ ಎಂದು ಅವನೇ ಹೇಳಿದ ಹಾಗೆ ಮಧ್ಯಾಹ್ನ ಹೊರಡೋಣವೇ, ಪಾಪ ಆಂಟಿ ನಾಳೆ ಹೋದರೆ ಆಯ್ತು ಎಂದ.

ಸಮಾಜದಲ್ಲಿ ಒಂದು ಹೆಣ್ಣಿನ್ನ ಹೆತ್ತ ತಂದೆ ತಾಯಿ ಒಟ್ಟಾರೆ ಕುಟುಂಬದವರು, ಆ ಹೆಣ್ಣಿನ ವಿವಾಹ ಸಿದ್ದತೆಗಾಗಿ ಎಷ್ಟೆಲ್ಲಾ ಪರಿಪಾಟಲು ಪಡುತ್ತಾರೆ, ಎಂದು ಜೋಯಿಸರ ಕುಟುಂಬದಿಂದ ಪರಿಚಯಿಸುತ್ತಾರೆ. ಪಾಪನಿಗೂ ಪಾಪನ ತಾಯಿಗೆ ತಮ್ಮ ಮನೆಗೆ ಬರುವ ಹೆಣ್ಣಿನ ಬಗ್ಗೆ ಭಿನ್ನಾಭಿಪ್ರಾಯಗಳು ಇದ್ದರೂ, ಪಾಪ ಇಲ್ಲಿ ತಾಯಿಯ ಮಾತಿಗೆ ಗೌರವ ಕೊಟ್ಟು ತಾಯಿಗೆ ಇಷ್ಟವಾಗುವ ಆಚಾರ, ವಿಚಾರ, ಸಂಪ್ರದಾಯ ಎಲ್ಲ ತಿಳಿದ ಹಳ್ಳಿಯ ಹುಡುಗಿಯನ್ನು ಮದುವೆ ಮಾಡಿಕೊಳ್ಳುವುದರ ಮೂಲಕ, ಹಾಗೂ ಸ್ವಾತಂತ್ರ್ಯ ಪೂರ್ವ ಚಳುವಳಿಯ ಕಾಲದಲ್ಲಿ ಗಾಂಧೀಜಿಯವರ ತತ್ವಗಳು ಎಲ್ಲರ ಮೇಲೆ ಹೇಗೆ ಪರಿಣಾಮವನ್ನು ಬೀರಿತು ಎಂದರೆ, ಗ್ರಾಮೋದ್ದಾರವೇ ದೇಶೋದ್ಧಾರ ಎಂಬಂತೆ, ಗಾಂಧೀಜಿಯವರ ಗ್ರಾಮ

[೧೮] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೯೩

ಪ್ರೀತಿಯ ಪ್ರತಿಪಾದನೆಯನ್ನು ಪಾಪ ಇಲ್ಲಿ ಹಳ್ಳಿಯ ಹುಡುಗಿಯನ್ನು ವಿವಾಹವಾಗುವುದರ ಮುಖಾಂತರ ಅವರ ತತ್ವಗಳು ತತ್ವಗಳಾಗಿ ಉಳಿಯದೆ ಆಚರಣೆಗೆ ತಂದ ಯುವಕ ಪಾಪನಾಗುತ್ತಾನೆ. ಈ ಕಥೆಯಲ್ಲಿ ಗೌರಮ್ಮನವರು ನವಿರಾದ ಭಾಷೆಯನ್ನು ಬಳಿಸಿಕೊಂಡು ಎಲ್ಲಿಯೂ ವರದಕ್ಷಿಣೆಯ ಮಾತೇ ಇಲ್ಲದೆ, ಕತೆ ಸುಖಾಂತ್ಯದಲ್ಲಿ ಪೂರ್ಣಗೊಳ್ಳುವುದನ್ನು ನೋಡಿದರೆ, ಕತೆಗಾರ್ತಿಯ ಪ್ರಕಾರ ಈ ಕತೆ ಸಮಾಜ ಮುಖಿಧೋರಣೆಯನ್ನು ಬಿಂಬಿಸುತ್ತದೆ.

'ನಾಲ್ಕು ಘಟನೆಗಳು' ಎಂಬ ಕಾಗದದಲ್ಲಿ ಬರುವ ಕಥೆಯನ್ನು ನೋಡಿದಾಗ, ಸೀತಾ ರಾಮು ಇಬ್ಬರು ಗಂಡ ಹೆಂಡತಿಯರಾದರೂ ಅವರ ಸಂಬಂಧವನ್ನು ಸ್ನೇಹ ಸಂಬಂಧದಂತೆ ಚಿತ್ರಿಸಿರುವುದು ಹೊಸತನವನ್ನು ತಂದುಕೊಟ್ಟಿದೆ. ರಾಮು ಸೀತೆಗೆ ಬರೆದ ಕಾಗದದಲಿ [೧೯]"ನಾನು ಕಾಗದ ಬರೆಯದಿದ್ದುದಕ್ಕೆ ಕ್ಷಮಿಸು, ನೀನು ಯೋಚಿಸಿರುವಂತೆ ಬರೆಯದಿದ್ದುದಕ್ಕೆ ಕಾರಣ ನಿನ್ನನ್ನು ಮರೆತದ್ದೂ ಅಲ್ಲ. ಹೊಸ ಸ್ನೇಹಿತರೂ ಅಲ್ಲ ನಿನಗಿಂತಲೂ ಹೆಚ್ಚಿನ ಸ್ನೇಹಿತರು ಹೊಸಬರಾಗಲು ಸಾಧ್ಯವೇ? ಕಾರಣ ಏನೆನ್ನಲಿ ಹೇಳುವುದಕ್ಕೆ ಯತ್ನಿಸುವುದಿಲ್ಲ ನೀನು ನನ್ನನ್ನು ನಂಬಬೇಕಾದರೆ ಕಾರಣಗಳ ಅಗತ್ಯವಿಲ್ಲ ನೀನು ನನ್ನನ್ನು ಬಲ್ಲೆ ಮತ್ತೇಕೆ ಹೆಚ್ಚಿನ ವಿಚಾರ"[೧೯] ಎಂದು ತಿಳಿಸುವುದರ ಮುಖಾಂತರವೇ ಗಂಡ ಹೆಂಡತಿಯ ಅನ್ಯೋನ್ಯತೆಯ ಸಂಬಂಧ ಸಮಾಜದಲ್ಲಿ ಹೇಗಿತ್ತು ? ಎನ್ನುವುದನ್ನು ಇಲ್ಲಿ ತಿಳಿಯಬಹುದು.

ಶಿಕ್ಷಣ ಪಡೆದ ದಂಪತಿಗಳ ಜೀವನ ಸಮಾಜದಲ್ಲಿ ಹೇಗೆ ಇರುತ್ತದೆ, ಎಂದು ಅವರ ಪತ್ರದ ಸಂಭಾಷಣೆಯ ಮುಖಾಂತರವೇ ತಿಳಿಯುತ್ತದೆ. ರಾಮು . ಕೊಡುವ ಹೇಳಿಕೆಗೆ ಹೆಂಗಸರ ಉತ್ತೇಜನವಿದ್ದರೆ, ಗಂಡಸರು ಯಾವ ಕೆಲಸವನ್ನಾದರೂ ಮಾಡಬಲ್ಲರಂತೆ. ಹಿಂದೂ ದೇಶದ ಗಂಡಸರಿಗೆ ನನ್ನ ಸೀತೆಯಂತವರು ಇರುತ್ತಿದ್ದರೆ, ಇಷ್ಟರಲ್ಲಿ ಇಡೀ ಭಾರತವು ಭಾಷೆಯಲ್ಲಿ ಒಂದಾಗಿ ಹೋಗುತ್ತಿತ್ತು. ಎಂದು ಹೇಳುವುದರ ಮುಖಾಂತರ ಗೌರಮ್ಮನವರು ರಾಮುವಿನ ಮುಖಾಂತರ ಸೀತೆಯನ್ನು ಸಮಾಜದ ಒಂದು ಆದರ್ಶ ಹೆಣ್ಣಾಗಿ ಕಾಣುವುದನ್ನು ನೊಡಬಹುದು. ಆ ಹೆಣ್ಣಿಗೆ ಸಮಾಜದಲ್ಲಿ ಎಂತಹ ಸ್ಥಾನಮಾನವನ್ನು ಕೊಡಿಸುತ್ತಾರೆ ಎಂಬುದನ್ನು ಮೇಲಿನ ಹೇಳಿಕೆ ನೋಡಿದರೆ ತಿಳಿಯುತ್ತದೆ. ಒಂದು ಮನೆಯೇ ಆಗಲಿ, ಕುಟುಂಬವೇ ಆಗಲಿ, ಸಮಾಜವೇ ಆಗಲಿ, ಸಮುದಾಯವೇ ಅಗಲಿ, ರಾಜ್ಯವೇ, ದೇಶವೇ ಆಗಲಿ ಅತ್ಯಂತ ಉತ್ತಮ ಮಟ್ಟದಲ್ಲಿ ಇರಬೇಕು ಎಂದರೆ ಅದಕ್ಕೆ ಹೆಣ್ಣೇ ಕಾರಣ ಎಂದು ಹೇಳುವ ಮುಖಾಂತರ ಒಂದು ಉತ್ತಮ ಸಮಾಜಕ್ಕೆ ಹೆಣ್ಣು ಎಷ್ಟು ಅನಿವಾರ್ಯ ಎಂದು ಹೇಳುತ್ತದೆ.

ಎರಡನೆಯ ಘಟನೆಯಲ್ಲಿ ರಾಮುವಿನ ಮುಖಾಂತರ ಸೀತೆಗೆ ಹೇಳುವ ವಿಚಾರವೆಂದರೆ ರಾಮು ಪ್ರತಿದಿನವೂ ಆಫೀಸಿಗೆ ಹೋಗುವ ರಸ್ತೆಯ ಬದಿಯಲ್ಲಿ, ಆಫೀಸಿನ ಜವಾನ ತಿಮ್ಮನ ಮನೆ ಇದೆ, ಆ ಕುಟುಂಬದಲ್ಲಿ ತಿಮ್ಮ ಅವನ ಹೆಂಡತಿ ಒಂದು ವರ್ಷದ ಮಗು, ಮೂರೇ ಜನರು ವಾಸಿಸುತ್ತಾರೆ. ತಿಮ್ಮನ ಮಗು ಯಾವಾಗಲೂ ಬೀದಿಯಲ್ಲೇ ಆಡುತ್ತಿರುತ್ತದೆ. ಮೈಮೇಲೆ ಮಸಿ ಹಚ್ಚಿದರೆ ಮಸಿಯೇ ಬಿಳಿಯಾಗಿ ತೋರಬಹುದಾದಷ್ಟು

---

[೧೯] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೬೧

ಕಪ್ಪು. ಆ ಮಗು ಮೈ ಕಪ್ಪಾದರೇನು? ನಿಷ್ಕಲ್ಮಷವಾದ ಮುಖದ ಸೊಬಗೇ ಸಾಲದೆ ?.

೧. ಈ ಮಗುವಿನ ಮುಖಾಂತರ ವರ್ಣಬೇದ ನೀತಿಯನ್ನು ತನ್ನ ಹೆಂಡತಿಗೆ ತಿಳಿಸಿ ಸಮಾಜ ಕಪ್ಪು, ಬಿಳಿಯ ಬಣ್ಣದ ತಾರತಮ್ಯವನ್ನು ಅಲ್ಲಗಳೆಯುವುದನ್ನು ನೋಡುತ್ತೇವೆ.

೨. ಯಾವುದೇ ಬೇದ ಭಾವ, ಮೇಲು ಕೀಳು ಎಂಬ ಈ ಹೀನ ಭಾವನೆಗಳಿಗೆ ಒಳಗಾಗದೆ ಒಂದು ಸಮೃದ್ಧಿಯ ಸಮಾಜ ನಿರ್ಮಾಣ ಆಗಬೇಕು ಎಂಬುದು ಗೌರಮ್ಮನವರ ಆಶಯ.

ಮತ್ತೊಂದು ದಿನ ತಿಮ್ಮ ತನ್ನ ಹೆಂಡತಿಗೆ ಹೊಡೆಯುವ ದೃಶ್ಯವನ್ನು ನೋಡಿದ. ನೆರೆಹೊರೆಯವರು ನೋಡುತ್ತಿದ್ದರೆ ಹೊರತು ಮತ್ತೇನು ಮಾಡಲಿಲ್ಲ. ಇಲ್ಲಿ ಓದಿ ವಿದ್ಯಾವಂತರಾದ ರಾಮು ಮತ್ತು ಸೀತೆಯ ಬದುಕು ಹೇಗಿದೆ? ಶಿಕ್ಷಣದ ಗಾಳಿ ಗಂಧವಿಲ್ಲದ ತಿಮ್ಮ, ಆತನ ಹೆಂಡತಿಯನ್ನು ಯಾವ ರೀತಿಯಲ್ಲಿ ಶೋಷಣೆಗೆ ಗುರಿಮಾಡುತ್ತಿರುವನು ಎಂದು, ಆರ್ಥಿಕವಾಗಿ ಸ್ವಾವಲಂಬಿಯಾಗದೆ ಹೆಣ್ಣು ಸಮಾಜದಲ್ಲಿ ಎಷ್ಟು ಕಷ್ಟ ಕಾರ್ಪಣ್ಯಗಳನ್ನು ಪಡಬೇಕು ಎಂದು ತಿಳಿಯಬಹುದು. ತಿಮ್ಮನ ಹೆಂಡತಿಯ ಸ್ಥಿತಿಗತಿಗಳನ್ನು ನೋಡಿದಾಗ ಸಮಾಜದಲ್ಲಿ ಇರುವ ಹೆಣ್ಣು ಮಕ್ಕಳಿಗೆ ಆರ್ಥಿಕ ಸ್ವಾತಂತ್ರ್ಯ ಅನಿವಾರ್ಯ ವಿರಬಹುದು. ಎಂದು ತಿಳಿಸುವುದರ ಜೊತೆಗೆ ಭಾರತೀಯ ಹೆಣ್ಣಿಗೆ ಕರುಣೆ, ಸಹನೆ, ಪ್ರೀತಿ, ಪ್ರೇಮ, ವಿಶ್ವಾಸ, ಅನುಕಂಪ, ಅನ್ಯೋನ್ಯತೆ, ಭಕ್ತಿ ಎಲ್ಲವು ಹೇಗಿದೆ ಎಂದು ತಿಮ್ಮನ ಹೆಂಡತಿಯ ಮುಖಾಂತರ ತಿಳಿಸುತ್ತಾರೆ.

ಮೂರನೇಯ ಘಟನೆಯನ್ನು ನೋಡಿದಾಗ ನಾನು ಎಲ್.ಎ ಯಲ್ಲಿ ಹೆಣ್ಣು ಮಕ್ಕಳಿಗೂ ತಂದೆಯ ಆಸ್ತಿಯಲ್ಲಿ ಪಾಲು ದೊರೆಯಬೇಕೆಂದು ಮಸೂದೆ ತರಲಿರುವವರು ನಾನು, ಅದಕ್ಕೆ ನೀನು ಚೇಷ್ಟೆ ಮಾಡಿದೆ. ನನಗೆ ತಂಗಿಯರಿದ್ದರೂ, ರಮಣಿಯರ ಆರ್ಥಿಕ ಸ್ವಾತಂತ್ರ್ಯತೆಗೆ ನಾನು ಶತ್ರುವಾಗಲಾರೆನೆಂದು ನಾಯಕ ರಾಮುವಿನ ಮುಖಾಂತರ ಗೌರಮ್ಮನವರು ಹೇಳುತ್ತಾರೆ. ಹೆಣ್ಣಿಗೆ ಆರ್ಥಿಕ ಸ್ವಾತಂತ್ರ್ಯ ಎಂಬುದು ಅಮೂಲ್ಯವಾದದ್ದು– ಅದು ಸಮಾಜದ ಎಲ್ಲ ಹೆಣ್ಣುಮಕ್ಕಳಿಗೂ ಬೇಕೇ ಬೇಕು. ಕೆಲವೊಬ್ಬರಿಗೆ ಮಾತ್ರ ಮೀಸಲಾಗಿರಬಾರದು ಏಕೆಂದರೆ ಸಮಾಜದ ಸಮಾನತೆಗೆ ಧಕ್ಕೆಯನ್ನು ಉಂಟುಮಾಡುತ್ತದೆ ಎಂದು ಗೌರಮ್ಮನವರ ಅನಿಸಿಕೆ, ಅದನ್ನು ಈ ಕಥೆಯಲ್ಲಿ ಮನೋಜ್ಞವಾಗಿ ಗುರುತಿಸುತ್ತಾರೆ. ಅಷ್ಟೇ ಅಲ್ಲದೆ ಸ್ತ್ರೀ ಸ್ವಾತಂತ್ರ್ಯ ಮತ್ತು ಹೆಣ್ಣು ಮಕ್ಕಳಿಗೆ ಆಸ್ತಿಯ ಹಕ್ಕಿನ ಪ್ರತಿಪಾದನೆಯನ್ನು ಮಾಡಿರುವುದು ಇಲ್ಲಿನ ವಿಶೇಷ. ಗೌರಮ್ಮನವರ ಕತೆಗಳಲ್ಲಿ ಹೆಣ್ಣಿಗೆ ಆಸ್ತಿಯ ಹಕ್ಕಿನ ವಿಷಯದ ಪ್ರಸ್ತಾವನೆಯಾಗಿರುವುದು ಇದೊಂದು ಸಂದರ್ಭಮಾತ್ರ, ಇದು ಅವರ ಸಾಮಾಜಿಕ ಕಳಕಳಿಯನ್ನು ತೋರಿಸುತ್ತದೆ ಎಂಬುದು ಗಮನಾರ್ಹ.

ಮತ್ತೊಂದು ದೃಶ್ಯವನ್ನು ನೋಡಿದಾಗ ತೋಟಕ್ಕೆ ಹೋಗಿ ನಂತರ ಮರಳಿ

ನಡುಗುತ್ತಾ ಬರುವಾಗ ತೋಟಕ್ಕೆ ಹೋಗುವ ದಾರಿಯಲ್ಲಿ ನಂದಿಯ ಮರವಿದೆಯಲ್ಲ ಅದರ ಬುಡದಲ್ಲಿ ಯಾರೋ ಹೆಂಗಸು ಕುಳಿತ್ತಿದ್ದರು. ಹೆಂಗಸಿನ ಮಡಿಲಲ್ಲೊಂದು ಮಗು ನಿದ್ರೆ ಮಾಡುತ್ತಿತ್ತು. ಆ ಹೆಂಗಸನ್ನು ನೋಡಿದರೆ ತಕ್ಷಣ ತಿಳಿಯುತ್ತಿತ್ತು. ಅತ್ತು ಅತ್ತು ಕೆಂಪಾದ ಕಣ್ಣುಗಳು, ಕೆದರಿದ ಕೂದಲು, ಹರಿದಿರುವ ಸೀರೆ, ಇದನ್ನು ನೋಡಿ, ಕಾರಣ ಏನೆಂದು ಹೆಂಗಸನ್ನು ಪ್ರಶ್ನಿಸಿದೆ, ಅನಾಥೆ ವಿಧವೆಯನ್ನು ಜಗಳವಾಡಿ ಮಗುವಿನೊಡನೆ ಮಧ್ಯರಾತ್ರಿ ಯೆನ್ನದೆ ಅವಳತ್ತೆ ಮನೆಯಿಂದ ಹೊರಗೆ ಹಾಕಿದ್ದಳಂತೆ [೨೦]"ಇದಕ್ಕೇನೆನ್ನುವೆ ಸೀತಾ? ಭಾರತೀಯ ರಮಣಿಯರಿಗೆ ಸಮಾಜದಲ್ಲಿ, ಹೊರ ಪ್ರಪಂಚದಲ್ಲಿ ಆರ್ಥಿಕ ಸ್ವಾತಂತ್ರ್ಯತೆ ಇಲ್ಲದೆ ಎಷ್ಟೋಂದು ದುಷ್ಪರಿಣಾಮಗಳಾಗುತ್ತಿವೆ ಎಂದು ನೋಡಬಹುದು. ನೋಡು ಸೀತಾ ಸಮಾಜದಲ್ಲಿ ತಾಯಿಯ ಸ್ಥಾನವನ್ನು ಬೇರೆಯವರು ತುಂಬುವುದಕ್ಕೆ ಸಾಧ್ಯವಿಲ್ಲ. ತನ್ನ ಸ್ಥಿತಿಯು ಅತಂತ್ರವಾಗಿರುವಾಗಲೇ ಆ ತಾಯಿ ತನ್ನ ಮಗುವಿನ ರಕ್ಷಣೆಯನ್ನು ಹೇಗೆ ಮಾಡುತ್ತಾಳೆ. ಸಮಾಜದಲ್ಲಿ ಒಂದು ಉತ್ತಮ ಪ್ರಜೆಯ ನಿರ್ಮಾಣವೇ ತಾಯಿಯಿಂದ ಎಂದು ಹೇಳಬಹುದು. ಇದು ಅನಾಥ ವಿಧವೆಯ ಘೋರ ಕತೆಯನ್ನು ತಿಳಿಸುತ್ತದೆ. ಈ ಒಂದು ಉದಾಹರಣೆಯಿಂದ ನೀನು ತಿಳಿದುಕೊಂಡರೆ ನಿಜವಾಗಿಯು ನನಗೆ ಸಂತೋಷವಾಗುವುದು. ಇನ್ನೇನು ಬರೆಯಲಿ"[೨೦]? ಎಂಬುದರ ಮುಖಾಂತರ ಗೌರಮ್ಮ ನವರಿಗೆ ಇರುವ ಸಾಮಾಜಿಕ ಸುಧಾರಣೆಯ ಧ್ಯೇಯವನ್ನು ನಾವಿಲ್ಲಿ ಕಾಣುತ್ತೇವೆ.

ರಾಮು ಸೀತೆ ಪಾತ್ರಗಳ ಮುಖಾಂತರ ಗೌರಮ್ಮನವರು ಸಮಾಜದಲ್ಲಿ ಕಣ್ಮರೆ ಯಾಗುತ್ತಿರುವ ಸ್ತ್ರೀಯ ಸಮಾನತೆ, ಆರ್ಥಿಕತೆ, ಸ್ವಾತಂತ್ರಿಕೆಯನ್ನು ಕುರಿತು ಮಾತನಾಡಿಸುತ್ತಾರೆ. ಈ ಕತೆಯಲ್ಲಿ ರಾಮು ಹೇಳುವಾಗ ಹೆಣ್ಣಿಗೆ ಆರ್ಥಿಕ ಸ್ವಾತಂತ್ರ ಇಲ್ಲದಿದ್ದರೆ ಎಂತಹ ಸ್ಥಿತಿ ಬರುತ್ತದೆ ಎಂದು ಗಾಂಧೀಜಿಯವರ ರಾಮರಾಜ್ಯದ ಕನಸಿಗೂ ನಮ್ಮ ವಾಸ್ತವದ ಸ್ಥಿತಿಗೂ ಎಷ್ಟೋ ಅಂತರವಿದೆ ಎಂಬುದು, ಜೊತೆಗೆ ರಾಮು ಸೀತೆಗೆ ಈ ಒಂದು ಉದಾಹರಣೆಯಿಂದ ನೀನು ತಿಳಿದುಕೊಂಡರೆ ನಿಜವಾಗಿ ನನಗೆ ಸಂತೋಷ ಎನ್ನುವುದರ ಮುಖಾಂತರ ಸ್ತ್ರೀಗೆ ಶಿಕ್ಷಣ ಸ್ವಾತಂತ್ರ್ಯ, ಆರ್ಥಿಕತೆ, ಸಮಾನತೆ, ಸ್ವಾವಲಂಬನೆ ಇದೆಲ್ಲವೂ ಸ್ತ್ರೀಜಗತ್ತು ಅರ್ಥೈಸಿಕೊಳ್ಳಬೇಕು. ಸ್ತ್ರೀಯ ಕುಂದುಕೊರತೆ, ಸಮಾಜ ಸಮಸ್ಯೆಗಳನ್ನು ಸ್ತ್ರೀ ತಿಳಿದುಕೊಳ್ಳಬೇಕು. 'ಹೆಣ್ಣಿಗೆ ಹೆಣ್ಣೆ ಅಭಯ ಹಸ್ತವನ್ನು ನೀಡಬೇಕು, ಎಂದು ರಾಮುವಿನ ಮೂಲಕ ಗೌರಮ್ಮನವರು ಹೆಣ್ಣಿನ ಬಗ್ಗೆ ಇರುವ ಆಶಯವನ್ನು ವ್ಯಕ್ತಪಡಿಸಿದ್ದಾರೆ ಎಂದು ಪಾತ್ರಹೇಳುತ್ತದೆ.

ನಾಲ್ಕನೆಯ ಘಟನೆಯಲ್ಲಿ ಒಂದು ಸಮೃದ್ಧಿ ಸಂತೃಪ್ತಿ ಹೊಂದಿರುವ ಕುಟುಂಬ ಹೇಗೆ ಆಕಸ್ಮಿವಾಗಿ ಘೋರ ದುರಂತಕ್ಕೆ ಈಡಾಗುತ್ತದೆ, ಎಂಬುದನ್ನು ಅನೇಕ ವಿವರಗಳೊಂದಿಗೆ ತಿಳಿಯಬಹುದು. ಮಾನವನ ಹುಟ್ಟು ಅನಿಶ್ಚಿತ ಸಾವು. ಖಚಿತ ಇರುವ ಎರಡು ದಿನಗಳ ಈ ಹೋರಾಟದಲ್ಲಿ ಮನುಷ್ಯ ಮರುಕ್ಷಣವನ್ನು ಅರಿಯದೆ ಬದುಕಿಗಾಗಿ ಹೊಡೆದಾಡುವ ಜೀವನದ ಅದಮ್ಯ ರಹಸ್ಯವನ್ನು ಕುರಿತು ವಿಶ್ಲೇಶಿಸಲಾಗಿದೆ.

ಒಟ್ಟಾರೆ ಈ ೪ ಘಟನೆಗಳ ನಡುವೆ ಇರುವ ಉದ್ದೇಶ ಗುರಿ ಗೌರಮ್ಮನವರಿಗೆ

---

[೨೦] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೬೫

ಮಾನವೀಯ ಸಂಬಂಧಗಳ ಬೆಸುಗೆಯ ಅನಾವರಣ ಎಂದು ತಿಳಿಯಬೇಕು. ಸಮಗ್ರವಾಗಿ ಈ ಪತ್ರವನ್ನು ಗ್ರಹಿಸಿದಾಗ ಒಂದೊಂದರಲ್ಲಿ ಒಂದೊಂದು ಸಾಮಾಜಿಕ ಸಮಸ್ಯೆಯು ಎದ್ದು ಕಾಣುತ್ತಿದ್ದು ಅದಕ್ಕೆ ಗೌರಮ್ಮನು ಪರಿಹಾರವನ್ನು ಪತಿ–ಪತ್ನಿಯರ ನಡುವೆ ನಡೆಯುವ ಪತ್ರ ವ್ಯವಹಾರದ ಮೂಲಕ ಸೂಚಿಸುವುದನ್ನು ನೋಡಿದರೆ, ಇಲ್ಲಿ ಗಂಡ – ಹೆಂಡತಿಯ ಕೌಟುಂಬಿಕ ಹಾಗೂ ಖಾಸಗಿಯ ವಿಚಾರಗಳಿಗಿಂತ ಇಲ್ಲಿ ಸಾಮಾಜಿಕ ಸಮಸ್ಯೆಗಳನ್ನು ಕುರಿತು ಚರ್ಚೆಮಾಡಿರುವುದು ಆಶ್ಚರ್ಯಕರವಾಗಿದೆ. ಗೌರಮ್ಮನವರು ಸಾಮಾಜಿಕ ಕಳಕಳಿಗೆ ಅದರ ಅಭಿವ್ಯಕ್ತಿಗೆ ಕಾಗದದ ರಚನೆಯೋ ಅತ್ಯುತ್ತಮ ಮಾರ್ಗ ಎಂದು ಆಲೋಚಿಸಿ ಸಾಹಿತ್ಯದಲ್ಲಿ ಈ ಒಂದು ನವೀನ ಮಾರ್ಗವನ್ನು ಸೃಷ್ಟಿಸಿಕೊಳ್ಳುವುದರ ಮುಖಾಂತರ ಒಂದು ಹೊಸ ಆವಿಷ್ಕಾರವನ್ನೇ ಮಾಡಿದ್ದಾರೆ ಎಂಬುದನ್ನು ಓದುಗರು ಮನಗಾಣಬೇಕು.

ಗೌರಮ್ಮನವರ ಕಥೆಯನ್ನು ಓದಿದಾಗ ಆ ಕತೆಯಲ್ಲಿ ಕಾಣುವ ಸಾಮಾಜಿಕ ಮತ್ತು ಧಾರ್ಮಿಕ ಸಮಸ್ಯೆಗಳು ಹೇಗೆ ಕಥೆಯಲ್ಲಿ ಅನಾವರಣಗೊಳ್ಳುತ್ತದೆ ಎಂಬುದನ್ನು ನೋಡುತ್ತೇವೆ. ಇವರ ಮೊದಲ ಕಥೆಯಾದ 'ಪುನರ್ ವಿವಾಹ' ಕತೆಯನ್ನು ತೆಗೆದು ಕೊಂಡಾಗ ಆ ಕತೆಯಲ್ಲಿ ಬರುವ ನಾಯಕಿ ರಾಜಿಯನ್ನು ನೋಡುತ್ತೇವೆ. ರಾಜಿ ಇಲ್ಲಿ ಬಂಡಾಯ ಗಾರ್ತಿಯಾಗಿ ಕಾಣಿಸಿಕೊಳ್ಳುತ್ತಾಳೆ. ಇದರ ಜೊತೆಗೆ ವಾಣಿಯ ಸಮಸ್ಯೆಯನ್ನು ತೆಗೆದುಕೊಂಡಾಗ ಎರಡು ಕತೆಗಳಲ್ಲಿ ಕಾಣಿಸಿಕೊಳ್ಳುವುದು ಬಾಲವಿಧವೆಯ ಸಾಮಾಜಿಕ ಸಮಸ್ಯೆಯೇ ಇಲ್ಲಿನ ಕೇಂದ್ರ ಬಿಂದು. ನಂತರ ಪುನರ್ ವಿವಾಹ ದ ಉದ್ದೇಶ ಗುರಿಯನ್ನು ಸಾದಿಸುವುದು. ಒಂದು ಉತ್ತಮ ಸಮಾಜದ ನಿರ್ಮಾಣ ಮಾಡುವುದೇ ಗೌರಮ್ಮನವರ ಕಥೆಯ ಆಶಯವಾಗಿದೆ.

'ವಾಣಿಯ ಸಮಸ್ಯೆ' ಯ ಇಂದುವನ್ನು ತೆಗೆದುಕೊಂಡರೆ, ಪಲಾಯನವಾದಿಯಂತೆ ಸಮಸ್ಯೆಗಳಿಂದ ಬಹುದೂರ ಸಾಗುವ ಪಾತ್ರ ಇಂದುಳದಾಗುತ್ತದೆ. ಇಂತಹ ಇಂದುವಿಗೆ ತಾಯಿ ತಂದೆಯಿಲ್ಲದ ತಬ್ಬಲಿ, ಅನಾಥೆ, ದಾಯಾದಿಗಳ ನೆರಳಿನಲ್ಲಿ ಬೆಳೆದವಳು. ತಕ್ಕ ಮಟ್ಟಿಗೆ ಶಿಕ್ಷಣಾಭ್ಯಾಸವು ನಡೆದಿತ್ತು. ಹೀಗೆ ಇಂದು ಗಂಡನ ನೆನಪಿನಲ್ಲಿ ಅವನು ಅವಳ ಹೆಸರಿಗೆ ಬರೆದ ಮನೆಯಲ್ಲಿ ನೆಮ್ಮದಿಯಾಗಿ ಸುಖವಾಗಿದ್ದಳು. ಪುನರ್‌ವಿವಾಹದ ರಾಜಿಯನ್ನು ನೋಡಿದರೆ ಇಲ್ಲಿ ಬರುವ ರಾಜಿ ತಾಯಿಯ ಜೊತೆಯಲ್ಲಿ ಇದ್ದು ಶಿಕ್ಷಣವನ್ನು ಕಲಿಯುತ್ತಿದ್ದಳು. ಇಲ್ಲಿ ರಾಜಿಗೆ ಆಗಲಿ ಇಂದುವಿಗೆ ಆಗಲಿ ಬಾಲ್ಯದಲ್ಲೇ ಮದುವೆ ಆಗಿ ಹೋಗಿತ್ತು. ಇವರಿಗೆ ಮದುವೆಯೆನ್ನುವ ಪದವೇ ತಮ್ಮ ಬಾಳನ್ನು ಬೂದಿಯಾಗಿ ಮಾಡಿ ಹೋಗಿತ್ತು. ತಮ್ಮ ಬಾಳ ಬೆಟ್ಟದಲ್ಲಿ ನಾನ ರೀತಿಯ ಆಸೆ ಆಕಾಂಕ್ಷೆಯನ್ನು ಇಟ್ಟುಕೊಂಡು ಅದನ್ನು ತಲುಪುದಕ್ಕೆ ಆಗದೆ, ತಮ್ಮ ಸಂಪೂರ್ಣ ಬದುಕು ನರಳುವ ಸ್ಥಿತಿಗೆ ಬಂದಿತ್ತು. ಇದಕ್ಕಿದ್ದ ಹಾಗೆಯೇ ಅವರ ಜೀವನದಲ್ಲೂ ಒಂದು ಆಶಾಕಿರಣ ಉಂಟಾಯಿತು. ಎಂದು ಸಮಾಜದ ಮೇಲ್ನೋಟಕ್ಕೆ ಅನ್ನಿಸಿದರು, ಈ ಹೆಣ್ಣು ಮಕ್ಕಳ ಬದುಕಿನಲ್ಲಿ ಆಕಸ್ಮಿಕವಾಗಿ ಮತ್ತೊಂದು ಅವಕಾಶ ಬಂದಂತೆ ಎರಡನೇ ಬಾರಿ ಪುರುಷರ ಪ್ರವೇಶವಾಯಿತು. ಪುನರ್ವಿವಾಹ ಕಥೆಯಲ್ಲಿ ರಾಜಿಯ ಜೊತೆ ಬರುವ ವಿಧುರ 'ವಾಣಿಯ ಸಮಸ್ಯೆ'ಯ ಕತೆಯಲ್ಲಿ ಬರುವ ಇಂದುವಿನ ಜೀವನದಲ್ಲಿ ಪ್ರವೇಶ ಮಾಡಿದ ರತ್ನ, ಇವರಿಬ್ಬರಿಗೆ ಆಕಸ್ಮಿಕವಾಗಿ ಈ ಅವಕಾಶ ಬಂದರು ಅದನ್ನು ಇಬ್ಬರೂ ಯಾವ

ದೃಷ್ಟಿಕೋನವನ್ನು ಇಟ್ಟುಕೊಂಡು ಸನ್ನಿವೇಶವನ್ನು ಎದುರಿಸುತ್ತಾರೆ, ಎಂಬುದೇ ಮುಖ್ಯವಾಯಿತು. ಪುನರ್‌ವಿವಾಹ ಕಥೆಯಲಿ ಬರುವ ವಿಧುರ ಬಹಳ ಅಹಂಕಾರಿ. ಆತನಿಗೆ ಯಾವಾಗಲೂ [೨೧]"ನಾನು ಐಶ್ವರ್ಯವಂತ ಇನ್ನು ಮುವತ್ತೈದೇ ವರ್ಷ ನನ್ನನ್ನು ಮದುವೆಯಾದ್ರೆ ಅವಳಗೇನು ಕಷ್ಟ? ಏನೋ ಅವಳ ತಾಯಿ ಏನಾದರೂ ಅಂದಿರಬೇಕು; ಅದಕ್ಕೆ ಹಾಗಿದ್ದಾಳೆ[೨೧] ಹೀಗೆ ತನ್ನ ಕಲ್ಪನೆಯ ಕಾಲ್ಪನಿಕ ಲೋಕದಲ್ಲಿ ಈ ವಿಧುರ ಸಂಚರಿಸುತ್ತಾನೆ ಹೊರತು, ರಾಜಿಯ ದೃಷ್ಟಿಕೋನದಿಂದ ಒಮ್ಮೆಯು ಆತ ಆಲೋಚಿಸಲಾರ. ಏನಾದರು ಹಾಗೆ ಚಿಂತೆ ಕಾಡಿದರೆ. ನನ್ನನ್ನು ಮದುವೆಯಾಗಲು ಇಷ್ಟವಿಲ್ಲದೆ ಹಾಗೆ ಮಾಡುವುದಿಲ್ಲ ಎಂದು ತನ್ನನ್ನು ತಾನೇ ಸಂತೈಸಿಕೊಳ್ಳುತ್ತಾನೆ. [೨೨]"ನನ್ನನ್ನು ಮದುವೆಯಾದರೆ ಅವಳ ಸುಖಕ್ಕೆ ಕೊರತೆಯೇನು; ನಾನು ಐಶ್ವರ್ಯವಂತ, ಅವಳ ಯಾವ ಬಯಕೆಯನ್ನಾದರೂ ನನ್ನ ಐಶ್ವರ್ಯವು ಪೂರ್ತಿ ಮಾಡುವುದು. ಅವಳು ಹೀಗಿರುವಾಗ ಅವಳು ನನ್ನನ್ನು ತಿರಸ್ಕರಿಸ ಲಾರಳು. ಅವಳಿಗೆ ನಾಚಿಕೆ. ಅದಕ್ಕೆ ಅವಳು ಹಾಗೆ ಮಾಡುತ್ತಾಳೆ."[೨೨] ಎಂದು ಆ ವಿಧುರ ನಾನಾ ರೀತಿಯ ಕನಸು ಕಟ್ಟಿಕೊಂಡು ಇವುಗಳಿಂದಲೇ ತಾನು ಏನನ್ನು ಬೇಕಾದರೂ ಗೆಲ್ಲಬಲ್ಲೆ ಎಂದು ಗರ್ವದಿಂದ ಮೆರೆಯುತ್ತಿದ್ದ.

ವಾಣಿಯ ಸಮಸ್ಯೆಯಲ್ಲಿ ಬರುವ ಇಂದುವಿನ ಜೀವನದಲ್ಲಿ ರತ್ನ ಪ್ರವೇಶವಾಯಿತು. ಅಲ್ಲಿಯತನಕ ಇಂದುವಿನಲ್ಲಿ ಇದ್ದ ನೆಮ್ಮದಿ ಅಭಿಮಾನ ಶಾಂತಿ ಸುಖ ಇವುಗಳೆಲ್ಲ ಕೆಲವೇ ದಿನಗಳಲ್ಲಿ ಮಾಯವಾದವು. ಅದರ ಬದಲಿಗೆ ವಾಣಿರತ್ನರ ನವದಾಂಪತ್ಯವನ್ನು ನೋಡಿದಾಗ ಅವಳ ಮನಸ್ಸು ಕೊರಗುವುದಕ್ಕೆ ಪ್ರಾರಂಭವಾಯಿತು, ತನಗೋ ತನ್ನ ಜೀವನದಲ್ಲಿ ಯಾವುದೋ ಭಾವನೆಗಳ ಕೊರತೆ ಇದೆ ಎಂಬ ಅನುಭವವಾಗುತ್ತಿತ್ತು. ಇದೇ ಸನ್ನಿವೇಶದಲ್ಲಿ ರತ್ನ ಇಂದುವನ್ನು ತನ್ನವಳನ್ನಾಗಿ ಭಾವಿಸಲು ಪ್ರಾರಂಭಿಸಿದ. ತನ್ನ ಹೆಂಡತಿ ಹೀಗೆ ಇರಬೇಕು ಎಂದು ಆಲೋಚಿಸಿದ. [೨೩]"ನನ್ನ ವಾಣಿಯೂ ಹೀಗೆಯೇ ಕಾರ್ಯಕುಶಲೆ ಯಾಗಿದ್ದರೆ ಎಂದೆಂದು ಕೊಳ್ಳುವ ಬದಲು, ತಾನೆಂದೂ ನೋಡದ ಇಂದುವಿನ ರೂಪವನ್ನು ಕಲ್ಪಿಸ ತೊಡಗಿದ"[೨೩] ಈ ರೀತಿಯ ಸ್ವಾರ್ಥ ಮನೋಭಾವವೇ ಉಳ್ಳವನು ರತ್ನ.

ಇಂತಹ ಪರಿಸ್ಥಿತಿಯಲ್ಲಿಯೂ ಅವರು ತೆಗೆದುಕೊಳ್ಳುವ ನಿರ್ಧಾರ ಮಾತ್ರ ಗಂಭೀರವಾಗಿತ್ತು. ಕುತೂಹಲವು ಹುಟ್ಟಿಸುವಂತೆ ಇತ್ತು. ಪುನರ್ ವಿವಾಹದಲ್ಲಿ ಬರುವ ರಾಜಿ ಮೊದಲನೆಯವಳಾಗಿ ಕಾಣಿಸಿಕೊಳ್ಳುತ್ತಾಳೆ. ವಾಣಿಯ ಸಮಸ್ಯೆಯಲ್ಲಿ ಬರುವ ಇಂದು ತಾನು ವಾಸಿಸುವ ಸ್ಥಳವನ್ನೇ ಬದಲಾಯಿಸುವುದರ ಮೂಲಕ, ಪಲಾಯನವಾದಿ ಯಾಗುತ್ತಾಳೆ. ಈ ಸಂದರ್ಭವನ್ನು ನೋಡಿದಾಗ 'ಪುನರ್ ವಿವಾಹದ' ಕಥೆಯಲ್ಲಿ ಬರುವ ರಾಜಿ ಬಂಡಾಯ ಮನೋಭಾವವುಳ್ಳವಳು. ಹಾಗೆ ಕಾಣಿಸಿಕೊಳ್ಳುತ್ತಾಳೆ. ಮಹಿಳೆಯರು ಇನ್ನು ಪುರುಷರ ಅಧೀನತೆಯಲ್ಲಿಯೇ ಇದ್ದಂತಹ ಕಾಲ ಮಹಿಳೆ ಬಾಲ್ಯದಲ್ಲಿ ಮೊದಲು ತನ್ನ ತಂದೆಯ ಆಶ್ರಯವನ್ನು ಅವಲಂಬಿಸಿ ಆನಂತರ ಗೃಹಸ್ಥಾಶ್ರಮದಲ್ಲಿ ಗಂಡನ ನೆರವಿನಲ್ಲಿ ಇದ್ದು, ನಂತರ ವೃದ್ಧಾಪ್ಯದಲ್ಲಿ ಮಗನ ಆಶ್ರಯದಲ್ಲಿ ಅವಲಂಬಿತ ಜೀವನ ನಡೆಸುತ್ತಿದ್ದಳು. 'ಅಧೀನತೆಯೇ ತಮ್ಮ ಜೀವನದ ಗುರಿ ಎನ್ನುವಂತಹ ಕಾಲದಲ್ಲಿ 'ರಾಜಿ' ಎನ್ನುವ ಸ್ತ್ರೀ

---

[೨೧+೨೨+೨೩] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೪೩, ೧೪೩, ೧೦

ಅದರಲ್ಲೂ ಸಮಾಜದ ಅನೇಕ ಕಟ್ಟುಕಟ್ಟಳೆಯಲ್ಲಿ ಬಂಧಿತನಾಗಿರುವ ಬಾಲವಿಧವೆ. ತಾನಾಗಿಯೇ ತನ್ನನ್ನೇ ಹುಡುಕಿಬಂದ ಅವಕಾಶ ಎಂದು ತಬ್ಬಿಕೊಳ್ಳದೆ ಅವನನ್ನು ತಿರಸ್ಕರಿಸುವ ಮುಖಾಂತರವೇ ಸಮಾಜದಲ್ಲಿ ಒಂದು ದೊಡ್ಡ ಕ್ರಾಂತಿಯನ್ನೇ ನಿರ್ಮಾಣ ಮಾಡುತ್ತಾಳೆ. ಕಾಮದ ಮೋಹದ ಭಾವನೆಯನ್ನು ಆವರಿಸಿಕೊಂಡು ವಿವಾಹವಾಗಲು ಬಂದ ವಿಧುರನನ್ನು ರಾಜಿ ಸಮಾಜದಲ್ಲಿ ಒಂದು ಉತ್ತಮವಾದ ಸಾಮ್ರಾಜ್ಯದ ವೇದಿಕೆಯನ್ನು ನಿರ್ಮಾಣ ಮಾಡಬೇಕು ಎಂದು ಪುನರ್ ವಿವಾಹವಾಗಲು ಬಂದ ವಿಧುರನನ್ನು ಒಂದು ಉತ್ತಮ ಉದ್ದೇಶಕ್ಕಾಗಿ ಆತನನ್ನು ತಿರಸ್ಕರಿಸುತ್ತಾಳೆ. ಈ ಸಂದರ್ಭದಲ್ಲಿ ಅವಳು ಹೇಳುವ ಮಾತುಗಳನ್ನು ಗಮನಿಸಬಹುದಲ್ಲ. [೨೪]"ನಿಮ್ಮಂತಹ ಕಾಮುಕರ ಮೋಹವನ್ನು ಪ್ರೇಮವೆಂದು ತಿಳಿದು ಮದುವೆಯಾಗುವ ಹುಚ್ಚಿನಾನಲ್ಲ ಎಂದಿನವರೆಗೆ ನನಗೆ ಜೀವವಿದೆಯೋ ಅಂದಿನವರೆಗೆ ನಾನು ನನ್ನಂತಯೇ ಸಮಾಜದ ಅತ್ಯಾಚಾರಕ ಹೋಮಕುಂಡದಲ್ಲಿ ಬೇಯುತ್ತಿರುವ ಸಹೋದರಿಯರ ಉದ್ಧಾರದ ಸಲುವಾಗಿ ಕೆಲಸ ಮಾಡುತ್ತೇನೆ. ನಿಮ್ಮಂತಹ ಕಾಮುಕರ ಮೋಹವನ್ನು ಮೆಚ್ಚಿ ನಿಮ್ಮ ತುಚ್ಚವಾದ ಐಶ್ವರ್ಯಕ್ಕೆ, ಅಧಿಕಾರಿಣಿಯಾಗುವ ಆಸೆ ನನಗಿಲ್ಲ, ನಿಮ್ಮಂತಹರ ಮೋಹಕ್ಕೆ ಬಲಿಯಾಗಿ ಬುದ್ದಿ ಬರುವ ಮೊದಲೇ ವಿಧವೆಯರಾದ ನನ್ನ ಲಕ್ಷೋಪಲಕ್ಷ ಸಹೋದರಿಯರು ಎಂದಿನವರೆಗೆ ಸಮಾಜದ ಅನ್ಯಾಯಕ್ಕೆ ತುತ್ತಾಗಿರುವರೊ, ಅಂದಿನ ವರೆಗೂ ನಮ್ಮ ಹಿಂದು ಸಮಾಜ ಉನ್ನತಿ ಪಡೆಯಲಾರದು"[೨೪] ಎಂದು ಹೇಳುವ ರಾಜಿಯು ಸಮಾಜದ ಬಂಡಾಯಗಾರ್ತಿಯಾಗಿ ಕಾಣಿಸಿಕೊಳ್ಳುತ್ತಾಳೆ.

ಆದರೆ ಇಂದು ಮಾತ್ರ ರತ್ನನ ಸ್ವಾರ್ಥದ ಭಾವನೆಗಳಿಗೆ ಎಲ್ಲಿ ಬಲಿಯಾಗುತ್ತೀನೋ ಎಂದು ಹುಟ್ಟಿ ಬೆಳೆದ ಸದಾ ಕಿರುಕುಳ ಕೊಡುತ್ತಿದ್ದ ಹಿಂಸೆಯಲ್ಲೇ ಬದುಕನ್ನು ನಡೆಸುತ್ತಿದ್ದ, ತನ್ನ ಸಹೋದರರಾದ ಮನೆಗೆ ಹೋಗುವ ಮುನ್ನ ಮೊದಲು ರತ್ನ ಬಗೆಗೆ ಇದ್ದ ಭಾವನೆಗಳನ್ನು ಅವನು ಬರೆದ ಕಾಗದವನ್ನು ಸುಟ್ಟು ಹೇಗೆ ಬೂದಿ ಮಾಡುತ್ತಾಳೋ, ಹಾಗೆಯೇ ಇಂದು ತನ್ನ ಮನದ ಭಾವನೆಗಳನ್ನು ಬೆಂಕಿಗೆ ಆಹುತಿ ಕೊಟ್ಟಳು ಇಲ್ಲಿ [೨೫]"ಇಂದು ಸ್ವಾಭಾವತಃ ಪಾಪಬೀರು, ಸಮಾಜದ ಕಟ್ಟು–ಕಟ್ಟಳೆಗಳನ್ನೇ ದೇವರ ನಿಯಮಗಳು ಎಂದು ತಿಳಿದು ಬೆಳೆದಳು"[೨೫]

ಈ ಇಬ್ಬರು ಬಾಲವಿಧವೆಯರನ್ನು ಗಮನಿಸಿದಾಗ ಸಮಾಜದ ಸಂಪ್ರದಾಯದ ಆಚಾರ ವಿಚಾರಕ್ಕೆ ಬಲಿಯಾದ ಹೆಣ್ಣುಗಳು ಇವರು. ಈ ರೀತಿ ಸಮಾಜದಲ್ಲಿ ಇಂತಹ ಬಾಲವಿಧವೆಯರು ಹೆಚ್ಚುತ್ತಾ ಹೋದಂತೆ ಈ ವಿಧವೆಯರು ನಿರ್ಲಜ್ಜತನದ ಜೀವನವನ್ನು ಪ್ರಾರಂಭಿಸುತ್ತಾರೆ. ಇದರಿಂದ ಸಮಾಜದಲ್ಲಿ ದಿನದಿಂದ ದಿನಕ್ಕೆ ವೇಶ್ಯೆಯರ ಸಂಖ್ಯೆಯು ಹೆಚ್ಚಾಗಿ ಹೋಗುತ್ತದೆ. ಸಮಾಜದಲ್ಲಿ ಎಷ್ಟು ಬಾಲ ಹತ್ಯೆ, ಭ್ರೂಣಹತ್ಯೆಗಳು ಗೋಚರ ವಾಗುತ್ತದೆ. ಹೀಗೆ ಸಮಾಜದಲ್ಲಿ ನಾನಾ ರೀತಿಯ ಸಮಸ್ಯೆಗಳು ಉದ್ಭವವಾಗಿ ಸಮೃದ್ದಿಯ ಸಮಾಜದ ಒಂದು ಉತ್ತಮ ವಾತವರಣವನ್ನೇ ಹಾಳುಮಾಡುತ್ತದೆ. ಇದಕ್ಕೆಲ್ಲ ಕಾರಣ ನಿಮ್ಮ ಶಾಸ್ತ್ರ, ಶಾಸ್ತ್ರ, ಶಾಸ್ತ್ರ ಎಂದು ಬಡಿದುಕೊಂಡು, ಜಾತಿಯನ್ನು ಮುಂದೆ ತಂದ, ಜಾತಿ ಧರ್ಮ ಎಂದೂ ಹಾಳಾಗಬಾರದು ಎಂದು, ಹೆದರಿಸಿ 'ಎಳೆಯ ಮಕ್ಕಳನ್ನು ಮುದುಕರ ಕೊರಳಿಗೆ

---

[೨೪+೨೫] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೫೨, ೧೨

ಕಟ್ಟುವ ಸಮಾಜದ ತಂದೆ, ತಾಯಿಗಳೇ? ನೀವು ಮಾಡುತ್ತಿರುವುದು ಎಷ್ಟರ ಮಟಿಗೆ ಸರಿ ಎಂದು ಆಲೋಚಿಸಿರಿ. ಎಂದು ಸಮಾಜಕ್ಕೆ ಒಂದು ಎಚ್ಚರಿಕೆಯ ಘಂಟೆಯನ್ನು ಗೌರಮ್ಮನವರು ಈ ಕತೆಯ ಮುಖಾಂತರ ನೀಡುತ್ತಾರೆ.

[೨೬]"ಗಂಡನು ಸತ್ತ ಒಡನೆಯೇ ಹೆಂಡತಿಯ ತಲೆಯು ಮುಡಿಯಬೇಕು ಇಲ್ಲದಿದ್ದರೆ ನೀತಿ ಬಾಹೀರವಾಗುವಂತೆ, ವಿಧುರರು ಮುದುಕರಾದರೂ ಅವರು ಪುನರ್ವಿವಾಹ ಮಾಡಿಕೊಳ್ಳಬಹುದು. ಆದರೆ ಹೆಣ್ಣು ಬಾಲವಿಧವೆಯಾದರೂ ಅವಳಿಗೆ ಪುನರ್ವಿವಾಹ ನಿಷೇದ"[೨೬] ಎಂದು ಕತೆಗಾರ್ತಿ ರಾಜಿಯ ಮುಖಾಂತರ ಈ ಅನಿಷ್ಟ ಪದ್ಧತಿಯನ್ನು ಖಂಡಿಸಿದ್ದಾರೆ. ಇದೇ ರೀತಿ ಶಾಸ್ತ್ರ ಧರ್ಮ–ನೀತಿ ಎಂದು ಹೇಳುತ್ತಾ ಆ ಬಾಲ ವಿಧವೆಯರ ಮೇಲೆ ಎಷ್ಟು ಅತ್ಯಾಚಾರ ನಡೆದಿದೆ ಹಾಗೂ ನಡೆಯುತ್ತಿದೆ ಎಂದು ತಿಳಿಯಬೇಕು, ಇದರ ಪರಿಣಾಮ ಹಿಂದೂ ಸಮಾಜದ ಅವನತಿ, ಇಂತಹ ಕಠೋರವಾದ, ಕಠಿಣವಾದ, ಮನುಷ್ಯನ ಜೀವನವನ್ನೇ ತಿನ್ನುವ ಧರ್ಮ ಯಾರಿಗೆತಾನೆ ಬೇಕು ಎಂದು ಎಲ್ಲರೂ ಈ ಹಿಂದೂ ಧರ್ಮವನ್ನು ತ್ಯಜಿಸುವ ಮೂಲಕ ಪರಧರ್ಮಕ್ಕೆ ಸೇರುವ ಸ್ತ್ರೀಯರನ್ನು ಕಾಣುತ್ತೇವೆ. ಹೀಗೆ ತಮ್ಮ ಧರ್ಮವನ್ನು ತಾವೇ ಅಧೋಗತಿಗೆ ತಂದುಕೊಳ್ಳುವ ಅಪಾಯದ ಅಂಚಿನಲ್ಲಿ ಇದ್ದೇವೆ.

ಇಲ್ಲಿ ಗೌರಮ್ಮನವರು ಸಮಾಜದ ಸಮಸ್ಯೆಯನ್ನು ತಿಳಿಸಿಯೂ, ಅದರ ಜೊತೆಗೆ. ಸಮಸ್ಯೆಗೆ ಪೂರಕ ಪರಿಹಾರವನ್ನು ಸಹಾ ಒದಗಿಸುತ್ತಾರೆ. ರಾಜಿಯ ಮಾತನ್ನು ಕೇಳುವ ವಿಧುರನ ಹೃದಯದಲ್ಲಿ ಬೆಂಕಿಯ ಜ್ವಾಲೆ ಸುಡಲು ಪ್ರಾರಂಭಿಸಿ ಅವನ ಅಂತರಾಳದಲ್ಲಿ ಕೊರೆಯ ತೊಡಗುತ್ತದೆ ಅವನು ಹೇಳುವ ಮಾತನ್ನು ಗಮನಿಸಿದರೆ [೨೭]"ಆ ಬಾಲ ವಿಧವೆಯ ಮನಸ್ಸಿನ ಯಾತನೆಯು ಈ ರೀತಿಯ ಮಾತುಗಳಿಂದ ಹೊರ ಹೊರಟು, ನನಗೆ ಪುನರ್ಜನ್ಮವಿತ್ತವು. ನನ್ನ ಮೋಹವನ್ನು ಸುಟ್ಟವು. ನನ್ನ ಕಣ್ಣುಗಳನ್ನು ತೆರೆದವು"[೨೭] ಎಂದು ಹೇಳುವುದರ ಮುಖಾಂತರ ವಿಧುರನ ಪರಿವರ್ತನೆ ಮಾಡುವುದನ್ನು ನೋಡಬಹುದು. ಆ ವಿಧುರನ ಮುಖಾಂತರವೇ ನನ್ನಲ್ಲಿ ಇರುವ ಅಲ್ಪ ಜೀವನವನ್ನು ವಿಧವೆಯ ಉದ್ಧಾರಕ್ಕಾಗಿಯೋ ಉಪಯೋಗಿಸುತ್ತೇನೆ. ಎಂದು ಹೇಳುವುದರ ಮುಖಾಂತರ ಸಮಾಜದ ಸಮಸ್ಯೆಗೆ ಪರಿಹಾರವನ್ನು ಒದಗಿಸುತ್ತಾರೆ.

ಇನ್ನು ಬಾಲವಿಧವೆಯರು ಮೊದಲನೆಯ ವಿವಾಹದಲ್ಲೇ ಸುಖವಾಗಿ ಇರಲು ಸಾಧ್ಯವಾಗಲಿಲ್ಲ. ಅವರಿಗೆ ಪುನರ್ ವಿವಾಹದ ಬಗ್ಗೆ ಒಲವಿದ್ದರೂ ಯಾರು ವಿವಾಹ ಆಗಲಿಲ್ಲ. ಆಕಸ್ಮಿಕವಾಗಿ ಅವರಿಗೆ 'ಪುನರ್ ವಿವಾಹ' ಆದರೂ ದುರಂತ ಬದುಕು ಮಹಿಳೆಯ ಪಾಲಿಗೆ ಮೀಸಲಾಗಿತ್ತು. ಇಲ್ಲಿ ಲೇಖಕಿ ಆದರ್ಶದ ಗುರಿಯನ್ನು ಇಟ್ಟುಕೊಂಡು ನೋಡದೆ ಸಮಾಜದ ವಸ್ತು ನಿಷ್ಟವಾದ ನೆಲೆಯಿಂದ ನೋಡಿದ್ದಾರೆಂದು ಹೇಳಬಹುದು.

ಇಲ್ಲಿ ಸಂತೃಪ್ತಿಯ ಬದುಕು ಸಮಾಜದ ಎಲ್ಲೆಡೆ ಕಾಣಿಸಿಕೊಳ್ಳಬೇಕು ಎಂಬುದು ಲೇಖಕಿಯ ಆಶಯ. ಆದರೆ ಈ ಮದುವೆ ಎಂಬ ಬಂಧನದ ಸಂಕೋಲೆಯಲ್ಲಿ ಸಿಕ್ಕಿ ಬಂಧಿತಳನ್ನಾಗಿ ಮಾಡಿಕೊಂಡು ಒಂದು ಮದುವೆಯಿಂದಲೇ ಇಷ್ಟೆಲ್ಲಾ ಪರಿತಪಿಸುತ್ತಿರುವ ಈ

---

[೨೬+೨೭] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೫೩, ೧೫೪

ಬಾಲ ವಿಧವೆಯರು, ಮತ್ತೊಂದು ವಿವಾಹದಿಂದ ಸಂತೃಪ್ತಿಯ ಬದುಕನ್ನು ನಿರ್ಮಿಸಿಕೊಳ್ಳಲು ಸಾಧ್ಯವೇ? ಎಂದು ಪ್ರಶ್ನಿಸುವುದರ ಮೂಲಕ ಆ ಪ್ರಶ್ನೆಗೆ ಕತೆಗಾರ್ತಿಯೇ ಉತ್ತರವನ್ನು ನೀಡುತ್ತಾರೆ. ಇಂತಹ ದುಃಸ್ಥಿತಿಯಲ್ಲಿ ಇರುವ ಸ್ತ್ರೀಯರನ್ನು ವಿವಾಹವಾಗಲು ಮಾನವೀಯ ಅಂತಹಕರಣದ ನೆಲೆಯಲ್ಲಿ ಯಾರು ಮುಂದೆ ಬರುತ್ತಾರೆ? ಇಂದಿನ ಯುವಕರೇ ಮುಂದೆ ಬರಬೇಕು ಒಂದು ಉತ್ತಮವಾದ ವ್ಯವಸ್ಥಿತ ಸಮಾಜವನ್ನು ಸೃಷ್ಟಿ ಮಾಡಬೇಕು. ಎಂಬುದೇ ಗೌರಮ್ಮನವರ ಆಶಯ ಹಾಗೂ ಕಳಕಳಿ,

'ಪರಾಧಿ ಯಾರು?' ಈ ಕತೆಯಲ್ಲಿ ಧರ್ಮರಕ್ಷಕನೊಬ್ಬನಿಂದ ಅತ್ಯಾಚಾರಕ್ಕೀಡಾದ ಒಂದು ಹೆಣ್ಣಿನ ದುರಂತ ಕತೆ. ಕನ್ನಡ ಪಂಡಿತರ ಮಗಳು ಪಾರ್ವತಿ ಮದುವೆಯಾದ ವರ್ಷದಲ್ಲೇ ಗಂಡನನ್ನು, ತಂದೆಯನ್ನು ಕಳೆದುಕೊಂಡು ನತದೃಷ್ಟೆ. ಇಲ್ಲಿ ಪಾರ್ವತಿ ಹಾಗೂ ಮಗು ಅನಾಥವಾಗಿರುವುದನ್ನು ನೋಡುತ್ತೇವೆ. ಮಗುವಿನ ಆಸರೆಗೆಂದು ಪಾರ್ವತಿ ನಾಗೇಶರಾಯರ ಮನೆಯಲ್ಲಿ ಅಡುಗೆ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ. ಧರ್ಮರಕ್ಷಕ ನಾಗೇಶರಾಯರು ಪಾರ್ವತಿ ಮೇಲೆ ಅತ್ಯಾಚಾರವೆಸಗಿದರೂ, ತನ್ನ ಮಗುವಿಗಾಗಿ ಎಲ್ಲವನ್ನು ಸಹಿಸಿಕೊಂಡಿರುತ್ತಾಳೆ. ಆದರೆ ನಾಗೇಶರಾಯರ ಅತ್ಯಾಚಾರದ ಪ್ರತಿಫಲ ಪಾರ್ವತಿಯ ದೇಹದಲ್ಲಿ ಕಾಣಿಸುತ್ತದೆ. ಆಗ ಧರ್ಮರಕ್ಷಕ ನಾಗೇಶರಾಯರು, ಎಲ್ಲಿ ಸಮಾಜದಲ್ಲಿ ತಮ್ಮ ಹೆಸರಿಗೆ ಕಳಂಕ ಉಂಟಾಗುತ್ತದೆ ಎಂದು ತಾನು ಮಾಡಿದ ತಪ್ಪನ್ನು ಪಾರ್ವತಿಯ ಮೇಲೆ ಹೊರಿಸಿ, ಬಹಿಷ್ಕಾರ ಹಾಕಿಸಿದ. ಹೆಸರಿಗೆ ಮಾತ್ರ ಧರ್ಮರಕ್ಷಕ, ಆದರೆ ಮಾಡುವ ಕೆಲಸವೆಲ್ಲ ಅಧರ್ಮದ್ದು. ಆದರೆ ಈ ಯಾವ ವಿಚಾರವನ್ನು ಇಲ್ಲಿ ಸಮಾಜ ತನ್ನ ತೆಕ್ಕೆಗೆ ತೆಗೆದುಕೊಳ್ಳುವುದಿಲ್ಲ.

ಅವಮಾನ ಸಹಿಸದ ಪಾರ್ವತಿ ಮಗುವಿನ ಸಮೇತ ಬಾವಿಗೆಬಿದ್ದು ಆತ್ಮ ಹತ್ಯೆಗೆ ಪ್ರಯತ್ನಿಸುತ್ತಿರುವಾಗಲೇ ಗೈಬಿ ಎಂಬುವರಿಂದ ರಕ್ಷಣೆ ಪಡಯುತ್ತಾಳೆ. ಅಲ್ಲದೆ ಅವಳ ಸ್ಥಿತಿ ಎಷ್ಟು ಅಸಹಾಯಕ ಎಂದರೆ ಆ ಸನ್ನಿವೇಶದಲ್ಲಿ [೨೮]"ಇಲ್ಲೇ ಇದ್ದು ಬಿಡುತ್ತವೆ. ಈ ಮಗುವಿನ ಸಲುವಾಗಿ ನೀವಾದರೂ ಆಶ್ರಯ ಕೊಡಿ"[೨೮] ಎಂದು ಆ ಇಸ್ಲಾಂ ಧರ್ಮೀಯರನ್ನು ಕೇಳುವ ಸ್ಥಿತಿಗಿ ಇಳಿಯುತ್ತಾಳೆ. ಇಷ್ಟೆಲ್ಲಾ ವಿಚಾರಗಳನ್ನು ತನ್ನ ಅಣ್ಣನಿಗೆ ಪಾರ್ವತಿಯ ಗೆಳತಿ ಉನ್ನೀಸಾ ಪತ್ರದ ಮೂಲಕ ಬರೆದು ತಿಳಿಸಿ [೨೯]"ಶಾಸ್ತ್ರೋಕ್ತವಾಗಿ ನಮ್ಮ ಜಾತಿಗೆ ಸೇರಿಸಿ ಅವಳ ಮುಂದಿನ ಜೀವನಕ್ಕೆ ದಾರಿ ಮಾಡಬಹುದೆಂಬುದಾಗಿ"[೨೯] ತಿಳಿಸಿರುತ್ತಾಳೆ.

ಇಲ್ಲಿ ಜಾತಿಯಿಂದ ಉನ್ನೀಸ ತುರುಕಳಾದರು ಪಾರ್ವತಿಯ ಮೇಲೆ ಎಂತಹ ಮಾನವೀಯ ಅಂತಃಕರಣವನ್ನು ಇಟ್ಟುಕೊಂಡಿದ್ದಾಳೆ ಎಂದು ತಿಳಿಯುತ್ತದೆ. ಅದಕ್ಕೆ ಲಕ್ಷ್ಮಿಯು ನಲಿನಾಗೆ ಪತ್ರದ ಮುಖಾಂತರ ಈ ರೀತಿ ಹೇಳುತ್ತಾಳೆ.

ನಮ್ಮ ಜಾತಿ ನೀತಿ, ಸಮಾಜವೇ ಉತ್ತಮವೆಂದು ಹೇಳಿಕೊಂಡು ಎಷ್ಟು ಸಲ ಉನ್ನೀಸಳೊಡನೆ ಜಗಳವಾಡಿಲ್ಲ ನಾವು ಮುಸಲ್ಮಾನ ಜಾತಿ ಎಂದು ತಿರಸ್ಕರಿಸಿಲ್ಲ. ಅಂತಹ ಉನ್ನೀಸ ಎಂತಹ ಹೃದಯವಂತಿಕೆಯನ್ನು ತೋರಿಸುತ್ತಾಳೆ. ಗೊತ್ತೇ? ನಮ್ಮವರ ಎಲ್ಲ ಮನೆಗಳಿದ್ದು ಪಾರ್ವತಿಗೆ ಯಾರು ಬಾಗಿಲು ತೆಗೆಯಲಿಲ್ಲ. ನಮ್ಮ ಹೃದಯದಲ್ಲಿ ಜಾತಿಗೆಲ್ಲಿದೆ,

---

[೨೮+೨೯] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೮೩.

ಮನುಷ್ಯ, ವ್ಯಕ್ತಿತ್ವ, ದಯೆ, ಪ್ರೀತಿ ವಿಶ್ವಾಸ ಕರುಣೆ ಇಲ್ಲಿ ಯಾವುದಕ್ಕೆ ಎಡೆಯಿಲ್ಲ. ಆದರೂ ಜಾತಿಯ ಎಲ್ಲ ನೀತಿ ನಿಯಮ ಹೆಂಗಸರಿಗೆ ಮಾತ್ರ ಇದು ಸಮಾಜದಲ್ಲಿ ನೆಲೆಯೂರಿರುವ ಜಾತಿಯ ದೊಡ್ಡತನ. ನಾವು ಉತ್ತಮರು ಅತ್ಯುತ್ತಮ ಪಂಗಡದವರು ಎಂಬ ಭ್ರಮೆಯಲ್ಲಿ ಇದ್ದ ನಮಗೆ ನಮ್ಮ ತಿಳಿಗೇಡಿತನದಿಂದ ಪಾರ್ವತಿಯ ಮತ್ತು ಅವಳ ಮಗುವಿಗೆ ಎಂತಹ ದುರಂತದ ದಾರಿಯನ್ನು ತೋರಿಸಿದೆವು ನೋಡು ನಲಿನ.

ಆದರೆ ದಾರಿಕಾಣದೆ ಕಂಗಾಲಾಗಿದ್ದ ಪಾರ್ವತಿಗೆ ಆಸರೆಯಾಗಿ ಊರುಗೋಲಾಗಿ ಕೈ ಹಿಡಿದು ಆಶ್ರಯವಿತ್ತಳು ಯಾರು ಗೊತ್ತೇ ಉನ್ನೀಸ! ಅಂದು ನಾವು ನಕ್ಕು, ತಿರಸ್ಕರಿಸಿ, ಚೇಡಿಸುತ್ತಿದ್ದ, ಉನ್ನೀಸ, ಈಗ ಹೇಳು ನಲಿನಾ ಉತ್ತಮರು, ಉತ್ತಮಕುಲದವರು ಯಾರೆಂದು? ಲಕ್ಷ್ಮಿನಲಿನಾ ನನ್ನು ಕೇಳುವುದರ ಮೂಲಕ ಸ್ತ್ರೀ ಸಂವೇದನೆಯ ಸ್ವರೂಪವನ್ನು ಇಲ್ಲಿ ಚರ್ಚಿಸಿದ್ದಾರೆ.

ಈಗ ಊರಲ್ಲಿರುವವರೆಲ್ಲ ಪಾರ್ವತಿಯನ್ನು ಮುಸಲ್ಮಾನರ ಜಾತಿಗೆ ಸೇರುವಳೆಂದು ನಮಗೆ ಮೊದಲೇ ಗೊತ್ತಿತ್ತು. ಹೀಗೆ ಆಗುತ್ತದೆಂದು ಹೇಳಿವರಿಗೆ ಅವಳಿಗೆ ಹಾಗೆ ಆಗದಂತೆ ನೀವೇಕೆ ಮೊದಲು ಪ್ರಯತ್ನ ಮಾಡಲಿಲ್ಲ ಎಂದದಕ್ಕೆ ನನ್ನ ಒಡನೆಯೇ ನೆರೆಕೆರೆಯವರು ಮಾತಾನಾಡುತ್ತಿಲ್ಲ.

ಹಾಗಾದರೆ ನೋಡಿ ಲಕ್ಷ್ಮಿಗೆ ಎಂತಹ ಆಲೋಚನೆ ಶಕ್ತಿ ಇದೆ. ಎಷ್ಟು ಸಂವೇದನಾ ಶೀಲತೆಯಿಂದ ಒಂದು ಹೆಣ್ಣಿನ ಬಗ್ಗೆ ಮತ್ತೊಂದು ಹೆಣ್ಣು ಎಷ್ಟು ಮನೋಜ್ಞವಾಗಿ ಚಿಂತಿಸುವಳು ಎಂದು ತೋರಿಸುತ್ತದೆ.

[೩೦]"ಹಾಗಾದರೆ ಅಪರಾಧಿ ಯಾರು? ಪರ್ವತಿಯಾ? ರಜಿಯಾ ಆಗುವುದಕ್ಕೆ ಹೊಣೆ ಯಾರು? ಅವಳೇ ರಾಯರೇ ಅಥವಾ ನಮ್ಮ ಕ್ರೂರ ಕಠೋರ ಸಮಾಜವೇ? ಯಾರಾದರೇನು? ಅದುದ್ದಾಗಿ ಬಿಟ್ಟಿತು"[೩೦] ಎಂದು ಹೇಳುವುದರ ಮುಖಾಂತರ ಪಾರ್ವತಿಯಾಗಿ ಅವಳು ಸುಖದಲ್ಲಿ ಇರಲಿಲ್ಲ. ರಜಿಯಾ ಆಗಿಯಾದರು ಅವಳ ಜೀವನವು ಸುಖಮಯವಾಗಲೆಂದು ದೇವರಲ್ಲಿ ಎಂದು ಹೇಳಿ ತನ್ನ ಗೆಳತಿ ನಲಿನಿಗೆ ಪತ್ರದ ಸಂದೇಶವನ್ನು ಕಳುಹಿಸುವುದರ ಮೂಲಕ ಲಕ್ಷ್ಮಿ ಮಾನವೀಯತೆಯನ್ನು ತೋರಿದ ಹೆಣ್ಣಿನ ಎಲ್ಲ ಭಾವನೆಯನ್ನು ಅರ್ಥೈಸಿಕೊಂಡಿರುವ ಈ ಕತೆಯ ಅತ್ಯುತ್ತಮ ಸ್ತ್ರೀಯಾಗಿ ಕಾಣಿಸಿ ಕೊಳ್ಳುತ್ತಾಳೆ.

ಎಲ್ಲಕ್ಕಿಂತ ಮಿಗಿಲು ಮಾನವ ಧರ್ಮ, ಮನುಷ್ಯ ಜಾತಿ, ವ್ಯಕ್ತಿತ್ವವೇ ಅತ್ಯುತ್ತಮ ಕುಲ ಎಂದು ನಿರ್ಧರಿಸಿರುವ, ಲಕ್ಷ್ಮಿಯನ್ನು ಅದರ ಸಂದೇಶವನ್ನು ಹೇಳಲು ಹೋಗಿದ್ದಕ್ಕೆ ಲಕ್ಷ್ಮಿಯನ್ನೆ ನೆರೆಹೊರೆಯವರು ತಿರಸ್ಕರಿಸಿದರು. ಅದಕ್ಕೆ ಎದೆಗೊಂದದೆ ಇರುವ ಲಕ್ಷ್ಮಿಯ ಪಾತ್ರ ಹೀಗೆಂದರೆ ಸ್ತ್ರೀಯ ಅಸಹಾಯಕತೆಯ ನಡುವೆ. ಮತ್ತೊಬ್ಬ ಸ್ತ್ರೀಯು ಸಂವೇದನೆಯ ಸ್ವಾವಲಂಬನೆಯನ್ನು ಸಾಧಿಸುತ್ತಿರುವುದನ್ನು ನೋಡುತ್ತೇವೆ.

---

[೩೦] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೮೩.

ಈ ಎಲ್ಲಾ ಘಟನೆಗಳು ಮುಗಿದ ಬಳಿಕ ಸಮಾಜದ ಪ್ರತಿಕ್ರಿಯೆ, ಮನುಷ್ಯ ಮಾನವೀಯತೆಯ ಮೇಲೆ ಅಲ್ಲ. ಅಧರ್ಮ ಜಾತಿಯನ್ನು ಕಟ್ಟಿ ಬೆಳೆಸಿ ಉಳಿಸುವುದರ ಮೇಲೆ. ನಡೆಯುವ ಸಭೆಯನ್ನು ನೋಡಬಹುದು. ಹಿಂದೂ ಮಹಿಳೆಯೊಬ್ಬಳು. ಮುಸಲ್ಮಾನ ಧರ್ಮ ಸ್ವೀಕರಿಸಿದರೆ. ಹಿಂದುಗಳಿಗೆಲ್ಲ ಬಹಳ ವಿಷಾದವನ್ನುಂಟು ಮಾಡಿದೆ. ಇನ್ನು ಮುಂದೆ ಹೀಗೆ ಆಗಬಾರದು ಎಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆಯಲ್ಲಿ ಹಿಂದೂ ಧರ್ಮರಕ್ಷಣೆ ಮಾಡಬೇಕು ಎಂದು ತೀರ್ಮಾನವಾಯಿತು. ಹೊಸತು, ಹಿಂದೂ ಜನಗಳ ರಕ್ಷಣೆ ಎಂದೂ ಅಲ್ಲ. ಇದು ಗೌರಮ್ಮನವರು ಸಮಾಜದಲ್ಲಿ ಪ್ರತಿಯೊಬ್ಬರು ಸಮಾನತೆಗಗಿ ನಡೆಸುತ್ತಿರುವ ಹೋರಾಟಕ್ಕಾಗಿ ಕುವೆಂಪು ಹೇಳಿದ ಸಂದೇಶದ ಪ್ರಕಾರ 'ಓ ಬನ್ನಿ ಸಹೋದರರೇ ವಿಶ್ವಪಥಕ್ಕೆ' ಎಂದು ಎಲ್ಲರೂ ಒಂದಾಗುವ ಕರೆಯನ್ನು ಗೌರಮ್ಮ ನೀಡುವುದರ ಮುಖಾಂತರ ಹಿಂದೂ ಧರ್ಮ ಯಾವ ರೀತಿಯಿಂದಲೂ ಹೆಚ್ಚಲ್ಲ ಮುಸ್ಲಿಂ ಧರ್ಮ ಯಾವುದಕ್ಕಿಂತಲೂ ಕಡಿಮೆಯಿಲ್ಲ. ಎಂದು ಹೇಳುವುದರ ಮುಖಾಂತರ ಸರ್ವಧರ್ಮವನ್ನು ಗೌರಮ್ಮನವರು ಗೌರವಿಸುತ್ತಿರುವುದು ತಿಳಿಯುತ್ತದೆ.

ಗಾಂಧೀಜಿಯವರ ಹಿಂದೂ ಮುಸ್ಲಿಂ ಧರ್ಮದ ಸಮ್ಮೇಳನವು ಸಹ ಈ ಕತೆಯ ಒಂದು ಅಂಶವಾಗಿದೆ. ಉನ್ನೀಸಾ ತನ್ನ ಅಣ್ಣನಿಗೆ ಬರೆಯುವ ಪತ್ರದಲ್ಲಿ ಆದ ಪಾರ್ವತಿಯ ಕಥೆಯನ್ನು ನಕಲಿಗೂ ಸಂಪನ್ನಳಾದ ನಾಗೇಶರಾಯರ ನೀಚತನದ ಬಯಲು ರೂಪವನ್ನು ಮೇಲ್ವರ್ಗದ ಪಾರ್ವತಿಯ ಸ್ಥಿತಿಗತಿಯನ್ನು ತಿಳಿಸಿದ ಸಮಾಜದಲ್ಲಿ ಅಬಲೆಯರಿಗೆ ಎಷ್ಟು ರಕ್ಷಣೆ ಇದೆ. ಎಂಬುದನ್ನು ತಿಳಿಯಬಹುದು.

[೩೧]"ಅನಾಥ ಅಬಲೆಯರು ಅತ್ಯಾಚಾರಿಯ ಅತ್ಯಾಚಾರಕ್ಕೆ ಪ್ರಾಯಶ್ಚಿತವನ್ನು ಮಾಡಿಕೊಳ್ಳುವುದೇ ಅವರ ಜಾತಿಯ ನೀತಿಯಾದರೆ ನಮಗೆ ಆ ಜಾತಿಯಲ್ಲಿ ಜನ ಕೊಡದಿರುವುದಕ್ಕೆ ದೇವರನ್ನು ಎಷ್ಟು ವಂದಿಸಿದರೂ ಸ್ವಲ್ಪವೇ"[೩೧] ಎಂದು ಹೇಳಿ ಹೆಣ್ಣಿಗೆ ಹೆಣ್ಣೆ ಅಭಯ ಹಸ್ತವನ್ನು ನೀಡುವ ಉನ್ನೀಸಾಳನ್ನು ನೋಡುತ್ತೇವೆ.

ಇನ್ನು ಪಾರ್ವತಿಯ ನೆರೆಹೊರೆಯವರು ತಮ್ಮ ಮನೆಯ ಕೆಲಸ ಕಾರ್ಯಗಳು ಮಾಡುವುದಕ್ಕೆ ಸಮಯ ಇಲ್ಲದವರು, ಜಾತಿಯವರ ಇಲ್ಲಸಲ್ಲದ ವಿಚಾರವನ್ನು ಪ್ರಚಾರ ಮಾಡುವುದಕ್ಕೆ ಹೀಗೆ ಆತುರವಾಗಿ ಇರುತ್ತಾರೆ ಎನ್ನುವುದಕ್ಕೆ ಸೀತಮ್ಮನವರಿಗೆ ಬರೆದ ಪತ್ರವೇ ಸಾಕ್ಷಿ. ಅಷ್ಟೇ ಅಲ್ಲದೆ ಜಾತಿಕೆಟ್ಟು ತುರುಕರ ಜಾತಿಗೆ ಸೇರಿದ ಪಾರ್ವತಿಯನ್ನು ನಿಂದಿಸಿದಲ್ಲದೆ. ಅವಳ ಪಕ್ಷವಹಿಸಿ ಮಾತನಾಡಿದ ಲಕ್ಷ್ಮಿಯನ್ನು ಹಂಗಿಸುವುದನ್ನು ಮಾತನಾಡುವ ಈ ಮೂಡ ಹೆಂಗಸರನ್ನು ಇಲ್ಲಿ ಕಾಣುತ್ತೇವೆ. ಸ್ತ್ರೀಯರಲ್ಲೇ ಎಷ್ಟು ವ್ಯಕ್ತಿತ್ವಗಳಿವೆ. ಎಂದು ತಿಳಿಸುತ್ತದೆ.

ಕೊನೆಯಲ್ಲಿ ಧರ್ಮ ರಕ್ಷಕನಿಂದ ಅತ್ಯಾಚಾರಕ್ಕೀಡಾಗಿ ಆತ್ಮ ಹತ್ಯೆ ಮಾಡಿಕೊಳ್ಳುವುದಕ್ಕೆ ಪ್ರಯತ್ನಿಸುವಾಗಲೇ ಅದೃಷ್ಟವಶಾತ್ ಬದುಕುಳಿದ ತನಗೂ ಮತ್ತು ತನ್ನ ಮಗುವಿಗೆ ಆಶ್ರಯ ನೀಡಿದ ಧರ್ಮಾನುಯಾಯಿಯಾಗುವ ಹಾಗೂ ಅನ್ಯಧರ್ಮವನ್ನು ಸ್ವೀಕರಿಸಿದಕ್ಕೆ ತನ್ನ

---

[೩೧] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೮೪,

ಸ್ವಧರ್ಮದವರು ಬಹಿಷ್ಕಾರ ಹಾಕಿ ಶಿಕ್ಷೆಗೊಳಪಟ್ಟಿರುವ ಹೆಣ್ಣಿನ ದುರಂತ ಕಥೆಯನ್ನು ನೋಡುತ್ತೇವೆ. ಗಂಡು ಹೆಣ್ಣಿನ ಸಂಬಂಧದಿಂದ ಉದ್ಭವಿಸಿದ ಸಮಸ್ಯೆಗಳು ಕೆಲವೊಮ್ಮೆ ಸಾಮಾಜಿಕ ಆಯಾಮವನ್ನು ಪಡೆದು ಬಿಡುತ್ತದೆ. ಅದಕ್ಕೆ ಗೌರಮ್ಮನವರು [೩೨]"ಪತ್ರಿಕಾ ವರದಿಯ ತಂತ್ರವನ್ನು ಬಳಸುತ್ತಾರೆ. ತಾರೀಖು ೮ರ ಸ್ಥಳಿಕ ಪತ್ರಿಕೆಯೊಂದರಲ್ಲಿ ಹೀಗಿತ್ತು. ಮೊನ್ನೆ ದಿನ ಹಿಂದೂ ರಮಣಿಯೊಬ್ಬಳು ಮುಸಲ್ಮಾನ ಧರ್ಮ ಸ್ವೀಕರಿಸಿದ್ದು, ಊರಿನ ಹಿಂದುಗಳಿಗೆಲ್ಲಾ ಬಹಳ ವಿಷಾದವನ್ನುಂಟುಮಾಡಿದೆ. ಇನ್ನು ಮುಂದೆ ಈ ರೀತಿ ಸಂಭವಿಸದಂತೆ ನೋಡಿಕೊಳ್ಳುವುದಕ್ಕಾಗಿ ಊರಿನ ಪ್ರಮುಖ ಹಿಂದುಗಳ ಸಭೆಯೊಂದು ಶ್ರೀಮಾನ್ ನಾಗೇಶರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಸಭೆಯಲ್ಲಿ ಸರ್ವಾನುಮತದಿಂದ ಹಿಂದೂ ಧರ್ಮರಕ್ಷಣೆ ಮಾಡಬೇಕೆಂದು ತೀರ್ಮಾನವಾಯಿತು."[೩೨], ನವೆಂಬರ್ ೧೯೩೪ ಈ ವರದಿಯನ್ನು ನೋಡಿದರೆ ರಕ್ಷಕರೇ ಭಕ್ಷಕರು ಆಗಿದ್ದಾರೆ. 'ಬೇಲಿಯೇ ಎದ್ದು ಹೊಲ ಮೇದ ಹಾಗೆ' ಈ ವರದಿ ವ್ಯಂಗ್ಯವಾಗಿದ್ದು ಗಮನಾರ್ಹವಾಗಿದೆ.

'ಯಾರು'

ಈ ಕತೆಯಲ್ಲಿ ವಸಂತ ಮತ್ತು ಮಹೇಶ ಸ್ನೇಹಿತರಾಗಿರುವುದನ್ನು ನೋಡುತ್ತೇವೆ. ಒಮ್ಮೆ, ಇವರ ಒಡನಾಡಿಯಲ್ಲಿ ಸಂಶಯದ ಸುಳಿ ಎದ್ದು ವಸಂತ ಕಂಗಾಲಾಗುತ್ತಾನೆ. ಕಾರಣ ಮಹೇಶ ಊರಿಗೆ ಹೋಗುತ್ತೇನೆ ಎಂದು ಹೇಳಿ ಯಾವುದೋ ಒಂದು ಹೆಣ್ಣುಮಗಳ ಜೊತೆಗಿದ್ದುದನ್ನು ಕಂಡ ವಸಂತ, ಅವರಿಬ್ಬರಿಗೂ ಅನೈತಿಕತೆಯ ಸಂಬಂಧವನ್ನು ಕಲ್ಪಿಸಿಕೊಂಡು ಸ್ನೇಹಕ್ಕೆ ಸಂಚುತರುವ ಮಟ್ಟಕ್ಕೆ, ಆ ಸಂಶಯ ತಾರಕಕ್ಕೆ ಏರುತ್ತದೆ. ಇಂತಹ ಪವಿತ್ರವಾದ ಸ್ನೇಹಕ್ಕೆ ಕಳಂಕ ಬರುತ್ತದೆ ಎಂದು ತಿಳಿದ ಮಹೇಶ, ತನ್ನ ಗೆಳೆತನವನ್ನು ಉಳಿಸಿಕೊಳ್ಳುವ ಸಲುವಾಗಿ ಇಷ್ಟು ದಿನಗಳ ಕಾಲ ಯಾರಲ್ಲಿಯೂ ಹೇಳದೆ ಇದ್ದ ತಂಗಿಯ ದುರಂತದ ಕತೆಯನ್ನು ಪತ್ರದ ಮುಖಾಂತರ ಗೆಳೆಯನಿಗೆ ತಿಳಿಸುತ್ತಾನೆ.

ತಾಯಿ ಇಲ್ಲದ ತಬ್ಬಲಿ ನಮ್ಮ 'ಪಾಪ' ೧೧ನೇವರ್ಷದಲ್ಲೇ ತಬ್ಬಲಿಯಾದ ಅತ್ತೆಯ ಮಗನ ಜೊತೆ ಬಾಲ್ಯವಿವಾಹ ನಡೆಸಿದವು. ನಂತರ ಆತನ ವಿಧ್ಯಾಭ್ಯಾಸದ ಹೊಣೆಗಾರಿಕೆಯು ತಂದೆಯ ಮೇಲೆ ಬಿತ್ತು ಆತ ಆಕ್ಸ್ ಫರ್ಡ್ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗ ಪಡೆದು ನಂತರ ತನ್ನ ದೇಶಕ್ಕೆ ಹಿಂದಿರುಗುತ್ತಾನೆ. ತನ್ನ ದೇಶಕ್ಕೆ ಮರಳಿದ ಶ್ರೀರಾಮರಾಯರು, ಮಾವನ ಮನೆಗೆ ಬರದೆ, ಯಾವ ವಿಚಾರವೂ ತಿಳಿಸದೆ, ಇರುತ್ತಾನೆ.

ಆದರೆ ವೃತ್ತ ಪತ್ರಿಕೆಯ ಮುಖಾಂತರ ವಿಷಯ ತಿಳಿದ ಮಾವ, ಪಾಪನನ್ನು ಕರೆದುಕೊಂಡು ಹೋಗುವಂತೆ ಪತ್ರಬರೆಯುತ್ತಾರೆ. ಆದರೆ ಅಳಿಯನಿಂದ 'ಈಗೇನವಸರ'? ಎಂಬ ಉತ್ತರ ಬರುತ್ತದೆ. ಆದರೆ ಪಾಪಳ ಅವಸರಕ್ಕೆ ಮಣಿದು ಮಹೇಶ ಶ್ರೀರಾಮ ರಾವ್‌ನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಆದರೆ ಇವರಿಬ್ಬರಿಗೂ ಯಾವುದೇ ಆಧರದ ಸ್ವಾಗತಸಿಗುವುದಿಲ್ಲ. ವಿಪರ್ಯಾಸವೇನೆಂದರೆ ರಾಮ್‌ರಾವ್ ತನ್ನ ೨ನೇ ಹೆಂಡತಿಯಾದ ಮಾಲತಿಯನ್ನು ಪರಿಚಯಿಸುತ್ತಾನೆ. ಈ ವಿಚಾರ ತಿಳಿದ ತಂದೆ, ಚಿಕ್ಕಮ್ಮ ಇಬ್ಬರು,

---

[೩೨] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೮೬

ಅಸುನೀಗುತ್ತಾರೆ. ಆದರೆ ತಮ್ಮ ಬಳಿಯಲ್ಲಿ ಇದ್ದಂತಹ ಹಣ ಆಸ್ತಿಯೆಲ್ಲಾ ಪಾಪನ ಗಂಡನ ಶಿಕ್ಷಣಕ್ಕೆ ಕರಗಿಹೋಗಿರುತ್ತದೆ. ತಮಗೆ ಎಂದು ಏನು ಉಳಿಯದೆ, ತಮ್ಮವರು ಎಂದು ಯಾರು ಇರದೆ, ಇದ್ದ ಸ್ಥಳದಲ್ಲಿ ಸಮಾಜವು ಪಾಪನನ್ನು ನೋಡಿ, ಗಂಡ ಬಿಟ್ಟ ಹೆಂಡತಿ ಎಂದು ಹೀಯ್ಯಾಳಿಸಿ ಮಾತನಾಡಲು ಪ್ರಾರಂಭಿಸುತ್ತದೆ. ಆ ಕಾರಣದಿಂದ ಆ ಸ್ಥಳವನ್ನು ಬಿಟ್ಟು ಪಾಪ, ಮಹೇಶ ಇಬ್ಬರು ನಗರಕ್ಕೆ ಬರುತ್ತಾರೆ. ಇಲ್ಲಿ ಧೈರ್ಯಗುಂದದಂತೆ ಇರುವ ಪಾಪ ಕಲಾ ಕ್ಷೇತ್ರದಲ್ಲಿ ತನ್ನನ್ನು ತಾನು ಅರ್ಪಿಸಿಕೊಳ್ಳುತ್ತಾಳೆ. ಸಂಗೀತ ಮತ್ತು ಅಭಿನಯಕ್ಕಾಗಿ ತನ್ನ ಬದುಕನ್ನು ಮುಡುಪಾಗಿ ಇಡುತ್ತಾಳೆ.

ಆದರೆ ಈ ಕತೆಯನ್ನು ಸ್ತ್ರೀಪರ ಕಾಳಜಿಯಿಂದ ನೋಡಿದಾಗ ಎದ್ದು ಕಾಣುವ ವೈಚಿತ್ರ ಎಂದರೆ, ವರದಕ್ಷಿಣೆಯ ಬೇಡಿಕೆಯನ್ನು ಬಯಸುವವರು ಅನಕ್ಷರಸ್ಥ ತಂದೆ, ತಾಯಿ ಅಲ್ಲ, ವಿದ್ಯಾವಂತ ಯುವಕರೆ ಎಂಬುದು ಗಮನಿಸಬೇಕಾದ ವಿಚಾರ. ಇಲ್ಲಿ ವರದಕ್ಷಿಣೆ ಎಂದು ನೇರವಾಗಿ ಕೇಳದೆ ಉನ್ನತ ವ್ಯಾಸಂಗಕ್ಕೆ ಎಂದು, ವಿದೇಶದಲ್ಲಿ ಶಿಕ್ಷಣಭ್ಯಾಸ ಮಾಡಬೇಕೆಂದು, ಆರ್ಥಿಕತೆಯಲ್ಲಿ ಹಿಂದುಳಿದ ವಿದ್ಯಾವಂತ ಯುವಕರು ತಮ್ಮ ಆಸೆಯನ್ನು ಈಡೇರಿಸಿಕೊಳ್ಳಲು ಸಾಧ್ಯವಾಗದೆ, ಈ ಮಾರ್ಗವನ್ನು ಹಿಡಿದಿದ್ದಾರೆ. ಅಷ್ಟೇ ಅಲ್ಲದೆ 'ಹೆಣ್ಣು ಕೊಟ್ಟ ಮಾವ ಕಣ್ಣುಕೊಟ್ಟ ದೇವರು' ಎಂಬ ಗಾಧೆಯ ಮಾತನ್ನು ಮರೆತು ಅವರಿಂದಲೇ ಒಂದು ಉನ್ನತವಾದ ಅಧಿಕಾರ ಗೌರವವನ್ನು ಪಡೆದು ಕೊನೆಗೆ ಅವರನ್ನೇ ಮರೆಯುವ ನೀಚತನದ ವ್ಯಕ್ತಿಯನ್ನು ಕಾಣುತ್ತೇವೆ. 'ಉಪ್ಪುತಿಂದ ಮನೆಗೆ ಎರಡು ಬಗೆಯವಂತೆ' ಹೆಣ್ಣಿನ ಮನೆಯವರ ರಕ್ತ ಹಿಂಡಿ, ಅವರ ಶ್ರಮದ ಹಣವನ್ನು ತೆಗೆದುಕೊಂಡು, ಅದರಲ್ಲೇ ತನಗೆ ಬೇಕಾದ ಹಣ, ಆಸ್ತಿ ವಿದ್ಯೆ ಹೀಗೆ ಸಕಲವನ್ನು ಪಡೆದು, ಕೊನೆಗೆ ಹೆಂಡತಿ ಮನೆಯ ಅನುಕೂಲ (ಸವಲತ್ತುಗಳು) ಬೇಕು, ಆದರೆ ಹೆಂಡತಿ ಬೇಡ ಎನ್ನುವ ಮನೋಭಾವದ ಪುರುಷ ಸಮಾಜವನ್ನು ನಾವಿಲ್ಲಿ ಕಾಣುತ್ತಿದ್ದೇವೆ.

ಅಷ್ಟೇ ಅಲ್ಲದೆ ಹೆಂಡತಿ ಇರಬೇಕಾದರೆ, ಎರಡನೇಯ ಹೆಂಡತಿಯನ್ನು ತರುವ ಸದ್ಗುಣ ಸಂಪನ್ನ ವಿದ್ಯಾವಂತ ಇವರು ಎಂದು ಗೌರಮ್ಮನವರು ಕತೆಯಲ್ಲಿ ವ್ಯಂಗ್ಯವಾದ ಧೋರಣೆ ಕೊಡುವುದನ್ನು ನೋಡುತ್ತೇವೆ. ಇಲ್ಲಿ ಗಮನಿಸಬೇಕಾದ ವಿಚಾರ ಎಂದರೆ ಶ್ರೀ ರಾಮರಾಯರು ವಿದೇಶಕ್ಕೆ ಹೋಗುವಾಗ ವಿದೇಶಕ್ಕೆ ಹೋಗುವುದು ಬೇಡ ಎಂದು ತಡೆಯಲು ಹೋದ ಪಾಪಳಿಗೆ [೩೩]"ಇಂಗ್ಲೆಂಡಿಗೆ ಹೋಗುವ ಸಲುವಾಗಿಯೇ ನಿನ್ನನ್ನು ಮದುವೆ ಆದೆ, ಇಲ್ಲದಿದ್ದರೆ ಯಾರು ಮದುವೆ ಆಗುತ್ತಿದ್ದರು ನಿನ್ನ"[೩೩]. ಎಂದನು. ಎಂತಹ ವ್ಯಾಘ್ರ ಮನೋಭಾವದ ವ್ಯಕ್ತಿಯನ್ನು ನೋಡುತ್ತೇವೆ. ಆದರೆ ವಿಚಾರ ತಿಳಿದು ತನ್ನ ಕುಟುಂಬದವರಿಗೆ ಹೇಳದೆ ಪ್ರತಿ ದಿನವು ತಾನೇ ನೋವನ್ನು ತಿಂದು ತನ್ನ ಗಂಡನ ಉನ್ನತಿಯನ್ನು ಬಯಸುವ ಕರುಣಾಮೂರ್ತಿಯಾದ ಪಾಪನನ್ನು ನೋಡುತ್ತೇವೆ. ವ್ಯಾಸಂಗ ಮುಗಿಸಿ ಬಂದರೂ, ತಮ್ಮ ಉನ್ನತಿಗೆ ಕಾರಣವಾದ ಮನೆಯವರಿಗೆ ವಿಚಾರತಿಳಿಸದೆ ಎರಡನೇ ಹೆಂಡತಿಯ ಜೊತೆ ಸಂಸಾರ ಮಾಡುವ ನೀಚ ವ್ಯಕ್ತಿತ್ವದ ರಾಮರಾಯರನ್ನು ನೋಡುತ್ತೇವೆ. ಅಷ್ಟೇ ಅಲ್ಲದೆ, ಮಹೇಶ ತನ್ನ ತಂಗಿಯನ್ನು ಕರೆದುಕೊಂಡು ಆತನ ಮನೆಗೆ ಹೋದಾಗ

---

[೩೩] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೧೨

ಮಹೇಶನಿಗೆ ಹೇಳುತ್ತಾರೆ. ಆದರೆ ನನಗೆ ಬುದ್ಧಿ ಬರುವ ಮೊದಲು ಆದ ಒಂದು ವಿಷಯಕ್ಕಾಗಿ ಇಡೀ ಜೀವನವನ್ನೆಲ್ಲಾ ನಾನೇಕೆ ಹಾಳು ಮಾಡಿಕೊಳ್ಳಬೇಕು?. ಒತ್ತಾಯವಾಗಿ ವಿವಾಹ ನಡೆದು ಹೋಯಿತು. ನಿನ್ನ ತಂಗಿ ನಿಮ್ಮನೆಯಲ್ಲೇ ಇರಲಿ ಅವಳ ಖರ್ಚನ್ನು ನಾನೇ ನೋಡಿ ಕೊಳ್ಳುತ್ತೇನೆ. ಇದಕ್ಕು ಹೆಚ್ಚಿನದಾಗಿ ನಾನೇನು ಮಾಡುವುದಕ್ಕೆ ಸಾಧ್ಯವಿಲ್ಲ ಎಂದು ಹೇಳಿದನು. ಹೆಂಡತಿ ಮನೆಯವರ ಸಹಕಾರ ಸಹಾಯ ಪಡೆದು ಈಗ ಅವರಿಗೆ ಮೋಸಮಾಡುವ ನಯವಂಚಕ ರಾಮರಾಯರ ಪರಿಚಯ ಮಾಡುತ್ತಾರೆ. ಆದರೆ ಇದಕ್ಕೆ ವಿರುದ್ಧವಾಗಿ ತನ್ನ ಸ್ವಂತ ಪ್ರತಿಭೆಯಿಂದ ಸಾಧನೆ ಮಾಡಿ ಜನಪ್ರಿಯ ಸ್ತ್ರೀಯಾಗಬಹುದು ಎಂಬ ಮಾತನ್ನು ದೃಢೀಕರಿಸಿದ ಸ್ವಾಭಿಮಾನಿ ಮಹಿಳೆಯಾದ ಮಿಸ್ ಅರುಣಾದೇವಿ (ಪಾಪ) ಯನ್ನು ಪಾಪನನ್ನು ನೋಡುತ್ತೇವೆ. ಸಮಾಜದ ಆರೋಪಕ್ಕೆ ಗುರಿಯಾದ ಹೆಣ್ಣು ಮನಸ್ಸು ಮಾಡಿದರೆ ಏನು ಬೇಕಾದರು ಆಗಬಹುದು ಎಂದು ಪಾಪನ ಮುಖಾಂತರ ಪರಿಚಯಿಸಿ, ಶ್ರೀರಾಮ ರಾಯನಂತಹವರು ಸಮಾಜದ ಎಲ್ಲಾಕಡೆ ಇರುತ್ತಾರೆ ಎಂದು ಎಚ್ಚರಿಸಿ, ಈ ಸಂದೇಶವನ್ನು ಹೇಳುವ ಮುಖಾಂತರ ಒಂದು ಸುಧಾರಣವಾದಿ ಸ್ತ್ರೀವಾದಿಯ ಕತೆಯನ್ನು ನಾವಿಲ್ಲಿ ನೋಡುತ್ತೇವೆ.

'ಕೆಲವು ಕಾಗದಗಳು' ೧೬ ಕಾಗದಗಳು ಇರುವ ಈ ಕತೆಯಲ್ಲಿ ಸ್ತ್ರೀ ಪುರುಷರ ಗೆಳೆತನ ಸಂಬಂಧವನ್ನು ಸಮಾಜ ಹೇಗೆ? ಭಿನ್ನ ನೆಲೆಯಲ್ಲಿ ನೋಡಿ, ಅದನ್ನು ಕಾಮದ ಸಂಬಂಧವಾಗಿ ಕಾಣುತ್ತೇವೆ. ಎಲ್ಲಿ ನಿರ್ಮಲವಾದ ಪರಿಶುದ್ಧವಾದ ಒಂದು ಸ್ನೇಹ ಇರುತ್ತವೆಯೋ ಅಲ್ಲಿ ಜನ ಕಾಮದ ತುಚ್ಛ ಭಾವನೆಯಿಂದ ನೋಡುತ್ತಾರೋ, ಆಗ ಆ ಗೆಳೆತನಕ್ಕೆ ಆಗುವ ಬೇಸರ, ನೋವುಗಳನ್ನು ಕುರಿತು ವಸಂತ ಮತ್ತು ಪ್ರಭೆಯು ಪರಸ್ಪರ ಹಂಚಿಕೊಳ್ಳುವ ಕಾಗದದ ಮುಖಾಂತರ ತಲ್ಲಣಗಳು, ಅತಿ ಭಾವುಕತೆಯೇ. ಈ ಕತೆ ಪರಿಣಾಮಕ್ಕೆ ಧಕ್ಕೆಯುಂಟು ಮಾಡುತ್ತಿರುವುದನ್ನು ನೋಡುತ್ತೇವೆ. ಇಲ್ಲಿ ಬರುವ ವಸಂತ ಕತೆಯ ದುರಂತ ನಾಯಕ. ಪ್ರಭೆ, ತಂದೆ ತಾಯಿ ಇಲ್ಲದ ತಬ್ಬಲಿ ಅನಾಥೆ ಮೊದಲಿಗೆ ವಸಂತ ಮತ್ತು ಪ್ರಭೆಯ ನಡುವೆ ಸಹೋದರಿಯ ಭಾವನೆಯನ್ನು ಕಾಣುತ್ತೇವೆ. ವಸಂತ ಪ್ರಭೆಯನ್ನು ನೋಡಿದಾಗೆಲ್ಲಾ ಬಹಳ ದಿನಗಳು ಹಿಂದೆ ತನನ್ನು. ಅಗಲಿಹೋದ, ಸಹೋದರಿಯ ಮೇಲಿನ ಪ್ರೀತಿ ಯಾವ ಬಗೆಯದಿರುತ್ತಿತ್ತೋ, ಅದೇ ಬಗೆಯ ಪ್ರೀತಿ, ಆಗಾಗಿ ಕೆಲವೇ ದಿನಗಳಲ್ಲಿ ಸಾಯುವ ಸಂಭವವಿದ್ದ ವಸಂತನಿಗೆ, ಸದಾಕಾಲ ತನ್ನ ಜೊತೆಯಲ್ಲಿಯೇ ಪ್ರಭೆ ಇರಬೇಕು, ಎಂದು ಬಯಸುತ್ತಾನೆ.

ವಸಂತ ಬಂಧುಗಳ ಮನೆಯ ಆರೋಗ್ಯ ಸರಿಯಿಲ್ಲದೆ ರೋಗದಿಂದ ನರಳುತ್ತಾ ಮಲಗಿದ್ದಾಗ, ಆತನ ಶೂಶ್ರೂಷೆ ಮಾಡುವ ಮುಖಾಂತರ ಪ್ರಭೆಯ ಪರಿಚಯವಾಗಿ, ನಂತರ ವಸಂತರಾಯರ ಮನಸ್ಸನ್ನು ಗೆಲ್ಲುವ ಪ್ರಭೆಯನ್ನು ಕಾಣುತ್ತೇವೆ. ಪ್ರಭೆಗೂ ಅಷ್ಟೇ ವಸಂತನನ್ನು ನೋಡಿದರೆ ಸಹೋದರನ ಭಾವನೆ. ಅವಳ ಸುತ್ತಾ ಸುತ್ತುತ್ತಿತ್ತು. ಆದರೆ ಇವರಿಬ್ಬರ ನಡವಳಿಕೆಯನ್ನು ಗಮನಿಸಿದ ವಸಂತನ ಪತ್ನಿ ಸುನೀತ ಹಾಗೂ ಸಮಾಜದ ಇತರ ಜನಗಳ ದೃಷ್ಟಿಗೆ ಸರಿಬಾರದೆ ಅವರುಗಳ ಕೆಟ್ಟ ದೃಷ್ಟಿಕೋನಕ್ಕೆ ಬಲಿಯಾದದ ಪ್ರಭೆ, ವಸಂತನಿಂದ

ಬಹುದೂರ ಸಾಗುತ್ತಾಳೆ. ಯಾವಾಗ ಪ್ರಭೆ ವಸಂತನಿಂದ ದೂರವಾಗುತ್ತಾಳೋ ಅಂದಿನಿಂದ ಇವರಿಬ್ಬರ ನಡುವೆ ಪತ್ರ ವ್ಯವಹಾರ ನಡೆಯುತ್ತದೆ. ಆದರೆ ಇವರಿಬ್ಬರ ಈ ಸಂಬಂಧ ಎಷ್ಟು ಪವಿತ್ರವಾಗಿರುವುದು ಎಂದು, ಅವರಿಬ್ಬರಿಗೆ ಗೊತ್ತು. ಆದರೆ ಪ್ರಭಾ, ಸಮಾಜದ ಕ್ರೂರ ನುಡಿ, ಕಠೋರವಾದ ಮನಸ್ಸಿಗೆ ಹೆದರಿ ಕಂಗಲಾಗಿ, ವಸಂತನಿಂದ ದೂರವಾಗುತ್ತಾಳೆ. ವಸಂತನಿಗೆ ಪ್ರಭೆಯ ಅಗಲಿಕೆಯ ನೋವು ಈ ಪತ್ರದಲ್ಲಿ ಕಾಣಿಸಿ, ಅದರ ಜೊತೆಯೇ ಆತನ ಬೇಡಿಕೆಯಾದ 'ನಾನು ನಿನ್ನೊಡನೆ ಬೇಡುವುದು ಸದಾ ನನ್ನೊಡನೆ ಇರು' ಎಂದು ಕೇಳಿ ಕೊಳ್ಳುತ್ತಾನೆ. ಆದರೆ ಪ್ರಭೆ ಅನಾಥೆ ಹೆಣ್ಣು ಎಷ್ಟು ದಿನ ಈ ಸಮಾಜದ ನಿಂದನೆಗೆ, ಹೀಯಾಳಿಸುವಿಕೆಗೆ ಅಪರಾಧಿಯ ದೃಷ್ಟಿಯ ನೆಲೆಯಲ್ಲಿ ಬದುಕಲು ಒಬ್ಬ ನಿರಪರಾಧಿಗೆ ಹೇಗೆ ಸಾಧ್ಯ ಹೀಗೆ ಪ್ರಭೆಗೆ ಜೀವನ ಸರಿದೂಗಿಸುವುದೇ ಬಹಳ ದುಸ್ತರವಾಗುತ್ತದೆ. ಇದರಿಂದ ವಸಂತನಿಂದ ಬಹುದೂರ ಹೊಗಲೇಬೇಕು ಎಂಬ ಅನಿವಾರ್ಯ ಸ್ಥಿತಿ ಬರುತ್ತದೆ. ಆದರೆ ವಸಂತ ಪ್ರತಿ ಸಾರಿಯ ಪ್ರಭೆಯ ಕಾಗದಕೆ, ಆತನ ಪ್ರತ್ಯುತ್ತರ, ತನಗೆ ನಿನ್ನ ಮೇಲೆ ಇರುವುದಿಲ್ಲ ಪಾಪರಹಿತಾದ ಪವಿತ್ರ ಪ್ರೀತಿ ಎಂದು ಹೇಳುತ್ತಾನೆ.

ವಸಂತನ ದಿನಚರಿಯಲ್ಲಿ ತಾ.೧೨-೪-೧೯೩೭ರಲ್ಲಿ [೩೪]"ಯಾವಾಗಲೂ ಪ್ರಭೆಯ ಯೋಚನೆಯೇ ಉಂಟಾಗುತ್ತದೆ. ಏನು, ಯಾವ ರೀತಿ ಗಂಡಸೊಬ್ಬನು ಇನೊಬ್ಬನನ್ನು ಪ್ರೀತಿಸುವನೋ, ಹಾಗೆಯೇ ಒಬ್ಬ ಹೆಂಗಸನ್ನು ಪ್ರೀತಿಸಲಾಗುವುದಲ್ಲವೇ? ಸ್ತ್ರೀ ಪುರುಷರ ಮೈತ್ರಿಗೆ ಜನರು ಬೆರಳನ್ನು ತೋರುವರೇಕೆ? ಏನಿದು? ಸಂಸಾರದ ಪ್ರಾಕೃತಿಕ ನಿಯಮವೇ ಹೀಗೇನು? ಎಲ್ಲರ ಹೃದಯದಲ್ಲೂ ಪಾಪವೇ ಇದೆಯೇನು? ಸ್ತ್ರೀಪುರುಷರು ಇದ್ಭಾ ರಹಿತವಾದ ಪವಿತ್ರ ಪ್ರೇಮವು ನೆಲೆಸಲಾರದೆಂದು ಜನರು ತಿಳಿದಿರುವರೇನು? ಇದನ್ನು ಬಿಡಿಸುವುದು ನನಗೊಂದು ಒಗಟಾಗಿದೆ."[೩೪] ಈ ರೀತಿ ಬರೆದುಕೊಳ್ಳುವುದು, ಸ್ನೇಹದಂತಹ ಪವಿತ್ರ ಸಂದರ್ಭಕ್ಕೆ ಸ್ತ್ರೀಪುರುಷ ಎನ್ನುವ ಒಂದು ಲಿಂಗತಾರತಮ್ಯವನ್ನು ತರುವುದು ಸಮಾಜದ ದೃಷ್ಟಿಕೋನದಿಂದ ಎಷ್ಟರ ಮಟ್ಟಿಗೆ ಸರಿ?. ವಸಂತ ಸಾಯುವ ಸಮಯದಲ್ಲಿ ತನ್ನ ತಂದೆಯ ಇಚ್ಚೆಯನ್ನು ಪಡೆದು ಪ್ರಭೇ ಎಲ್ಲಿಯ ತನಕ ವಿದ್ಯಾಭ್ಯಾಸ ಮಾಡುತ್ತಾಳೋ ಅಲ್ಲಿಯವರೆಗೆ ಆಗುವ ಖರ್ಚನ್ನು ನೀಡಬೇಕು ಎಂಬುದೇ, ವಸಂತನ ಅಂತಿಮ ಇಚ್ಚೇ. ಎಂದು ಸೀತಾರಾಮ ವಸಂತನ ಸ್ನೇಹಿತ ಪ್ರಭೆಗೆ ಪತ್ರವನ್ನು ಬರೆಯುತ್ತಾನೆ. ವಸಂತನ ಮರಣದ ನಂತರ, ಸೀತಾರಾಮ ಬರೆದ ಪತ್ರ ಸಿಕ್ಕಿದ ನಂತರ ಪ್ರಭೆ ಆ ಊರನ್ನೇ ಬಿಟ್ಟು ಹೋಗುತ್ತಾಳೆ. [೩೫]"ನನ್ನನ್ನು ಹುಡುಕಬೇಡಿ ನನ್ನನ್ನು ನಾನು ರಕ್ಷಿಸಿಕೊಳ್ಳುತ್ತೇನೆ. ನನಗಾಗಿ ಅಳುವವರು ಯಾರು ಇಲ್ಲ"[೩೫]. ಎಂದು ಮಖ್ಯೋಪಧ್ಯಾಯಿನಿಯವರಿಗೆ ಬರೆದು ಹೋಗುತ್ತಾಳೆ. ಈ ವಿಚಾರ ಕೊಡಗು ದಿನಪತ್ರಿಕೆಯಲ್ಲಿ ಬರುವುದನ್ನು ನೋಡುತ್ತೇವೆ. ಇದರಿಂದಲೇ ಪ್ರಭೆ, ವಸಂತನಿಂದ ಪವಿತ್ರವಾದ ಸ್ನೇಹ ಸೋದರಿಯ ಸಂಬಂದ ಬಿಟ್ಟು ಬೇರೆನೂ ಬಯಸುತ್ತಿರಲಿಲ್ಲ.

ಸಮಾಜದಲ್ಲಿ ಅಣ್ಣ, ತಂಗಿ ಸಹೋದರ, ಸಹೋದರಿಯ ಸಂಬಂಧವೇ ನಶಿಸಿಹೋಗುತ್ತಿದೆಯೋ, ಎಂದು ಗೌರಮ್ಮನವರು ಈ ಕಾಗದದ ಮುಖಾಂತರ ಸಮಾಜದ

---

[೩೪+೩೫] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೬೦, ೧೬೫

ಕ್ರೂರ ನೋಟ, ಹೀನವಾದ ಮನಸ್ಸು, ಕೆಟ್ಟ ದೃಷ್ಟಿಕೋನವನ್ನು ಅಲ್ಲಗಳೆಯುವುದನ್ನು, ಗೌರಮ್ಮನ ಕತೆಗಳ ಮುಖಾಂತರ ನೋಡುತ್ತೇವೆ. ಹೀಗೆ ಗೌರಮ್ಮನವರು ವೈಯಕ್ತಿಕ ವಿಚಾರಕ್ಕೆ ಸಾಮಾಜಿಕ ಆಯಾಮ ಒದಗಿಸುವುದನ್ನು ನೋಡುತ್ತೇವೆ.

ಈ ಪತ್ರ ಮಾದರಿ ಕನ್ನಡ ಸಾಹಿತ್ಯದಲ್ಲಿ ನವನವೀನ ಅಪರೂಪದ ಮಾದರಿ ಎಂದು ಹೇಳಬಹುದು.

'ಸುಳ್ಳು ಸ್ವಪ್ನ' ಸಮಾಜದಲ್ಲಿ ಪ್ರೇಮ ವಿವಾಹದ ಬಗ್ಗೆ ಇರುವ ಸಾಫಲ್ಯ ವೈಫಲ್ಯ ಪರಿಣಾಮದಿಂದ ಕತೆಯನ್ನು ರಚಿಸಿದ್ದಾರೆ. ಅಂತಹ ದಾಟಿಯಲ್ಲಿ ಬಂದ ಕತೆ 'ಸುಳ್ಳು ಸ್ವಪ್ನ' ಇದರ ನಾಯಕಿ ಸರಸಿ, ಸರಸಿ ತಾಯಿ ಇಲ್ಲದ ತಬ್ಬಲಿ ತಂದೆ ಮತ್ತು ಅಕ್ಕನ ಪ್ರೀತಿಯಲ್ಲಿ ಬೆಳೆದವಳು. ನಂತರ ಯುವಕನೊಬ್ಬನ ಪ್ರೇಮ ಪ್ರಣಯಕ್ಕೆ ಸಿಲುಕಿ ಅದರಿಂದ ಉಂಟಾದ ವೈಫಲ್ಯದ ಚಿತ್ರಣವನ್ನು ಕುರಿತು ಈ ಕತೆ ಮಾತನಾಡುತ್ತದೆ.

ಸಮಾಜದಲ್ಲಿ ಒಂದು ಹೆಣ್ಣೇ ಆಗಲಿ ಗಂಡೇ ಆಗಳಿ, ತಮ್ಮ ಪ್ರೀತಿ ಪೇಮದ ವಿಚಾರವನ್ನು ಕುಟುಂಬದವರಿಗೆ ಹೇಳಿಕೊಳ್ಳುವುದಕ್ಕೆ ಸಾಧ್ಯವಾಗದೆ, ತೊಳಲಾಡುತ್ತಿರುವರೋ ಹಾಗೆಯೇ ಕತೆಯ ನಾಯಕಿ ಸರಸಿಯ ಪಾಡನ್ನು ನೋಡುತ್ತೇವೆ.

ಯಾರಲ್ಲೂ ಹೇಳಲಾಗದ ತನ್ನ ಮನದಾಳದ ಪ್ರೀತಿಯ ಭಾವನೆಗಳನ್ನು ಬಿತ್ತರಿಸುವುದಕ್ಕೆ ದಿನಚರಿಯ ಮೊರೆಹೋಗುತ್ತಾಳೆ. ತಾನು ಪ್ರೀತಿಸಿದ ನಲ್ಲನ ಜೊತೆ ಕಳೆದ ಸಮಯ, ಸಂಭಾಷಣೆ ಎಲ್ಲವನ್ನು ಮನದಲ್ಲೇ ಮೆಲುಕು ಹಾಕುತ್ತಾ ಮಂಡಿಗೆ ತಿನ್ನುವ ಸರಸಿಯು, ಒಂದು ಕಡೆ, ಸರಸಿಯ ತಂದೆ ಇವುಗಳ ಯಾವುದರ, ಪರಿವೇ ತಿಳಿಯದೆ ಮಗಳಗೆ ಸಂಬಂಧವನ್ನು ನೋಡಿ ಮದುವೆಗೆ ನಾನಾ ರೀತಿಯ ಸಿದ್ಧತೆಯನ್ನು ಮಾಡುತ್ತಾರೆ. ಯಾರನ್ನು ಮೊರೆಹೋಗಲಿ? ಅಮ್ಮನಂತೂ ಈ ಲೋಕದಲ್ಲಿ ಇಲ್ಲ ಅವನು ವರನಾಗದ ಮದುವೆಯಲ್ಲಿ ನಾನು ವಧುವಾಗುವುದು ಹೇಗೆ? ಅಯ್ಯೋ ಅವನ ಕಾಗದಗಳು ಪ್ರತಿ ಶಬ್ಧದಿಂದಲೂ ಉಕ್ಕುತ್ತಿರುವ ಪ್ರೇಮ... ಹೀಗಾಗುವುದೆಂದು ಯಾರಿಗೆ ತಿಳಿದಿತ್ತು? ನನಗೇಕೆ ಹುಚ್ಚು ಹಿಡಿಯುವುದಿಲ್ಲ ! ಹೀಗೆ ನಾನಾ ರೀತಿಯಲ್ಲಿ ಆಲೋಚಿಸುವ ಸರಸಿಗೆ ಬೇರೊಬ್ಬನೊಂದಿಗೆ ಮದುವೆಯ ನಿಶ್ಚಯವಾಗಿರುವುದು ತಿಳಿಯದ ಸರಸಿಯ ನಲ್ಲ, ತನ್ನ ಕಾಗದಗಳಿಗೆ ಉತ್ತರವನ್ನೇ ಬರೆಯದ ಸರಸಿಗೆ, [೨೬]"ನೀನೆಂತ ಕ್ರೂರಿ ಸರಸಿ, ನನ್ನ ಕಾಗದಗಳೊಂದಕ್ಕೂ ಪ್ರತ್ಯುತ್ತರವನ್ನು ಬರೆಯುತ್ತಿಲ್ಲವೇಕೆ? ಎಂದು ಬರೆದಿರುವನು. ಹೌದು, ನಾನು ಕ್ರೂರಿ.... ಅಣ್ಣನು ನನ್ನ ಮೇಲೆ ನಡೆಯಿಸಿದ ಕ್ರೂರತನದ ಪ್ರತಿಫಲವಾಗಿ ನಾನವನಿಗೆ ಕ್ರೂರಿ ಇದೀಗ ಇಂದಿನ ನ್ಯಾಯ ಏನು ಮಾಡಲಿ? ಏನೆಂದು ಬರೆಯಲಿ? ಬರೆಯದೇ ಇರಲೆ? ಅವನೇನೆಂದು ತಿಳಿದುಕೊಳ್ಳುವನು? ಈ ತರದ ಸಂಕಟವನ್ನು ಅನುಭವಿಸುವುದಕ್ಕೆ ನನ್ನ ಜನ್ಮವಾಯಿತೇನು? ನಾನೇಕೆ ಸಾಯುವುದಿಲ್ಲ? ಬಾವಿಗೆ ಹಾರಲೇ? ಹಾರಲಾರೆ. ನನ್ನನ್ನು ತನ್ನ ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಅಕ್ಕನಿರುವಾಗ ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ

---

[೨೬] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೦೫.

ನೋಡುವ ಪತಿ ಇರುವರು. ಅವರ ಅಷ್ಟೊಂದು ಪ್ರೀತಿಯ ಪ್ರತಿ ಫಲವಾಗಿ ಕೊಡಲು ನನ್ನಲ್ಲೇನಿದೆ? ಇದ್ದುದ್ದನ್ನೆಲ್ಲಾ ಅವನಿಗೆ ಬಲು ದಿನಗಳ ಹಿಂದೆಯೇ ಅರ್ಪಿಸಿ ಬಿಟ್ಟಿರುವೆನು. ಇನ್ನಿರುವುದೇನು? ಅವರಿಗಾಗಿ ಭಕ್ತಿಯಿಂದ ಚಿಕ್ಕ ದೊಡ್ಡ ಕೆಲಸಗಳನ್ನು ಜಾಗರೂಕತೆಯಿಂದ ಮಾಡುವೆನು. ಆದರೆ ಯಾವುದು ಮುಖ್ಯವೋ ಅದು ಮಾತ್ರ ನನ್ನೆಡೆಯಲಿಲ್ಲ ಏನು ಮಾಡಲಿ? ಸಾಯಲಾರೆ. ಬದುಕಲಾರೆ. ಏನು ಮಾಡಲಿ? ಏನು ಮಾಡಲಿ?"[೩೭].... ಕೇಳುವುದು ಯಾರೊಡನೆ. ತನ್ನ ಮನಸ್ಸಿನ ಭಾವನೆಯನ್ನು ಬೇರೆಯವರ ಹತ್ತಿರ ಬಹಿರಂಗ ಪಡಿಸುವುದಕ್ಕೆ ಸಾಧ್ಯವಾಗದೆ ಅಂತರಂಗದಲ್ಲಿ ಮುಚ್ಚಿಟ್ಟು ಕೊಳ್ಳುವುದಕ್ಕೆ ಆಗದೆ ತನ್ನ ದಿನಚರಿಯಲ್ಲಿ ಬರೆದು, ಬದುಕಲೇಬೇಕಾದ ಅನಿವಾರ್ಯದ ಸ್ಥಿತಿಗೆ ಸಿಲುಕಿ ಹಲುಬುತ್ತಿರುವ ಹೆಣ್ಣಿನ ಚಿತ್ರವನ್ನು ರೂಪಿಸುವುದು, ಹೀಗೆ, ಸಮಾಜದಲ್ಲಿ ವ್ಯಕ್ತಿಯ ಜೀವನ ಆತನ ವಿವಾಹದಲ್ಲಿ ಬರುವ ಸಂಗಾತಿ,ಇದನ್ನು ನಿರ್ಧರಿಸುವುದಕ್ಕೆ ವೈಯಕ್ತಿಕ ವಿಚಾರ ಧಾರೆಗಿಂತಲೂ ಹೊರಗಿನ ಸಮಾಜದ ಸಂಗತಿಯೇ ಮುಖ್ಯ ಎಂದು ಬಗೆದಾಗ, ಅಲ್ಲಿ ವ್ಯಕ್ತಿಯ ದುರಂತವನ್ನು ಕಾಣಬಹುದು.

ಹೀಗೆ ಗೌರಮ್ಮನವರು ಸಾಮಾಜಿಕ ದೃಷ್ಟಿಕೋನವನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ ಜಾತಿವ್ಯವಸ್ಥೆಯ ಬಗೆಗೆ ಯಾವ ಚರ್ಚೆಯ ನಿಲುವನ್ನು ವ್ಯಕ್ತಪಡಿಸಿಲ್ಲ. ಸರ್ವಧರ್ಮಕ್ಕೆ ಮನ್ನಣೆ ಕೊಡಲು ಮತಾಂತರವನ್ನು ಇವರು ಕತೆಯಲ್ಲಿ ತರುವುದಿಲ್ಲ. ಮತಾಂತರ ಎನ್ನುವುದು ಹೊಟ್ಟೆ ಪಾಡಿಗಾಗಿಯೋ, ವಿವಾಹದ ಕಾರಣಕ್ಕಾಗಿಯೋ ತರುತ್ತಾರೆ. ಇವರ ಕಥೆಗಳಲ್ಲಿನ ಧರ್ಮವನ್ನು ಕೂಲಂಕುಷವಾಗಿ ಪರಿಶೀಲಿಸಿದರೆ, ತಮ್ಮ ಧರ್ಮವನ್ನು ತಾವೇ ಪುನರ್ ವಿಮರ್ಶಿ ಸಿರುವುದನ್ನು ಕತೆಯಲ್ಲಿ ಪಾತ್ರಗಳ ಮುಖಾಂತರ ತಿಳಿಸುತ್ತಾರೆ. ಅಷ್ಟೇ ಅಲ್ಲದೆ ಅನ್ಯಧರ್ಮಿಯರಿಂದ ಇನ್ನೊಂದು ಧರ್ಮವನ್ನು ಟೀಕಿಸುವಂತೆ ಕತೆಗಳಲ್ಲಿ ಚಿತ್ರಿಸಿದ್ದಾರೆ.

ಇವರ ಕತೆಗಳಲ್ಲಿ ದೇವರು, ಮಠಮಂದಿರಗಳು, ಭಕ್ತಿ ಮಠಾದೀಪತಿಗಳು, ಧರ್ಮ ರಕ್ಷಕರು ಇವುಗಳ ಯಾವ ವಿವರಗಳೂ ಕೇಂದ್ರ ಪಾತ್ರವಾಗಿ ಕಾಣಿಸಿಕೊಳ್ಳುವುದಿಲ್ಲ. ಇವುಗಳನ್ನು ತಮ್ಮ ಸಮಾಜದಲ್ಲಿ ತಲೆದೂರುತ್ತಿರುವ ಸಾಮಾಜಿಕ ಸಮಸ್ಯೆಯಾದ ವಿಧವಾ ಪರಿಹಾರಕ್ಕೆ ಪೂರಕ ಸಂಗತಿಯಾಗಿ ತೆಗೆದುಕೊಳ್ಳುತ್ತಾರೆ. ಇವರ ಕತೆಗಳಲ್ಲಿ ಬರುವ ಪ್ರಧಾನ ಸಂಗತಿ 'ವಿವಾಹ' ವನ್ನು ತೆಗೆದುಕೊಂಡರೆ, ಸಂಪ್ರದಾಯಬದ್ಧವಾಗಿ ಹಿರಿಯರ ಒಪ್ಪಿಗೆ ಪಡೆದು ಆದ ವಿವಾಹಗಳಿಂದ ಹೆಚ್ಚು ಸುಖಾಂತ್ಯವನ್ನು ತೋರಿಸಿ ಇದಕ್ಕೆ ವ್ಯತಿರಿಕ್ತವಾಗಿ ಕುಟುಂಬವನ್ನು ನಿರ್ಲಕ್ಷಿಸಿ ತಮ್ಮ ಸ್ವಾರ್ಥವೇ ಪ್ರಧಾನವಾಗಿ ತೆಗೆದುಕೊಂಡು ಸ್ವಾತಂತ್ರ ಆಯ್ಕೆಯನ್ನು ಮಾಡಿಕೊಂಡ ವಿವಾಹಗಳು ದುಃಖಾಂತ್ಯಗಳಾಗಿ ತಲೆದೋರುವುದನ್ನು ಕಾಣಬಹುದು. ಇದರಿಂದಲೇ ಗೌರಮ್ಮನವರು ಸಂಪ್ರದಾಯ ನಿಷ್ಠರು ಎಂಬ ನಿಲುವನ್ನು ನಾವು ತೆಗೆದುಕೊಳ್ಳಬಹುದು. ಆದರೂ ಸಂಪ್ರದಾಯವಾದಿಗಳ ತಾತ್ವಿಕ ನಿಲುವು ನಿರ್ದಿಷ್ಟ ನೆಲೆಯ ವಿನ್ಯಾಸದಲ್ಲಿ ಕಲಾತ್ಮಕವಾಗಿ ಚಿತ್ರಿಸಿರುವುದನ್ನು ಇವರ ಬರಹದಲ್ಲಿ ನೋಡಬಹುದು. ಹೀಗೆ ಸಮಾಜದೊಡನೆ ತೊಳಲಾಡುವ ಸದಾ ಚಡಪಡಿಸುತ್ತ, ತಮ್ಮ ತನದ ಉಳಿವಿಗಾಗಿ ಪ್ರಯತ್ನಿಸಿ ಎಲ್ಲಾ ಮಾರ್ಗಗಳ ಕಡೆ ಕಣ್ ತಿರುಗಿಸುವುದನ್ನು ನಾವು ಗೌರಮ್ಮನವರಲ್ಲಿ ಕಾಣುತ್ತೇವೆ.

## ಆಕರ ಗ್ರಂಥಗಳು :

| | | | |
|---|---|---|---|
| 125–135 | 227–244 | 68–81 | 82–88 |
| 32–38 | 39–45 | 186–204 | 108–124 |
| 245–250 | 89–97 | 61–67 | 155–165 |
| 21–31 | 219–226 | 1–20 | 98–107 |
| 166–173 | 205–218 | 139–154 | |

## ಪರಾಮರ್ಶನ ಗ್ರಂಥಗಳು

ಡಾ॥ ಗೀತಾಪ್ರಸಾದ್
ಆಧುನಿಕ ಮಹಿಳಾ ಅಭಿವ್ಯಕ್ತಿ,
ಧಾತ್ರಿ ಪುಸ್ತಕ, ಬೆಂಗಳೂರು.

ಪುಟ: 147, 148, 149, 150, 151, 152, 153, 154, 155, 156, 157, 158, 159, 160, 161, 161, 162, 163, 164, 165, 166, 167, 168, 169, 170, 171, 172, 173, 174, 175, 176, 177.

ಡಾ॥ ಗೀತಾಪ್ರಸಾದ್
ಡಾ॥ ಪ್ರಸಾದ್‌ಸ್ವಾಮಿ
ಅಸ್ಮಿತೆ, ಕಣ್ವ ಪಬ್ಲಿಕೇಷನ್ಸ್ ಪ್ರೈ.ಲಿ.
ಬೆಂಗಳೂರು. ಪುಟ–47

ಬಿ. ಟಿ. ಲಲಿತಾನಾಯಕ್
ಸ್ತ್ರೀವಾದಿ ಚಿಂತನೆ, ಸೃಜನಶೀಲ ಪ್ರತಿಕ್ರಿಯೆ
ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ,
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

## ಅಧ್ಯಾಯ – ೩.೨ ಮನೋ ವೈಜ್ಞಾನಿಕ ಹಿನ್ನೆಲೆಯಲ್ಲಿ ಗೌರಮ್ಮನ ಕಥೆಗಳು :

ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಗೌರಮ್ಮನ ಕಥೆಗಳನ್ನು ಅಧ್ಯಯನ ಮಾಡುವಾಗ ವಾಣಿಯ ಸಮಸ್ಯೆ ಮೊದಲು ನಮ್ಮ ಕಣ್ಣಿಗೆ ಬೀಳುತ್ತದೆ. ಗೌರಮ್ಮನವರು ಬರೆದಿರುವ 'ಕಂಬನಿ ಕಥಾಸಂಕಲನದ ಈ ಕತೆಯನ್ನು ನೋಡಿದಾಗ, ಹೆಸರೇ ಸೂಚಿಸುವಂತೆ ಕತೆ ಕಣ್ಣೀರಿನಲ್ಲೇ ಅಂತ್ಯಗೊಂಡರು, ವಾಣಿಗೆ ಅದು ಸಮಸ್ಯೆ ಯಾಗಿಯೇ ಉಳಿಯುತ್ತದೆ. ಕೇವಲ ವಾಣಿಮಾತ್ರ ಈ ಕತೆಯಲ್ಲಿ ಸಮಸ್ಯೆಗೆ ತೊಡಕಾಗು ವುದಿಲ್ಲ. ವಾಣಿಯಂತೆ ಇಂದು, ರತ್ನ ಮನಸ್ಸಿನ ಆವೇಗದ ತುಡಿತಕ್ಕೆ ಹೇಗೆ ಒಳಗಾಗುತ್ತಾರೆ. ಎನ್ನುವುದನ್ನು ಮನೋಜ್ಞವಾಗಿ ಇಲ್ಲಿ ಗೌರಮ್ಮನವರು ಚಿತ್ರಿಸುತ್ತಾರೆ.

ವಾಣಿಯ ಸಮಸ್ಯೆಯ ಕತೆಯ ನಾಯಕಿ ಇಂದು, ಕತೆಯು ಪ್ರಾರಂಭವಾಗುತ್ತಿದ್ದಂತೆ ಲೇಖಕಿ ಗೌರಮ್ಮನವರು ಇಂದುವನ್ನು ಈ ರೀತಿಯಾಗಿ ಪರಿಚಯಿಸುತ್ತಾರೆ. ಇಂದು ಹುಟ್ಟುವ ಮೊದಲೇ ತಂದೆಯನ್ನು, ಹುಟ್ಟಿದ ನಂತರ ತಾಯಿಯನ್ನು ಕಳೆದುಕೊಂಡು ದಾಯಾದಿಗಳ ಮನೆಯಲ್ಲಿ ಎಲ್ಲರಿಗೂ ಹೊರೆಯಾಗಿ ಬೆಳೆದವಳು. ಇಷ್ಟೇ ಸಾಲದು ಎಂಬಂತೆ ಮದುವೆಯಾಗಿ ಆರು ತಿಂಗಳಾಗುವ ಮೊದಲೇ ವೈಧವ್ಯ ಬೇರೆ ಪ್ರಾಪ್ತವಾಗಿ ಹೋಯಿತು. ಅವಳೀಗ ವಾಸಿಸುತ್ತಿರುವ "ಆ ಪುಟ್ಟ ಮನೆಯೇ ಅವಳಿಗೆ ಒಂದಾನೊಂದು ಕಾಲದಲ್ಲಿ ಮದುವೆಯಾಗಿತ್ತು ಎಂಬುದರ ಗುರುತು. ತಾನು ಬದುಕುವುದು ಅಸಂಭವ ಎಂದು ತಿಳಿದಾಗ, ಅವಳ ಗಂಡ ಅವಳ ಹೆಸರಿಗೆ ಮಾಡಿಟ್ಟಿದ್ದ ಸ್ವಲ್ಪ ಹಣವೂ ಆ ಮನೆಯೂ ಸಿಕ್ಕಿ ಇಂದುವಿನ ಜೀವನವೇನೋ ಇತರರ ಹಂಗಿಲ್ಲದೆ ಸುಸೂತ್ರವಾಗಿ ಸಾಗುವಂತಾಯಿತು"[೧]. ಇಂತ ಏಕಾಂತಮಯ ಜೀವನ ನಡೆಸುತ್ತಿದ್ದ ಇಂದುವಿನ ಬದುಕಿನಲ್ಲಿ ಇದ್ದಕ್ಕಿದಂತೆ ಬಿರುಗಾಳಿಯ ಅಬ್ಬರ ಕಾಣಿಸಿತು. ಪ್ರಶಾಂತವಾದ ಸಮುದ್ರವು ಅಲೆಗಳಿಂದ ಅಲ್ಲೋಲ ಕಲ್ಲೋಲವಾದಂತೆ ಅವಳ ನೆಮ್ಮದಿಯ ನಾಶವಾಯಿತು. ಇದು ಅವಳ ಮನಸ್ಸಿನ ಮೇಲೆ ಉಂಟಾದ ಪರಿಣಾಮ.

ಕಳೆದ ಆರು ವರ್ಷಗಳಿಂದ ಖಾಲಿ ಬಿದ್ದಿದ್ದ ಪಕ್ಕದ ಮನೆಗೆ ಒಕ್ಕಲು ಬಂದ ವೈದ್ಯ ರತ್ನ ಮತ್ತು ರತ್ನನ ಪತ್ನಿ ವಾಣಿ, ಅತ್ಯಂತ ಸಂಕೋಚ ಭಾವನೆವುಳ್ಳ ಇಂದು ಯಾರ ಸ್ನೇಹವನ್ನು ಬಯಸುತ್ತಿರಲಿಲ್ಲ. ತನ್ನ ಪಾಡಿಗೆ ತಾನು ಇರುವುದೇ ನೆಮ್ಮದಿಯ ಬದುಕು ಎಂದು ಕೊಂಡಿದ್ದಳು. ಆದರೆ ಸಮುದಾಯದಲ್ಲಿ ವಾಸಿಸುವ ನಾವು ಎಷ್ಟೇ ಏಕಾಂತದಲ್ಲಿ ಬದುಕನ್ನು ನೆಡೆಸಬೇಕು ಎಂದರೂ ಈ ಸಮುದಾಯ ನಮ್ಮನ್ನು ಬಿಡುವುದಿಲ್ಲ ಎನ್ನುವುದಕ್ಕೆ ಇಲ್ಲಿ ಇಂದುವಿನ ಜೀವನವೇ ಸಾಕ್ಷಿ.

ಇಂದುವಿನ ನೆರೆಮನೆಗೆ ಹೊಸದಾಗಿ ಒಕ್ಕಲು ಹೂಡಲು ಬಂದ ವಾಣಿ ಇಂದುವಿನ ಗೆಳತಿಯಾಗುತ್ತಾಳೆ. ಯಾರ ಸ್ನೇಹವನ್ನು ಬಯಸದ ಇಂದುವಿಗೆ ವಾಣಿಯ ವಿಷಯಕ್ಕೆ ತನ್ನಲ್ಲಿ ಮೂಡಿದ್ದ ಆದರತೆಯನ್ನು ನೋಡಿ ಆಶ್ಚರ್ಯವಾಗುತ್ತದೆ. ಹೊಸದಾಗಿ ಬಂದ ವಾಣಿಗೆ ಇಂದುವಿನ ಸ್ನೇಹ, ಆಶ್ಚರ್ಯದ ಮಾತಲ್ಲ. ಆದರೆ, ವಾಣಿಯಷ್ಟೆ ಸಹಜ ಸ್ನೇಹ ತನ್ನ ಮನಸ್ಸಿಗೆ ತಿಳಿಯದೆ, ಇಂದುವಿನಲ್ಲಿಯೂ ವಾಣಿಯ ಸ್ನೇಹ ಪ್ರತಿಬಿಂಬಿಸುವುದು ಮಾತ್ರ

---

[೧]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಪುಟ – ೧

ಇಂದುವಿಗೆ ತಿಳಿಯದ ಒಗಟಾಗುತ್ತದೆ. ಇದೇ ಪ್ರಥಮ ಬಾರಿ ಇಂದುವಿನ ಮನಸ್ಸಿನ ಮೇಲೆ ಆಗುವ ಬದಲಾವಣೆಯ ಪರಿಣಾಮ ಇಲ್ಲಿಯ ತನಕ ಇಂದು ತನ್ನ ಮನಸ್ಸನ್ನು ತಾನು ಹತೋಟಿಯಲ್ಲಿ ಇಟ್ಟುಕೊಂಡು ಅದನ್ನು ಹೇಗೆ ಬೇಕೋ ಹಾಗೆ ಬದಲಾಯಿಸುತ್ತಿದ್ದಳು. ಆದರೆ ಈಗ ಅದೆಲ್ಲವು ಪರಿಸ್ಥಿತಿಗೆ ತಕ್ಕಂತೆ ಬದಲಾಗಿ ಮನಸ್ಥಿತಿಗತಿಗಳು ಹೇಗೆ ಬದಲಾಗುತ್ತಾ ಹೋಗುತ್ತದೆಯೋ, ಹಾಗೆಯೇ ಇಂದುವಿನ ಜೀವನ ಬದಲಾಗುವ ಪರಿಣಾಮವನ್ನು ನೋಡುತ್ತೇವೆ.

ಇವರಿಬ್ಬರ ಸ್ನೇಹದ ಪರಿಚಯದಿಂದ, ರತ್ನನಿಗೆ, ಇಂದುವಿನ ವ್ಯಕ್ತಿತ್ವ ಹಂತ ಹಂತವಾಗಿ ತಿಳಿದು ಬರುತ್ತದೆ. ತಾನು ಬಯಸಿದ ಯಾವ ಗುಣಗಳು ತನ್ನ ಹೆಂಡತಿ ವಾಣಿಯಲ್ಲಿ ಕಾಣಿಸದೆ ಅದೆಲ್ಲವೂ ಇಂದುವಿನಲ್ಲಿ ಪ್ರತಿಬಿಂಬಿತವಾಗುತ್ತಿರುವುದನ್ನು ನೋಡಿದಾಗ, ರತ್ನನಿಗೆ ಬಹಳ ನಿರಾಶೆಯಾಗುತ್ತದೆ. ರತ್ನನನ್ನು ಸ್ವಭಾವತಃ ಉತ್ತಮ ವ್ಯಕ್ತಿತ್ವವುಳ್ಳವನು, ವ್ಯಕ್ತಿ ಯಾವಾಗ ಬೇರೊಂದು ಹೆಣ್ಣಿನ ಸಂಪರ್ಕ ಅವನ ಬದುಕಿನಲ್ಲಿ ಕಾಣಿಸುತ್ತದೆಯೋ ಆಗ ಮೊದಮೊದಲು ತನ್ನ ಹೆಂಡತಿಯಾದ ರತ್ನ ಇವಳ ರೀತಿ ಇದ್ದಿದ್ದರೆ ಎನ್ನುತ್ತಿದ್ದ ಚಪಲ ಮನಸ್ಸು ಕ್ರಮೇಣ ಹಂತ ಹಂತವಾಗಿ ಇಂದುವೇ ತನ್ನ ಬದುಕು ಅನ್ನಿಸುವ ಕಾಲ್ಪನಿಕ ಭಾವನೆಗಳು ಆತನ ಮನಸ್ಸಿನ ಸುತ್ತ ಆವರಿಸುತ್ತದೆ. ಆದರೆ ವಾಸ್ತವ ಪ್ರಪಂಚಕ್ಕೆ ಕಾಲಿಟ್ಟ ರತ್ನ ಕಾಲ್ಪನಿಕ ಬದುಕಿಗೂ, ವಾಸ್ತವತೆಯ ಬದುಕಿಗೂ ವ್ಯತ್ಯಾಸವನ್ನು ತಿಳಿದ, ಎಚ್ಚೆತ್ತ ಮನಸ್ಸುಳ್ಳಂತಹ ರತ್ನನೇ ಮನೋ ವೈಫಲ್ಯಕ್ಕೆ ಈಡಾಗುತ್ತಾನೆ ಎಂದರೆ, ಸಮಾಜದಲ್ಲಿ ಉಳಿದವರ ಪಾಡೇನು. ಆದರೆ, ವಾಣಿ ಮತ್ತು ಇಂದುವಿನ ಸ್ನೇಹ ಮೇಲ್ನೋಟಕ್ಕೆ ಸಹಜವಾಗಿ ಕಂಡರೂ, ಇಂದುವಿನ ಮನಸ್ಸಿನಲ್ಲಿ ಮಾತ್ರ ಅನೇಕ ಗೊಂದಲದ ಪ್ರಶ್ನೆಗಳು ಭಾವನೆಗಳಿಗೆ ಎಡೆಮಾಡಿಕೊಡುತ್ತದೆ.

ರತ್ನನಿಗೂ ಅಷ್ಟೇ ನವಪ್ರಣಯದ ಭರದಲ್ಲಿ ವಾಣಿಯ ಜನ್ಮತಃ ಉದಾಸೀನ ಪ್ರವೃತ್ತಿ. ಒಂದು ಸಮಸ್ಯೆ ಎಂದು ತಿಳಿಯದಿದ್ದರೂ ದಿನಗಳು ಕಳೆದಂತೆ ಅವನಿಗೆ 'ನನ್ನ ವಾಣಿಯು ಹೀಗೇಕೆ ? ಎಂಬ ಪ್ರಶ್ನೆ ಆತನ ಮನಸ್ಸಿನಲ್ಲಿ ಬಂದು ಹೋಗುತ್ತಿತ್ತು. ಯಾವಾಗ ಇಂತಹ ಪ್ರಶ್ನೆಗಳು ಆತನ ಮನಸ್ಸಿನಲ್ಲಿ ತಾಂಡವವಾಡುತ್ತಿತ್ತೋ ಹಾಗೆಯೇ ಅದರ ಸುಳಿಯಲ್ಲೇ ಕಾರ್ಯಕುಶಲೆಯಾದ ಇಂದು ಆತನ ಮನಸ್ಸಿನಲ್ಲಿ ಆವರಿಸುತ್ತಿದ್ದಳು. ಇಂದುವಿಗೂ ಸಹಾ ವಾಣಿಯ ಈ ಆಲಸ್ಯತನ ತಿಳಿಯದಿರಲಿಲ್ಲ. ಇಂದುವಿಗೆ ತಿಳಿದಿಲ್ಲ. ಎಂದು ಮುನ್ನೆಚ್ಚರಿಕೆ ಯಿಂದ ಮುಚ್ಚಿಡುವ ಸ್ವಭಾವ ವಾಣಿಗೂ ಇಲ್ಲ. ತನ್ನ ಮನೆಯಲ್ಲಿ ಇದೇ ಸಂಗತಿಗಳು ನಡೆಯಿತು ಎಂದು ಮುಗ್ದೆಯಾದ ವಾಣಿ ಒಂದನ್ನು ಬಿಡದೆ, ಮಕ್ಕಳು ಶಾಲೆಯ ತರಗತಿಯಲ್ಲಿ ನಡೆದ ವಿಚಾರವನ್ನು ಚಾಚು ತಪ್ಪದೆ ಅಮ್ಮನಿಗೆ ಹೇಗೆ ಹೇಳುತ್ತಾರೋ. ಅದೇ ಉತ್ಸಾಹದಲ್ಲಿ ವಾಣಿಯು ಸಹಾ ಇಂದುವಿಗೆ ಹೇಳುತ್ತಿದ್ದಳು. ಅಂತಹ ಮಕ್ಕಳ ಮನಸ್ಸಿನ ಮುಗ್ದೆ ವಾಣಿ, ಅವಳ ಉದಾಸೀನ, ಮುಗ್ದ ಮನಸ್ಸು, ಆಲಸ್ಯತನದ ಪ್ರವೃತ್ತಿ ಒಟ್ಟಾರೆ ಇದೆಲ್ಲವೂ ಸೇರಿ ಮತ್ತಷ್ಟು ರತ್ನನ ಚಂಚಲ ಮನಸ್ಸು ಇಂದುವಿನಕಡೆ ಹರಿಯಲು ಎಲ್ಲಾಕಡೆಯಿಂದಲೂ ಅವಕಾಶ ಮಾಡಿಕೊಟ್ಟಿತ್ತು ವಿನಃ ಅದರಿಂದ ಬಿಡಿಸಿಕೊಂಡು ಸ್ವಚ್ಛಂದದ ಪ್ರಪಂಚಕ್ಕೆ ಬರುವ ಆಲೋಚನೆಯು ರತ್ನನ ಮನಸ್ಸಿನಲ್ಲಿ ಇರಲಿಲ್ಲವೆಂದೇ ಹೇಳಬಹುದು. ಇದರ ಪರಿಣಾಮದಿಂದಲೇ, ಇಂದುವು ಸಹ ರತ್ನನ ಮನಸ್ಸಿನ ಭಾವನೆಗೆ ಹತ್ತಿರವಾಗುತ್ತಿರುವ

ದೃಶ್ಯವನ್ನು ನಾವಿಲ್ಲಿ ನೋಡುತ್ತೇವೆ.

ವಾಣಿಯ ಉದಾಸೀನತೆಯ ವ್ಯಕ್ತಿತ್ವದಿಂದ ಪ್ರತಿದಿನ ಉಪವಾಸ ನಡೆಸುವ ರತ್ನ ಒಂದು ದಿನ ಬಾಗಿಲ ಸಂದಿನಿಂದ ದಣಿದು ಬೆಂಡಾಗಿದ್ದ ರತ್ನನನ್ನು ನೋಡುತ್ತಿದ್ದಂತೆ ಇಂದುವಿನ ಮನಸ್ಸಿನಲ್ಲಿ ಎಂದೂ ಇಲ್ಲದ ಭಾವನೆಗಳು ಮನೆ ಮಾಡತೊಡಗುತ್ತಿತ್ತು. ಎಂದೂ ಇಲ್ಲದ್ದು ಏನೇನೋ ಯೋಚನೆಗಳು ಒಂದರ ಮೇಲೊಂದಾಗಿ ಹರಿಯತೊಡಗಿತ್ತು. ಪ್ರಶಾಂತವಾಗಿದ್ದ ಮನಸ್ಸಿನಲ್ಲಿ ಭಾವನೆಗಳ ಅಬ್ಬರ ಕಾಣಿಸಿತು. ಇಂದುವಿನ ಕಣ್ಣೀರ ಕಾಲುವೆ ಹೊಡೆಯಿತು. ಇಷ್ಟು ದಿನ ಯಾವ ಭಾವನೆಗಳಿಗೂ ಸಿಲುಕದ ನೆಮ್ಮದಿಯ ಬದುಕನ್ನು ನಡೆಸುತ್ತಿದ್ದ ಇಂದು, ಈಗ ಅಯ್ಯೋ ದೇವರೇ ಎಂದು ಉಕ್ಕುತ್ತಿದ್ದ ಕಣ್ಣೀರನ್ನು ತನ್ನ ಸೆರಗಿನಿಂದ ಒರಸಿಕೊಂಡು ಒಳಗೆ ಬಂದಳು. ಇಲ್ಲಿ ಇಂದುವಿನ ಅಂತರ್ಯದಲ್ಲಿ ನಡೆಯುವ ಭಾವುಕತೆಯ ಸಂಘರ್ಷವನ್ನು ತಿಳಿದಾಗ ಮಾತ್ರ ಇಂದುವಿನ ಮಾನಸಿಕ ಸ್ಥಿತಿ ನಮ್ಮ ಅರಿವಿಗೆ ಬರುತ್ತದೆ. ಆದರೆ ಸಮಾಜ ಇದನ್ನು ಆಳವಾಗಿ, ತೀಕ್ಷ್ಣವಾಗಿ ಪರಿಗಣಿಸದೆ 'ಅಸಭ್ಯತನದ ಹೆಣ್ಣು' ಎಂದು ತೀರ್ಮಾನಿಸುತ್ತದೆ. "ಯಾವುದರ ಬೆಲೆಯು ಗೊತ್ತಿರದ ವಾಣಿಗೆ ಎಲ್ಲವನ್ನು ಕೊಟ್ಟ ದೇವರು ತನ್ನ ಜೀವನವನ್ನೇಕೆ ಅಂಧಕಾರಮಯವನ್ನಾಗಿ ಮಾಡಿದ"? ಎಂದು ಯೋಚಿಸುತ್ತಾಳೆ. ಇಲ್ಲಿಯ ತನಕ ಯಾವ ಕೊರತೆಯೂ ಇಲ್ಲದೆ ಸಂತೃಪ್ತಿಯ ಬದುಕನ್ನು ನಡೆಸುತ್ತಿದ್ದ ಇಂದು, ಸಮಾಜದ ಸಾಮಿಪ್ಯವೇ ದೊರೆಯದೆ ಈಗ ಭಗವಂತನನ್ನೇ ಪ್ರಶ್ನಿಸುವ ಮಟ್ಟಕ್ಕೆ ಬಂದು ತನಗೂ ವಾಣಿಗೂ ಇರುವ ಬದುಕಿನ ಹೋಲಿಕೆಯನ್ನು ತೆಗೆದುಕೊಂಡು ಮಾನಸಿಕವಾಗಿ ನರಳುವ, ಇಂದುವಿನ ವಾಸ್ತವದ ತೊಳಲಾಟದ ಬದುಕನ್ನು ನೋಡುತ್ತೇವೆ. ಇದರ ನಡುವೆ ತನ್ನ ಜೀವನದಲ್ಲಿಯೂ ಒಂದು ದೊಡ್ಡ ಅಭಾವವಿದೆ ಎಂಬ ಭಾವನೆಗಳು ಅಂತರಂಗದಲ್ಲಿ ಏಳಲು ಪ್ರಾರಂಭವಾಯಿತು.

"ವಾಣಿಯ ಅಳುಮೋರೆಯ ನೋಡಿ ಸ್ವಲ್ಪ ಸಂತೋಷ ಹೆಚ್ಚಾಯಿತು ದೇವರು ತನಗೊಬ್ಬಳಿಗೆಂದೇ ದು:ಖವನ್ನು ಮೀಸಲಾಗಿರಿಸಬೇಕೇಕೆ? ವಾಣಿಗೂ ಅದರ ರುಚಿ ಕೊಂಚ ಗೊತ್ತಾಗಲಿ ಎಂದು ತನ್ನ ಮನದಲ್ಲೇ ಹೇಳಿದಳು". ಅದರ ಆಲೋಚನೆಯ ಹಿಂದೆಯೇ ಅವಳ ಸದ್ಗುಣಗಳು ತನ್ನನ್ನು ತಾನೆ ಹೀಯಾಳಿಸಿಕೊಂಡಿತ್ತು ತಾನು ಈ ರೀತಿ ಬಯಸುವುದು ಸ್ವಾರ್ಥವೆಂದು ತನ್ನ ದು:ಖಕ್ಕೆ ವಾಣಿ ಕಾರಣಕರ್ತೆಯಲ್ಲ ಎಂದು ಇಂದುವಿಗೆ ತಿಳಿದರೂ, ಆದಿನ ವಾಣಿಯ ಬಾಡಿದ ಮುಖವು ಅವಳಲ್ಲಿ ಕರುಣೆಯನ್ನು ಹುಟ್ಟಿಸಲಿಲ್ಲ. ಒಂದು ತರದ ಆನಂದವೇ ಆಯ್ತು. ಇಂತಹ ನೀಚಭಾವನೆಗಳಿಗಾಗಿ ಇಂದುವಿಗೆ ನಾಚಿಕೆಯು ಆಯ್ತು. ಇಂತಹ ಕೆಟ್ಟಭಾವನೆಗಳಿಗೆ ಎಡೆಕೊಡಬಾರದು, ತನ್ನ ತಪ್ಪಿನ ಪ್ರಾಯಶ್ಚಿತಕ್ಕೆ ವಾಣಿಯನ್ನು ಸಮಾಧಾನಗೊಳಿಸಿ ಅವಳ ಎಲ್ಲ ಕೆಲಸಕ್ಕೆ ನೆರವಾದಳು. ಮನೋವಿಕಲ್ಪಕ್ಕೆ ಬಲಿಯಾದ ಹೆಣ್ಣು ಎಷ್ಟು ಸುಸಂಸ್ಕೃತ ಬದುಕನ್ನು ನಡೆಸುತ್ತಿದ್ದರೂ, ಆ ಕ್ಷಣದಲ್ಲಿ ಅವರು ಆಲೋಚಿಸುವ ಮಟ್ಟ ಸಮಾಜದಲ್ಲಿ ಅವರ ಸ್ಥಾನ ಮಾನ ಹೇಗೆ ಬದಲಾಗುತ್ತದೆ ಎಂಬುದನ್ನು ಇಂದುವಿನ ಮುಖಾಂತರ ತಿಳಿಯಬಹುದು. ನೂತನ ರೂಪದಿಂದ ಕಂಗೊಳಿಸುತ್ತಿರುವ ತನ್ನ ಮನೆ ಹಾಗೂ ಬಡಿಸುತ್ತಿದ್ದ ವಾಣಿಯ ಅಡಿಗೆಯ ಊಟ ಮಾಡುತ್ತಲೇ, ಇದು ನೆರೆಮನೆಯ

---

ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಪುಟ – ೮

ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಪುಟ – ೯

ಇಂದುವಿನ ಕೃತಿ ಎಂದು ತಿಳಿಯುತ್ತದೆ. ಆದಿನ ವಾಣಿ ಆಡಿದ ಎಲ್ಲ ಮಾತುಗಳು ಅವನಿಗೆ ಬಲು ದೂರದಿಂದ ಕೇಳುತ್ತದೆ. ಅವನ ಅನ್ಯಮನಸ್ಕತೆಯನ್ನು ಕಂಡು ವಾಣಿ ಬೆಳಗಿನಿಂದಲೂ ಊಟವಿಲ್ಲದೆ ಬಹಳ ದಣಿದಿರುವುದರಿಂದ ಎಂದು ಮನದಲ್ಲಿಯೇ ಹಲುಬಿದಳು ಒಂದೇ ಸಮಯದಲ್ಲಿ ಮೂರು ಪಾತ್ರಗಳಲ್ಲಿಯೂ ಎಂತಹ ಕೋಲಾಹಲ ನಡೆಯುತ್ತದೆ. ಅವರ ಆಂತರ್ಯದಲ್ಲಿ ದ್ವಂದ್ವ ಮನಸ್ಥಿತಿಗಳು ಹೇಗೆ ಪ್ರತಿಬಿಂಬಿಸುತ್ತವೆ ಎಂಬುದನ್ನು ರತ್ನ, ವಾಣಿ, ಇಂದುವಿನಿಂದ ಮನಗಾಣಬಹುದು.

[೧]"ಹೌದು ; ಇಂದು ಅಳುತ್ತಿದ್ದಳು ಬಿಕ್ಕಿ ಬಿಕ್ಕಿ ಚಿಕ್ಕಮಕ್ಕಳಂತೆ ಅಳುತ್ತಿದ್ದಳು ತಲೆನೋವಿನ ಬಾಧೆಗಾಗಿ ತಾನಳುವುದಿಲ್ಲವೆಂದು ಗೊತ್ತಿದ್ದರೂ, ಅಳುವ ಕಾರಣವು ಏನೆಂದು ಅವಳಿಗೆ ತಿಳಿಯದಷ್ಟು ಸೂಕ್ಷ್ಮವಾಗಿತ್ತು"[೧]. ರತ್ನನಿಗೂ ಅಷ್ಟೇ ಚಿಕ್ಕಮಕ್ಕಳನ್ನು ಸಂತೈಸುವಂತೆ ಅವಳನ್ನು ಸಂತೈಸಿ ಸಮಾಧಾನ ಪಡಿಸಬೇಕೆಂದು ತೋರಿದರು. ಆದರೆ ಪಕ್ಕದಲ್ಲಿ ನಿಂತ ವಾಣಿಯು ನಾಲ್ಕಾರು ವರ್ಷಗಳ ರೋಗಿಗಳನ್ನು ನೋಡಿದ್ದ ಅಭ್ಯಾಸ ಬಲವೂ ಅವನನ್ನು ಬದುಕಿಸಿದವು. ಹೀಗೆ ಸಮಾಜದಲ್ಲಿ ಒಂದು ಉನ್ನತ ಮಟ್ಟದಲ್ಲಿ ವಾಸಿಸುವ ರತ್ನನ ಮನಸ್ಥಿತಿಯೇ ಈ ರೀತಿಯಾದರೆ ಉಳಿದ ವರ್ಗದವರ ಪಾಡೇನು ಎಂಬುದನ್ನು ಚರ್ಚಿಸಬಹುದು.

ಮತ್ತೇ ರತ್ನನಿಗೂ ಸದಾ ಇವಳನ್ನು ಯೋಚಿಸುತ್ತಿದ್ದುದರಿಂದಲೇನೋ ಅವಳ ಮನವು ಇಚ್ಛೆಗೆ ವಿರೋಧವಾಗಿ ರತ್ನನ ಕಡೆ ಒಲಿಯತೊಡಗಿತ್ತು. ಹೀಗೆ ಇಂದುವಿನ ಮನಸ್ಸು ರತ್ನನ ಕಡೆ ಜಾರತೊಡಗಿದಾಗಲೇ ಅದೇ ಸಂದರ್ಭದಲ್ಲೇ ವಾಣಿಯು ತವರು ಮನೆಗೆ ಹೋಗಬೇಕಾಗಿ ಬರುವುದು. ವಾಣಿಯನ್ನು ತವರಿಗೆ ಕಳಿಸಿದ ರತ್ನ ತನ್ನ ವೃತ್ತಿಯಲ್ಲಿ ತೊಡಗಿಸಿಕೊಂಡರು ಆ ಕರ್ತವ್ಯದ ವೇಳೆಯಲ್ಲೇ ಇಂದುವಿನ ನೆನಪಿನಿಂದ ಪಾರಾಗಲು ಅವನಿಗೆ ಸಾಧ್ಯವೇ ಆಗುತ್ತಿರಲಿಲ್ಲ. ಇಂದುವು ಸಹಾ ಬಲವಂತವಾಗಿ ರತ್ನನ ಕಣ್ಣಿಗೆ ಬೀಳದಂತೆ ಎಚ್ಚರ ವಹಿಸುತ್ತಾಳೆ. ಆದರೂ [೨]"ಅವನನ್ನು ಪ್ರೀತಿಸದಿರುವುದು ಅವಳ ಶಕ್ತಿಗೆ ಮೀರಿದ ಮಾತಾಗಿತ್ತು"[೨] ಇವರಿಬ್ಬರು ಎಷ್ಟೇ ಎಚ್ಚೆತ್ತ ಪ್ರಜ್ಞೆಯುಳ್ಳವರಾದರು ಭಾವನೆಯಲ್ಲಿ ಹರಿದೋಡುವ ಮನಸ್ಸನ್ನು ಹಿಡಿದಿಟ್ಟುಕೊಳ್ಳುವುದು ಎಷ್ಟು ತ್ರಾಸದಾಯಕವಾದದ್ದು ಎಂಬುದನ್ನು ಮಾನಸಿಕವಾದ ತೊಳಲಾಟದಲ್ಲಿದ್ದ ಇಂದು ಮತ್ತು ರತ್ನನ ಮುಖಾಂತರ ನಾವು ಮನಗಾಣಬಹುದು.

ಆಕಸ್ಮಿಕವಾಗಿ ಒಂದು ದಿನ ರತ್ನನನ್ನು ಭೇಟಿಯಾಗಬೇಕಾಗಿ ಬಂದಾಗ ಹೇಗಾದರೂ ಮಾಡಿ ತನ್ನ ಮನಸ್ಸಿನಲ್ಲಿ ಇರುವುದನ್ನು ಮರೆಮಾಚಬೇಕೆಂದು ಎಷ್ಟೇ ಪ್ರಯತ್ನಿಸಿದರೂ ಅವಳ ಕಣ್ಣುಗಳು ಮಾತ್ರ ಹೃದಯದ ಭಾವನೆಗಳನ್ನು ಮುಚ್ಚಿಟ್ಟು ಕೊಂಡಿರಲಿಲ್ಲ.

ಕೊನೆಗೊಂದು ದಿನ ರತ್ನನ ಕಾಗದ ಇಂದುವಿನ ಕೈ ಸೇರಿದಾಗ ಬಹಳ ಹೊತ್ತು ಒಡೆಯದೆ ಅದನ್ನು ತನ್ನ ಕೈಯಲ್ಲೆ ಇಟ್ಟುಕೊಂಡು ಆಲೋಚಿಸುತ್ತ ಕುಳಿತಿದ್ದಳು. ಬಹಳ

---

[೧]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂ. ಪುಟ-೧೪

[೨]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂ. ಪುಟ-೧೭

ಹೊತ್ತಿನವರೆಗೆ ಅಲ್ಲಿಂದ ಮೇಲೆ ಏಳಲೇ ಇಲ್ಲ ಆದರೆ ಕಾಗದ ಮಾತ್ರ ಅವಳ ಕಣ್ಣೀರಿನ ಅಭಿಷೇಕಕ್ಕೆ ತುತ್ತಾಗಿತ್ತು. ಅಷ್ಟಕ್ಕೆ ಸುಮ್ಮನಾಗದೆ ಆ ಕಾಗದವನ್ನು ಹಿಡಿದುಕೊಂಡು ಅಡಿಗೆ ಮನೆಗೆ ಹೋಗಿ ಒಲೆಯಲ್ಲಿ ಉರಿಯುತ್ತಿದ್ದ ಬೆಂಕಿಯಲ್ಲಿ ಹಾಕಿದಳು. ಅದು ಬೂದಿಯಾಗಿ ಹೋಯಿತು.

ಇಲ್ಲಿ ಬೂದಿಯಾಗಿದ್ದು ಕೇವಲ ರತ್ನನ ಕಾಗದ ಮಾತ್ರವಲ್ಲ, ಇಂದುವಿನ ಮನಸ್ಸಿನಲ್ಲಿ ಮೊಳಕೆಯೊಡೆದು ಬೆಳೆದು ಬಂದ ರತ್ನನ ಕಡೆಗಿದ್ದ ತನ್ನ ಒಲವಿನ ಎಲ್ಲ ಭಾವನೆಗಳು ಒಂದೇ ಸಾರಿ ಅಗ್ನಿಗೆ ಆಹುತಿಯಾಯಿತು. ಏಕೆಂದರೆ ಗೌರಮ್ಮನವರೇ ಹೇಳಿರುವಾಗೆ ಇಂದು ಸ್ವಭಾವತಃ ಪಾಪಭೀರು ಸಮಾಜದ ನೀತಿನಿಯಮವನ್ನೇ ಭಗವಂತನ ನಿಯಮ ಎಂದು ತಿಳಿದು ಬೆಳೆದವಳು. ಹೀಗೆ ಮೊದಲಿನಿಂದಲೂ ಸಮಾಜದ ಕಟ್ಟು – ಕಟ್ಟಳೆಗಳಿಗೆ ಹೆದರಿದ ಇಂದು ವಯೋ ಸಹಜವಾದ ಕಾಮನೆಯ ಭಾವನೆಗಳನ್ನು ಅಗ್ನಿಗೆ ಆಹುತಿ ಮಾಡಿ ತಾನು ಮೊದಲಿನಿಂದಲೂ ಬಹಳ ಪ್ರೀತಿಸುತ್ತಿದ್ದ ತನ್ನ ಗಂಡ ಸಾಯುವುದಕ್ಕೆ ಮೊದಲು ಯಾರ ಹಂಗಿಗೂ ಆಶ್ರಯಕ್ಕೂ ಈಡಾಗಬಾರದು ಎಂದು, ಅವಳ ಹೆಸರಿಗೆ ಮಾಡಿದ ಪ್ರೀತಿಯ ಮನೆಯನ್ನು ತೊರೆದು ಸದಾಕಾಲ ಕಿರುಕುಳ ಚಿತ್ರಹಿಂಸೆಯನ್ನು ಕೊಡುತ್ತಿದ್ದ ತನ್ನ ದಾಯಾದಿಗಳ ಆಶ್ರಯಕ್ಕೆ ತೆರಳುವ ಮುಖಾಂತರ ತನ್ನ ಸಮಸ್ಯೆಗೆ ಪರಿಹಾರ ಕಂಡುಕೊಂಡಳು. ಅಷ್ಟಕ್ಕೆ ಇಂದು ತನ್ನ ಸಮಸ್ಯೆಯಿಂದ ಪಾರಾದಳು ಎಂದಲ್ಲ. ಮೊದಲಿನ ಸಮಸ್ಯೆಗೆ ಮತ್ತೆ ಈಡಾದಳು. ಆದರೆ ವಾಣಿಗೆ ಮಾತ್ರ ಇದರ ಪರಿವೇ ತಿಳಿಯದೇ ಹೋದಳು. ತಿಳಿದಿದ್ದ ರತ್ನನನ್ನು ವಿಚಾರ ತಿಳಿಸದ ಕಾರಣ ವಾಣಿಗೆ ಅದು ಸಮಸ್ಯೆಯಾಗಿಯೇ ಉಳಿಯಿತು. ಒಂದು ಉತ್ತಮ ಸುಸಂಸ್ಕೃತ ಹೆಣ್ಣಿನ ಮನಸ್ಥಿತಿಯೇ ಈ ರೀತಿಯಾದರೆ ಸಮಾಜದಲ್ಲಿ ಉಳಿದ ಸ್ತ್ರೀಯರ ಸ್ಥಿತಿಗತಿಗಳೇನು ಎನ್ನುವ ಪ್ರಶ್ನೆಯೂ ಇಲ್ಲಿ ಗೌರಮ್ಮನವರಿಗೆ ಇರುವುದನ್ನು ಕಾಣುತ್ತೇವೆ.

ಗೌರಮ್ಮನವರು ಶೀರ್ಷಿಕೆಗೆ ತಕ್ಕಂತೆ ಕಥೆಯನ್ನು ಬರೆದು ಅಂತ್ಯಗೊಳಿಸಿದರು ಎಂದು ಮೇಲ್ನೋಟಕ್ಕೆ ತಿಳಿದರೂ, ಕಥೆಯ ಆಳಕ್ಕೆ ಇಳಿದಂತೆಲ್ಲಾ ಇದೊಂದು ಮನೋ ವಿಶ್ಲೇಷಣಾತ್ಮಕ ಕತೆ ಎನ್ನುವುದರ ಜೊತೆಗೆ, ಬಾಲ ವಿಧವೆ ತನ್ನ ಬದುಕಿನಲ್ಲಿ ಎಷ್ಟೆಲ್ಲ ಕಷ್ಟ ಕಾರ್ಪಣ್ಯಗಳನ್ನು ಕಾಣಬೇಕಾಗುತ್ತದೆ,. ಎಂದು ಹೇಳಿ, ಇದು ಸನಾತನ ಹಿಂದೂ ಧರ್ಮದ ನಿಯಮ ಎಂದು ಹೇಳಿದರು. ನಮ್ಮ ಹಿರಿಯರ ತಪ್ಪು ಕಲ್ಪನೆಯ ನಿರ್ಧಾರದ ಪ್ರತಿಫಲವೇ ಇಂದುವಿನ ಪಾತ್ರ ಎಂದು ತೋರಿಸುತ್ತಾರೆ. ಮನುಷ್ಯತ್ವದ ನೆಲೆಯಲ್ಲಿ ನಿಂತು ಈ ಕಥೆಯನ್ನು ಪರಿಗಣಿಸುವ ಚಾತುರ್ಯ ಗೌರಮ್ಮನವರದು ಎಂದು ಹೇಳಬಹುದು.

ಇಲ್ಲಿ ಇಂದುವೇ ಆಗಲಿ ರತ್ನನೇ ಆಗಲಿ ತಮ್ಮ ಮನಸ್ಸಿನಲ್ಲಿ ಏಳುವ ಎಲ್ಲ ಭಾವನೆಗಳಿಗೂ ಅವರೇ ಉತ್ತರವನ್ನು ಪಡೆದುಕೊಳ್ಳಬೇಕೆ ಹೊರತು, ಸಮಾಜದಲ್ಲಿ ಇತರರ ಹತ್ತಿರ ಅದಕ್ಕೆ ಪರಿಹಾರವನ್ನು ಕೇಳುವ ಸಂದರ್ಭ ಸನ್ನಿವೇಶಗಳು ಇರುತ್ತಿರಲಿಲ್ಲ. ಕಾರಣ ಅಂತಹ ಪ್ರಶ್ನೆಗಳು ಅವರ ಮನಸ್ಸಿನಾಳಕ್ಕೆ ಬಿಂಬಿಸುತ್ತಿದ್ದವು. ತಮ್ಮ ಮನಸ್ಸಿನಲ್ಲಿ ಬುಗಿಲೇಳುತ್ತಿದ್ದ ಈ ನೀಚ ಭಾವನೆಗಳನ್ನು ತಾವೇ ನಿರ್ನಾಮ ಮಾಡಲು ಎಷ್ಟೇ ಪ್ರಯತ್ನಿಸಿದರೂ, ಅದು ಮತ್ತೇ ಮತ್ತೇ ಅವರ ಮನಸ್ಸಿನಲ್ಲಿ ಕಂಗೊಳಿಸುತ್ತಿತ್ತು. ಈ ಕಾರಣದಿಂದ ಇಂದು ಈ ಭಾವನೆಗಳನ್ನು ಇಟ್ಟುಕೊಂಡು ಬದುಕುವುದಕ್ಕೂ ಸಾಧ್ಯವಾಗದೆ, ಸಾಯುವುದಕ್ಕೂ

ಮನಸ್ಸಾಗದೆ, ಅವಳು ರತ್ನನ ಬಗೆಗಿಂದ ಎಲ್ಲಾ ಭಾವನೆಗಳಿಗೆ ಒಂದು ಅಂತ್ಯವನ್ನು ಹಾಡಿ ಮತ್ತೇ ತನ್ನ ಹಳೆಯ (ಪೂರ್ವ) ಬದುಕಿಗೆ ಕಾಲಿರಿಸಿದ್ದಳು. ಆದರೆ ಇಲ್ಲಿ ರತ್ನ ಇಂದುವಿನ ಜೀವನದ ಮಧ್ಯದಲ್ಲಿ ಕಾಣಿಸಿಕೊಂಡರೂ ಮೇಲ್ನೋಟಕ್ಕೆ ಅವನ ಜೀವನದ ಅಂತ್ಯದವರೆಗೂ ಯಾವ ಬದಲಾವಣೆಯೂ ಆಗದೆ ಮೊದಲಿನ ರತ್ನನಾಗಿ ಸಮಾಜದಲ್ಲಿ ಉಳಿಯುತ್ತಾನೆ. ಆದರೆ ಇಂದುವಿಗೆ ಮಾತ್ರ ಅವಳ ಮೊದಲ ನೆಮ್ಮದಿಯ ಜೀವನಹೋಗಿ ದಾಯಾದಿಗಳ ಮಡಿಲಲ್ಲಿ ಕಿರುಕುಳದ ನೆರಳಿನಲ್ಲಿ ಬದುಕುವ ವ್ಯವಸ್ಥೆ ಮತ್ತೆ ಕಾಣಿಸುತ್ತದೆ. ಆದ್ದರಿಂದಲೇ ಹೇಳುವುದು ಸಮಾಜದಲ್ಲಿ ಎಲ್ಲಿಂದ ಎಲ್ಲಿಯವರೆಗೂ ಹೋದರು ಹೆಣ್ಣಿನ ದುರಂತವೇ ಕಾಣುತ್ತೇವೆ. ಸಮಾಜದ ಪುರುಷನೇ ಹೆಣ್ಣಿನ ಶೋಷಣೆಯ ಕೇಂದ್ರ ಬಿಂದು. ಪುರುಷನ ಸ್ವಾರ್ಥಕ್ಕೆ ಮಹಿಳೆ ಹೇಗೆ ಬಲಿಯಾಗುತ್ತಾಳೆ ಎಂಬುದನ್ನು ಇಂದುವಿನ ಪಾತ್ರದ ಜೊತೆಗೆ ವಾಣಿಯನ್ನು (ಸಹಾ ಅಲಲ್ಲಿ) ನೋಡಬಹುದು ಹೀಗೆ ಸ್ತ್ರೀ ಮತ್ತು ಪುರುಷರ ನಡುವೆ ಇರುವ ತಾರತಮ್ಯ ಭಾವನೆಗಳು ಹೇಗೆ ಈ ಪಾತ್ರಗಳ ಮೇಲೆ ದುರಂತ ಪರಿಣಾಮ ಬೀರುತ್ತದೆ ಎಂಬುದನ್ನು ಈ ಕಥೆಯಲ್ಲಿ ಕಾಣಬಹುದು. ಇದರ ಜೊತೆಗೆ ಬಾಲ್ಯವಿವಾಹಕ್ಕೆ ತುತ್ತಾದ ಹೆಣ್ಣು, ಬಾಲ ವಿಧವೆಯಾಗಿ ಸಮಾಜದಲ್ಲಿ ಏನೆಲ್ಲಾ ಪರಿಸ್ಥಿತಿಯನ್ನು ಎದುರಿಸಬೇಕೆಂದು ಗೌರಮ್ಮನವರು ಈ ಕಥೆಯಲ್ಲಿ ಚಿತ್ರಿಸಿದ್ದಾರೆ.

'ಸುಳ್ಳು ಸ್ವಪ್ನ' ಈ ಕತೆಯ ನಾಯಕಿ ಸರಸಿ, ಸರಸಿ ತಾಯಿ ಇಲ್ಲದ ತಬ್ಬಲಿ, ಅಕ್ಕ ಮತ್ತು ತಂದೆಯ ಪ್ರೀತಿಯ ನೆರಳಿನಲ್ಲಿ ಬೆಳೆದ ಹುಡುಗಿ. ಸರಸಿ ಪ್ರಾಯಕ್ಕೆ ಬರುವಾಗಲೇ ಯುವಕನೊಬ್ಬನ ಪ್ರೇಮ ಪಾಶದಲ್ಲಿ ಸಿಲುಕಿ ನರಳುವ ಮನಸ್ಸಿನ ವೇದನೆಯನ್ನು ನೋಡುತ್ತೇವೆ. ತನ್ನ ಪ್ರೀತಿಯ ವಿಚಾರವನ್ನು ಅಕ್ಕನ ಬಳಿಯಾಗಲಿ ತಂದೆಯ ಹತ್ತಿರವಾಗಲಿ ಹೇಳುವುದಕ್ಕೆ ಸಾಧ್ಯವಾಗದೇ ಮನಸ್ಸಿನ ಗೊಂದಲದಲ್ಲಿ ಮುಳುಗಿ, ಚಿಂತನೆಯ ಲೋಕದಲ್ಲಿ ತೇಲುವ ಸರಸಿಯನ್ನು ಕಾಣುತ್ತೇವೆ. ತಾನು ಇಷ್ಟಪಟ್ಟ ಯುವಕನೊಂದಿಗೆ ಕಳೆದ ಸಮಯ, ಮಾತುಗಳನ್ನು ಮೆಲುಕುಹಾಕುತ್ತ ಮನದಲ್ಲೇ ಮಂಡಿಗೆ ತಿನ್ನುವ ಸರಸಿಯ ಮಾನಸಿಕ ಗೊಂದಲವನ್ನು ನೋಡುತ್ತೇವೆ. ಇಲ್ಲಿ ಸರಸಿಯ ತಂದೆ ಸರಸಿಯ ವಿವಾಹದ ವಿಚಾರಕ್ಕಾಗಿ ವರನನ್ನು ನೋಡುತ್ತಾರೆ. ಆದರೆ ಸರಸಿಗೆ ಆ ವಿಚಾರ ನೆನದರೇ ಮನಸ್ಸಿಗೆ ಎಂತಹ ಕಹಿಯ ಅನುಭವವನ್ನು ನೀಡುತ್ತದೆ ಎಂದು ಅವಳು ಹೇಳುವ ಮಾತುಗಳಿವೆ ನಾವು ತಿಳಿಯಬಹುದು.

[೬]"ಮದುವೆ'! ಮದುವೆಯೆಂದರೆ ಎಷ್ಟು ಮಂದಿ ಸಂತೋಷದಿಂದ ಹಿಗ್ಗುವರು ಸುಖದ ಹೆದ್ದಾರಿ ಮದುವೆಯಂತೆ ! ನಿಜವೇ? ತಾವು ಪ್ರೀತಿಸುವವರನ್ನು ಪಡೆದ ವಧುಗಳಿಗೆ ನಿಜವಿರಬಹುದು ನನಗೆ_ ಅಂದರೆ ನನಗೆ! ಮದುವೆಯೆಂದರೆ ಸಾಯುವುದಕ್ಕಿಂತಲೂ ಕಷ್ಟವಾಗಿ ತೋರುವುದೇಕೆ? ಯಾರೊಡನೆ ಕೇಳಲಿ? ಕೇಳಿದರೂ ಹೇಳುವವರಾರು? ದೇವರನ್ನು ಬೇಡಲೇ? ದೇವರಿದ್ದರಲ್ಲವೇ ಬೇಡುವುದು?....."[೬] ಇಲ್ಲಿ ಸರಸಿ ವೈಯಕ್ತಿಕ ವಿಚಾರವನ್ನು ಯಾರಲ್ಲೂ ಪ್ರಸ್ತಾಪ ಮಾಡದೆ ಅದಕ್ಕೆ ದಿನಚರಿಯ ಮೂಲಕ ಮೊರೆ ಹೋಗುತ್ತಾಳೆ. 'ಮನದಾಳದ ಭಾವನೆಗಳನ್ನು ದಿನಚರಿಯಲ್ಲಿ ಪ್ರತಿಬಿಂಭಿಸುತ್ತಾಳೆ. ' ಇದು ಖಾಸಗಿಯಾದ ವಿಚಾರವಾದರು ಸ್ತ್ರೀ ಮತ್ತು ಪುರುಷನಿಂದ ಉದ್ಭವಿಸಿದ ಸಮಸ್ಯೆಗಳು. ಕೆಲವೊಮ್ಮೆ ಸಾಮಾಜಿಕ ಆಯಾಮವನ್ನು ಪಡೆದು ಬಿಡಬಹುದು.

ಸರಸಿಯ ಮದುವೆ ಬೇರೊಬ್ಬನೊಂದಿಗೆ ನಿಶ್ಚಯವಾಗಿರುವ ವಿಷಯ ತಿಳಿಯದೆ ಆಕೆಯ ಪ್ರಿಯತಮ ತಾನು ಬರೆಯುವ ಪತ್ರಕ್ಕೆ ನಿಮ್ಮ ಉತ್ತರವೇ ಇಲ್ಲವಲ್ಲ ಎಂದು ಬರೆದರೆ ಅದಕ್ಕೆ ಸತ್ಯಾಂಶವನ್ನು ತೋರಿಸುವುದಕ್ಕೆ ಸಾಧ್ಯವಾಗದೆ, ತನ್ನ ಮೇಲೆ ತಾನೆ ಜಿಗುಪ್ಸೆ ಹೊಂದುವ ಸರಸಿಯನ್ನು ನಾವಿಲ್ಲಿ ಕಾಣುತ್ತೇವೆ. ಅವಳ ಅಂತರಾಳದಲ್ಲಿ ತನಗೆ ತಾನೆ ನಿಂದಿಸಿಕೊಳ್ಳುವ ಸಂದರ್ಭವನ್ನು ನಾವಿಲ್ಲಿ ಕಾಣಬಹುದು. [೭]"ಹೌದು ನಾನು ಕ್ರೂರಿ. ಅಣ್ಣನು ನನ್ನ ಮೇಲೆ ನೆಡೆಯಿಸಿದ ಕ್ರೂರತನದ ಫಲವಾಗಿ ನಾನವನಿಗೆ ಕ್ರೂರಿ..... ಇದೀಗ ಇಂದಿನ ನ್ಯಾಯ ಏನು ಮಾಡಲಿ? ಏನೆಂದು ಬರೆಯಲಿ? ಬರೆಯದೆ ಇರಲೆ"[೭].... ಹೀಗೆ ಮನಸ್ಸಿನಾಳದಲ್ಲಿ ಹಲವಾರು ಪ್ರಶ್ನೆಗಳು ಬುಗಿಲೇಳುತ್ತದೆ. ಯಾವ ಪ್ರಶ್ನೆಗಳಿಗೂ ಸರಸಿಯ ಬಳಿಯಲ್ಲಿ ಉತ್ತರವಿಲ್ಲ. ತನ್ನ ಜೀವನದ ಪ್ರಮುಖ ಘಟ್ಟದ ನಿರ್ಧಾರವನ್ನು ತಾನು ತೆಗೆದುಕೊಳ್ಳಲು ಅಸಮರ್ಪಕಳಾಗಿರುವುದನ್ನು ನಾವು ಇಲ್ಲಿ ಕಾಣುತ್ತೇವೆ. ಈ ದ್ವಂಧ್ವದಲ್ಲಿ ಮುಳುಗಿರುವ ಅವಳ ಮನಸ್ಸಿನ ಸ್ಥಿತಿಯನ್ನು ನಾವಿಲ್ಲಿ ಕಾಣಬಹುದು. "ನಾನೇಕೆ ಸಾಯುವುದಿಲ್ಲ? ಬಾವಿಗೆ ಹಾರಲೆ? ಹಾರಲಾರೆ.... ನನ್ನನ್ನು ತನ್ನ ಜೀವಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಅಕ್ಕನಿರುವಳು. ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುವ ಪತಿ ಇರುವರು"[೮]

---

[೬] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೦೩, ೧೦೪

[೭] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೦೫

ಈ ವಿಚಾರ ಹೇಳಬೇಕಾದರೆ ಮನಸ್ಸು ಎಷ್ಟು ಗೊಂದಲದ ಬೀಡಾಗಿದೆ ಎಂದು ಊಹಿಸಬಹುದು. ಇಲ್ಲಿ ಸರಸಿಗೆ ಮದುವೆಯಾದ ಗಂಡನೊಂದಿಗೆ ವ್ಯವಸ್ಥಿತವಾದ ಜೀವನವನ್ನು ನಡೆಸಲು ಸಾಧ್ಯವಾಗದೆ ಅವನಿಂದ ದೂರವಾಗಲೂ ಸಾಧ್ಯವಾಗದೆ ಹೇಗೆ ಪರಿತಪಿಸುತ್ತಾಳೆ ಎಂಬುದನ್ನು ಸರಸಿಯ ಮಾತಿನ ಮುಖಾಂತರ ತಿಳಿಯಬಹುದು. ನನ್ನ ಪತಿಗೆ [೮]"ಅಷ್ಟೊಂದು ಪ್ರೀತಿಯ ಪ್ರತಿಫಲವಾಗಿ ಕೊಡಲು ನನ್ನಲ್ಲೇನಿದೆ?.... ಇದ್ದುದನ್ನೆಲ್ಲಾ ಅವನಿಗೆ ಬಲು ದಿನಗಳ ಹಿಂದೆಯೇ ಅರ್ಪಿಸಿ ಬಿಟ್ಟಿರುವೆನು . ಇನ್ನಿರುವುದೇನು? ಆದರೆ ಯವುದು ಮುಖ್ಯವೋ ಅದು ಮಾತ್ರ ನನ್ನೆಡೆಯಲಿಲ್ಲ, ಏನು ಮಾಡಲು?.... ಸಾಯಲಾರೆ.... ಬದುಕಲಾರೆ..ಏನು ಮಾಡಲಿ?"[೮] ಎಂದು ಹೇಳುವ ಸರಸಿ ಮನದ ಭಾವನೆಯನ್ನು ಹತ್ತಿರಕ್ಕಿ, ಬದುಕಲೇಬೇಕಾದ ಅನಿವಾರ್ಯತೆಗೆ ಸಿಲುಕಿ ಬಳಲಿ, ತೊಳಲಾಡುವ ಸ್ತ್ರೀಯ ಚಿತ್ರಣವನ್ನು ನಾವಿಲ್ಲಿ ಕಾಣಬಹುದು.

ಕೊನೆಗೆ ಪ್ರಿಯತಮನಿಗೆ ನಾಳೆಯ ದಿನವೇ ಮದುವೆಯೆಂದುವಿಚಾರ ಕೇಳಿ ದುಃಖಿತಳಾಗುವುದನ್ನು ನೋಡುತ್ತೇವೆ. ಮತ್ತೆ ತನ್ನ ಮನಸ್ಸಿಗೆ ತಾನೇ ಪ್ರಶ್ನೆಗಳನ್ನು ಹಾಕಿ ಕೊಳ್ಳುವುದನ್ನು ನೋಡುತ್ತೇವೆ. ನನಗಾಗಿ ಅವನೇಕೆ ಮದುವೆಯಾಗದಿರಬೇಕು? ಹೀಗೆ ತನ್ನ ಮನಸ್ಸಿನಲ್ಲಿ ಬುಗಿಲೇಳುತ್ತಿರುವ ಪ್ರಶ್ನೆಗಳಿಗೆ ಎಷ್ಟು ಕಾರಣಗಳನ್ನು ಉತ್ತರಗಳನ್ನು ಕೊಟ್ಟರು ಸರಸಿಯ ಅಂತರಾಳದಲ್ಲಿ ಸಣ್ಣ ದನಿಯೊಂದು 'ಅಯ್ಯೋ' ಎಂದು ನರಳುವುದನ್ನು ಮಾತ್ರ ಈ ಸಂದರ್ಭದಲ್ಲಿ ನೋಡಬಹುದು. ನಂತರ ಅವಳಿಗೆ ಅವಳೇ ಸಮಾಧಾನ ಮಾಡಿಕೊಳ್ಳುತ್ತಾ [೯]"ಹೃದಯವೇ. ಸ್ವಲ್ಪ ಶಾಂತವಾಗು–ಮನಸ್ಸೇ ಉದ್ವೇಗವನ್ನು ಸಹಿಸಿಕೋ. ಅವನೊಡನೆ ಏನೆಂದು ಮಾತಾಡಲಿ. ಈಮುಖವನ್ನು ಅವನಿಗೆ ಹೇಗೆ ತೋರಿಸಲಿ?"[೯] ಎಂದು ನಾನಾ ರೀತಿಯಲ್ಲಿ ಹೃದಯಾಂತರಾಳದ ಭಾವನೆಗಳಲ್ಲಿ ನಲುಗಿ ಹೋಗುತ್ತಿರುವ ಸರಸಿಯನ್ನು ನಾವಿಲ್ಲಿ ಕಾಣುತ್ತೇವೆ.

ಕೊನೆಗೆ ನಾನು! ದುಃಖಮಯವಾದ ಪ್ರಪಂಚದಲ್ಲಿ ನಾನೇಕೆ ಸುಖವನ್ನು ಬಯಸಬೇಕು ? ಸುಖ ಪಡೆಯಲು ನನಗಾವ ಅಧಿಕಾರವೂ ಇಲ್ಲ . ಆದರೆ ದೇವಾ ! ನನಗೆ ಜ್ಞಾಪಕವನ್ನು ಮಾತ್ರ ಕೊಡಬೇಡ ಎಂದು ಹೇಳುವುದರ ಮುಖಾಂತರ ನನ್ನನ್ನು ಪಾರುಮಾಡು.... ನನಗೇಕೆ ಹುಚ್ಚು ಹಿಡಿಯುವುದಿಲ.... ಎನ್ನುವ ಮುಖಾಂತರ ಸರಸಿ ಇಲ್ಲಿ ಮಾನಸಿಕವಾಗಿ ಎಷ್ಟು ಅಸ್ವಸ್ಥಳಾಗಿದ್ದಾಳೆ ಎಂಬುದನ್ನು ನಾವಿಲ್ಲಿ ನೋಡಬಹುದು. ಹೀಗೆ ವೈಯಕ್ತಿಕ ವಿಚಾರವನ್ನು ಯಾರಲ್ಲೂ ಹೇಳದೆ ದಿನಚರಿಯಲ್ಲಿ ವ್ಯಕ್ತಪಡಿಸುವ ಮೂಲಕ ಸರಸಿಯಂತವರು ಸಮಾಜದಲ್ಲಿ ಎಷ್ಟು ಸಣ್ಣವರಾಗುತ್ತಾರೆ ಎಂದು ನೋಡುತ್ತೇವೆ. ಸ್ತ್ರೀ ಮತ್ತು ಪುರುಷನ ನಡುವೆ ಉದ್ಭವಿಸಿದ ಸಮಸ್ಯೆಗಳು ಕೆಲವು ಸಲ ಸಾಮಾಜಿಕ ಆಯಾಮವನ್ನು ಪಡೆದುಕೊಳ್ಳುತ್ತದೆ. ಗೌರಮ್ಮನವರು ಮಾನಸಿಕವಾಗಿ ದ್ವಂದ್ವಕ್ಕೆ ಹಾಗೂ ಗೊಂದಲಕ್ಕೆ ಈಡಾಗಿರುವುದನ್ನು ಸರಸಿಯ ಪಾತ್ರದ ಮುಖಾಂತರ ಎಷ್ಟು ಮನೋಜ್ಞವಾಗಿ ಚಿತ್ರಿಸಿದ್ದಾರೆ ಎಂಬುದನ್ನು ತಿಳಿಯಬಹುದು.

---

[೮] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೦೫

[೯] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೦೬

ಆಕರ ಗ್ರಂಥ :

ಕೊಡಗಿನ ಗೌರಮ್ಮ : ಕಂಬನಿ ಮತ್ತು ಚಿಗುರು : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು– ಪುಟ ೧ ರಿಂದ ೨೦, ೯೮–೧೦೭

ಪರಾಮರ್ಶನ ಗ್ರಂಥಗಳು :

ಡಾ. ಗೀತಾ ಪ್ರಸಾದ್ : ಆಧುನಿಕ ಮಹಿಳಾ ಅಭಿವ್ಯಕ್ತಿ : ಧಾತ್ರಿ ಪುಸ್ತಕ – ಬೆಂಗಳೂರು. ಪುಟ ೧೫೦, ೧೫೧, ೧೫೨, ೧೭೬, ೧೬೪

## ಅಧ್ಯಾಯ : ೩.೩ ಸ್ತ್ರೀಗೆ ಶಿಕ್ಷಣ ಮತ್ತು ಆರ್ಥಿಕ ಸ್ವಾವಲಂಬನೆಯ ಚರ್ಚೆ :

ಕನ್ನಡ ಸಾಹಿತ್ಯದ ಬಹುತೇಕ ಸಣ್ಣಕಥೆಗಳ ಮುಖ್ಯ ವಸ್ತು ಹೆಣ್ಣು. ತಾಯಿಯಾಗಿ, ಅಕ್ಕನಾಗಿ, ಚಿಕ್ಕಮ್ಮನಾಗಿ, ದೊಡ್ಡಮ್ಮನಾಗಿ, ತಂಗಿಯಾಗಿ, ಮಗಳಾಗಿ ಅತ್ತಿಗೆಯಾಗಿ ನಾದಿನಿಯಾಗಿ, ಅಜ್ಜಿಯಾಗಿ, ಅತ್ತೆಯಾಗಿ ಹೀಗೆ ಹಲವಾರು ಪಾತ್ರಗಳನ್ನು ವಹಿಸುತ್ತಾಳೆ. ಆದರೂ ಒಂದು ಹೆಣ್ಣು ಏಕಕಾಲದಲ್ಲಿ ಸಮರ್ಥವಾಗಿ ನಿಭಾಯಿಸುವಳು, ಒಂದು ಕುಟುಂಬದಲ್ಲಿ ಎಲ್ಲದಕ್ಕೂ ಅವಳನ್ನೇ ಅವಲಂಬಿಸಬೇಕಾದ ಅನಿವಾರ್ಯ ಪರಿಸ್ಥಿತಿಯನ್ನು ನೋಡುತ್ತೇವೆ. ಇದೇ ಅಂಶವನ್ನು ತೆಗೆದುಕೊಂಡು ಗೌರಮ್ಮನ ಸಣ್ಣಕಥೆಗಳಲ್ಲಿ ಹೆಣ್ಣಿನ ಇತಿ ಮಿತಿಗಳೇನು ಎಂಬುದನ್ನು ತಿಳಿಯಬಹುದು. ಹಾಗಾದರೆ ಆ ಹೆಣ್ಣಿನ ವ್ಯಕ್ತಿತ್ವ ಬೆಳೆಯಬೇಕಾದ ಅನಿವಾರ್ಯತೆ ಹೇಗೆ ? ಎಂಬುದನ್ನು ಕಥೆಯಲ್ಲಿ ಬಿಂಬಿಸುತ್ತಾರೆ.

ಒಂದು ಹೆಣ್ಣು ಸಮಗ್ರವಾಗಿ ತನ್ನ ವ್ಯಕ್ತಿತ್ವವನ್ನು ಪರಿಪೂರ್ಣಗೊಳಿಸಿಕೊಳ್ಳಬೇಕು ಎಂದರೆ, ಮೊದಲಿಗೆ ಆ ಹೆಣ್ಣಿಗೆ ಶಿಕ್ಷಣ ಅಗತ್ಯವಾಗಿ ಅನಿವಾರ್ಯವಾಗಿ ಬೇಕೇ ಬೇಕು. ಶಿಕ್ಷಣದ ಜೊತೆ ಜೊತೆಯೇ ಆರ್ಥಿಕ ಸ್ವಾವಲಂಬನೆ ಇದ್ದಾಗ ಮಾತ್ರ ಒಂದು ಹೆಣ್ಣು ಪರಿಪೂರ್ಣವಾಗಿ ಬೆಳೆಯಲು ಸಾಧ್ಯವಾಗುತ್ತದೆ ಎಂಬುದನ್ನು ಗೌರಮ್ಮನವರ ಹಲವಾರು ಸಣ್ಣ ಕಥೆಗಳನ್ನು ಓದಿ ಅರ್ಥೈಸಿಕೊಂಡಾಗ ಅರಿವಿಗೆ ಬರುತ್ತದೆ. 'ಸನ್ಯಾಸಿ ರತ್ನ' ಕತೆಯಲ್ಲಿ ಬರುವ, ರತ್ನ ವಾಣಿಯ ಪಾತ್ರವನ್ನು ನೋಡಿ ಆಕರ್ಷಿತನಾಗುತ್ತಾನೆ. ಅಲ್ಲಿ ವಾಣಿಯು ಸಂಗೀತ ಕ್ಷೇತ್ರದಲ್ಲಿ ಸಾಧನೆಯನ್ನು. ಮಾಡಿರುವುದನ್ನು ಕಾಣುತ್ತೇವೆ. ಆಕಾಲದಲ್ಲಿ ಬರುವ ಇತರ ಹೆಣ್ಣುಮಕ್ಕಳನ್ನು ನೋಡಿದಾಗ ಕೇವಲ ಮದುವೆಗೆ ವರನ ಮುಂದೆ ಹೇಳುವುದಕ್ಕೆ ಎಷ್ಟು ಬೇಕೋ ಅಷ್ಟು ಸಂಗೀತ ಕಲಿತರೆ ಸಾಕು ಎಂದು ಹೇಳುತ್ತಿದ್ದ ಕಾಲದಲ್ಲಿ ವಾಣಿಯು ಅದಕ್ಕೂ ಮೀರಿ ಸಂಗೀತ ಕ್ಷೇತ್ರದಲ್ಲಿ ಸಾಧನೆಯನ್ನು ಕೇವಲ ೧೬ನೇ ವರ್ಷಕ್ಕೆ ಸಾಧಿಸಿದಳು. ಅಷ್ಟೇ ಅಲ್ಲದೆ, ವರನ ಮುಂದೆ ತಾಳಕ್ಕೆ ತಕ್ಕಂತೆ ಕುಣಿಯುವ ಗೊಂಬೆಯಂತೆ ಹೆಣ್ಣಿನ ಪ್ರಪಂಚವನ್ನು ನೋಡುತ್ತೇವೆ. ಆದರೆ ಗೌರಮ್ಮ ಆಗಲೇ ವಾಣಿಯ ಪಾತ್ರದಿಂದ ಒಂದು ಹೆಣ್ಣು ಏನೆಲ್ಲಾ ಸಾಧನೆಯನ್ನು ಮಾಡಲು ಸಾಧ್ಯ ಎಂಬುದನ್ನು ತೋರಿಸಿದ್ದಾರೆ.

ರಾಜ, ರತ್ನ ಸಂಗೀತದ ಕಾರ್ಯಕ್ರಮ ಮುಗಿಸಿ ಬರುವಾಗ ರಾಜ ರತ್ನನಿಗೆ ಹೇಳುತ್ತಾನೆ. "ನಿನ್ನುಂಗ್ರಕ್ಕೆ ನನ್ನ ಹತ್ತಿರ ಬರೋಕಾಲ ಬಂತು ಎಂದು ಅದಕ್ಕು ರತ್ನ ನಿರುತ್ತರ, ದಾರಿಯಲ್ಲಿ ಹೋಗುತ್ತಾ 'ರಾಜ ಉಂಗ್ರ ನಿನ್ಗೆ ಸಿಕ್ಕೋಲ್ಲ ಎಂದು ರತ್ನ, 'ಅದ್ಯಾಕಪ್ಪಾ'?

ನಮ್ಮಂಥಾವ್ರನ್ನೆಲ್ಲಾ ವಾಣಿ ಮದ್ವೆ ಆಗ್ತಾಳೇನೋ! ನಾ ಮದ್ವೆ ಆದ್ರೆ ತಾನೆ ಸಿಕ್ಕೋದು ಉಂಗ್ರ ನಿನ್ಗೆ "[1] ? ಈ ಸನ್ನಿವೇಶವನ್ನು ಓದಿದರೆ ಒಂದು ಹೆಣ್ಣಿಗೆ ಶಿಕ್ಷಣ ಕೊಟ್ಟರೆ ಅವಳ ಸ್ಥಾನಮಾನ ಹೇಗೆ ಇರುತ್ತದೆ ಎಂದು ತಿಳಿಯುತ್ತದೆ. ಆರ್ಥಿಕವಾಗಿ ಒಂದು ಹೆಣ್ಣು ಸ್ವತಂತ್ರ್ಯವಾಗಿದ್ದರೆ ಯಾವುದೇ ಕ್ಷೇತ್ರದ ಶಿಕ್ಷಣವನ್ನು ತಾನು ಒಲಿಸಿಕೊಂಡರೆ ಆ ಶಿಕ್ಷಣದಿಂದ ಉನ್ನತ ಸ್ಥಾನಕ್ಕೆ ಹೇಗೆ ಏರುತ್ತಾಳೆ ಎನ್ನುವುದನ್ನು ವಾಣಿಯ ಪಾತ್ರದಿಂದ ನಿರ್ಧರಿಸುತ್ತಾರೆ ಗೌರಮ್ಮನವರು.

---

[1] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂ. ಪುಟ-೨೯

'ಕೌಸಲ್ಯಾನಂದನ' ಕತೆಯನ್ನು ತೆಗೆದುಕೊಂಡಾಗ ಅದರಲ್ಲಿ ಬರುವ ಲಿನ್ನಿ ಮತ್ತು ಸೀತಾ ಇಬ್ಬರು ಹಾಸ್ಟೆಲಿನ ಗೆಳತಿಯರು. ಲಿನ್ನಿಯ ಹೆಸರು ವಸಂತ, ಎಲ್ಲರು ಅವಳನ್ನು ಲಿನ್ನಿ ಎಂದು ಕರೆಯುತ್ತಿದ್ದರು. ಶಾಲೆಯ ಹಾಸ್ಟೆಲಿನಲ್ಲಿ ರಜೆ ಬರುತ್ತಿರುವಾಗಲೇ ಸೀತಾ ಎಲ್ಲ ಸಿದ್ಧತೆಯನ್ನು ಮಾಡಿಕೊಂಡಿದ್ದಳು. ಆದರೆ ಇದ್ದಕ್ಕಿದಂತೆ ಊರಿನಿಂದ ಬಂದ ಪತ್ರವನ್ನು ಓದಿ ಸೀತೆಗೆ ಬಹಳ ಬೇಸರವಾಯಿತು. ಆ ವೇಳೆಗೆ ಲಿನ್ನಿ ಅಲ್ಲಿಗೆ ಧಾವಿಸಿದಳು. ಸೀತೆಯಿಂದ ವಿಚಾರ ತಿಳಿದ, ಲಿನ್ನಿ ತನ್ನ ಮನೆಗೆ ಆಹ್ವಾನ ಕೊಟ್ಟಳು. ಅದಕ್ಕೆ ಸೀತೆಯೂ ಸಹ ಒಪ್ಪಿದಳು. ಸೀತಾ ಎಂದರೆ ಲಿನ್ನಿಗೆ ಬಹಳ ಇಷ್ಟ. ಆದ್ದರಿಂದ ಹಳ್ಳಿಯಿಂದ ಬಂದ ಸೀತೆಯ ತಂಟೆಗೆ ಶಾಲೆಯಲ್ಲಿ ಯಾವ ಹುಡುಗಿಯರು ಬರುತ್ತಿರಲಿಲ್ಲ. ಲಿನ್ನಿ ಬಲು ಚುರುಕು, ಕ್ಲಾಸಿನಲ್ಲಿ ಮೊದಲನೆಯವಳು, ಪಾಠಕ್ಕಿಂತ ಆಟದಲ್ಲಿ ಆಸಕ್ತಿ ಹೆಚ್ಚು, ಬೇಡವಾದದ್ದನ್ನೇ ಮಾಡುವ ಬಯಕೆ, ಎಲ್ಲ ಆಟದಲ್ಲೂ ಮುಂದು, ಸುಂದರಿಯೂ ಹೌದು ಅವಳ ಸ್ವರವು ಬಹಳ ಇಂಪಾಗಿತ್ತು.

ಶಾಲೆಯ ಮದರ್ ಸಹಾ ಲಿನ್ನಿಯನ್ನು ಬಹಳ ಇಷ್ಟಪಡುತ್ತಿದ್ದರು, ಹೀಗಿರುವಾಗ ಇಬ್ಬರು ರಜೆಯಲ್ಲಿ ಲಿನ್ನಿಯ ಊರಿಗೆ ಹೋದರು. ಊರಿಗೆ ಪ್ರವೇಶ ನೀಡುತ್ತಿದ್ದಂತೆ 'ಉಮರ್ ಖಯ್ಯಾಮ್' ಓದುತ್ತಿದ್ದ ರಾಮುವಿಗೆ ಸೀತೆಯ ಪರಿಚಯವಾಯಿತು. ರಾಮುವಿಗೂ ಸಹಾ ಸೀತೆಯಂತೆ 'ಕೌಸಲ್ಯಾನಂದನ' ಕತೆಗಳನ್ನು ಓದುವ ಹುಚ್ಚು ಎಂದು ಲಿನ್ನಿ ಹೇಳಿದಳು. ಕೊನೆಗೆ ಮನೆಗೆ ಹೊರಡುವಾಗ ತಿಳಿಯಿತು ರಾಮುವಿಗೆ ಕುಂಟು ಇದೆ ಎಂದು. ರಾಮು ಲಿನ್ನಿಯ ಸೋದರತ್ತೆಯ ಮಗ ಐ.ಸಿ.ಎಸ್. ಪರೀಕ್ಷೆಗೆ ಹೋದಾಗ ಕುದುರೆಯಿಂದ ಬಿದ್ದು, ಕುಂಟಾಯಿತು ಎಂದು ಲಿನ್ನಿಯಿಂದ ಸೀತೆಗೆ ವಿಚಾರ ತಿಳಿಯಿತು. ಲಿನ್ನಿಗೆ ರಾಮುವನ್ನು ಕಂಡರೆ ಬಹಳ ಪ್ರೀತಿ. ಆದರೆ ರಾಮುವಿಗೆ ಲಿನ್ನಿ ತನ್ನ ಮೇಲೆ ಕರುಣೆಯಿಂದ ಮದುವೆಯಾಗುವುದು ಬೇಡ ಎಂಬ ಅಭಿಪ್ರಾಯ ಅವನದು ಆ ಕಾರಣದಿಂದಲೇ ಲಿನ್ನಿ ಎಷ್ಟೇ ರಾಮುವನ್ನು ಪ್ರೀತಿಯಿಂದ ಮಾತನಾಡಿಸಿದರು. ಆದರೆ ರಾಮು ಮಾತ್ರ ಅವಳ ಮನಸ್ಸು ನೋವಾಗುವ ರೀತಿಯಲ್ಲಿ ಬೇಸರವನ್ನು ತರುವ ರೀತಿಯಲ್ಲಿ ಮಾತನಾಡುತ್ತಿದ್ದ. ಹೊರಗೆ ಎಲ್ಲಿಯೂ ಅವಳ ಜೊತೆ ಬರದೆ ಹೋಗುತ್ತಿದ್ದ. ಆದರೆ ನಿಜವಾದ ಸತ್ಯವನ್ನು ತಿಳಿಯದ ನಾನು (ಸೀತೆ) ರಾಮುವಿನ ಬಗ್ಗೆ ತಪ್ಪಾಗಿ ನಿರ್ಧಾರ ತೆಗೆದುಕೊಂಡೆ. ತನ್ನ ಕ್ರೂರ, ಕಠೋರ ಶಬ್ದಗಳನ್ನು ಕೇಳಿ ರಾಮು ಎಲ್ಲರನ್ನು ಬಿಟ್ಟು ಬಹುದೂರ ಹೊರಟುಹೋದ ಆದರೆ ಎಲ್ಲ ವಿಚಾರ ತಿಳಿದ ನನಗೆ ನಿಜ ಹೇಳುವ ಧೈರ್ಯ ಮಾತ್ರ ಬರಲಿಲ್ಲ. ರಜೆ ಮುಗಿಸಿ ಬಂದ ನಂತರ ಲಿನ್ನಿಯಲ್ಲಿ ಸಾಕಷ್ಟು ಬದಲಾವಣೆ ಕಂಡು ಬಂದಿತು. ಅವಳೀಗ ಉಪಾಧ್ಯಾಯಿನಿಯರ ಮೆಚ್ಚಿನ ಶಿಷ್ಯೆ ಮೊದಲಿನ ಮಾತು, ಆಟ, ತುಂಟಾಟಿಕೆ ಯಾವುದೂ ಇಲ್ಲ. ಇಷ್ಟಾದರು ಲಿನ್ನಿಯನ್ನು ಕ್ಷಮಿಸು, ಎಂದು ಕೇಳುವ ಧೈರ್ಯ ಸೀತೆಗೆ ಇಲ್ಲ.

ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸಿದ ಮೇಲೆ ೯ ವರ್ಷಗಳಿಂದ ಜೊತೆಯಾಗಿದ್ದ ನಮಗೆ ಅಗಲುವ ಸಮಯ ಬಂದಾಗ ಬಹಳ ಕಷ್ಟವಾಯಿತು. ಮುಂದೆ ಕಾಲೇಜಿಗೆ ಸೇರಿ ತನ್ನ ವಿದ್ಯಾಭ್ಯಾಸ ಮುಂದುವರೆಸಿ ಎಂ.ಬಿ.ಬಿ.ಎಸ್ ಪರೀಕ್ಷೆಯಲ್ಲಿ ಪಾಸಾಗಿ ಡಾಕ್ಟರ್ ಆದೆ. ಆದರೆ ಲಿನ್ನಿ ಅಷ್ಟಕ್ಕೆ ವಿದ್ಯಾಭ್ಯಾಸ ನಿಲ್ಲಿಸಿದಳು. ೮ ವರ್ಷದಿಂದ ಮನೆಗೆ ಬರದಿರುವ ಲಿನ್ನಿಯನ್ನು

ತನ್ನ ಮನೆಗೆ ಕರೆತಂದು ೮ ವರ್ಷದಿಂದ  ಮನ ಬಿಚ್ಚಿ ಅವಳ ಹತ್ತಿರ ಮಾತನಾಡಲು, ಸತ್ಯ ಹೇಳಲು ಅಂಜಿದ ನಾನು ಆ ದಿನ ಲಿನ್ನಿಯ ಹತ್ತಿರ ರಾಮು ಮನೆ ಬಿಟ್ಟು ಹೋದ ಕಾರಣದ ಸತ್ಯವನ್ನು ತಿಳಿಸಿದೆ.  ಅದಕ್ಕೆ ಲಿನ್ನಿ 'ಮಿಂಚಿ ಹೋದ ಕಾಲಕ್ಕೆ ಚಿಂತಿಸಿ ಫಲವೇನು'? ಎಂದು ಹೇಳಿದಳೇ ಹೊರತು ಕೋಪ ಮಾಡಿಕೊಳ್ಳಲಿಲ್ಲ. ಇದರಿಂದಲೇ ತಿಳಿಯುತ್ತದೆ, ಒಂದು ಹೆಣ್ಣು ಶಿಕ್ಷಣವನ್ನು ಕಲಿತರೆ ಎಷ್ಟು ಉನ್ನತ ಮಟ್ಟಕ್ಕೆ ಏರುತ್ತಾಳೆ ಎಂದು.  ನಮ್ಮ ಪ್ರಚಲಿತದಲ್ಲಿ ಇರುವ ಗಾದೆಯಂತೆ 'ಹೆಣ್ಣಿಗೆ ಹೆಣ್ಣೆ ಶತ್ರು' ಎಂಬ ಆ ನಾಣ್ಣುಡಿಯನ್ನೇ ಇಲ್ಲಿ ಲಿನ್ನಿ ಸುಳ್ಳುಮಾಡಿದಳು. ಕಾರಣ ಅವಳು ಕಲಿತ ವಿದ್ಯೆಯ ಫಲ ಎಂದು ಹೇಳಬಹುದು.  ಸೀತೆಯು ಅಷ್ಟೆ, ಕೊನೆಗೂ ಸತ್ಯ ಹೇಳುವ ಧೈರ್ಯ ಮಾಡಿದ್ದು, ಅವಳು ಕಲಿತ ಶಿಕ್ಷಣದಿಂದಲೇ ಅವಳಿಗೆ ಆ ಧೈರ್ಯ ಬಂತು.

ಲಿನ್ನಿ ಸೀತೆಯ ಮನೆಗೆ ಬಂದು, ೮ ದಿನಗಳ ನಂತರ ಸೀತೆ ಲಿನ್ನಿಗೆ ಡಾಕ್ಟರ್ ಅರುಣಾದೇವಿಯನ್ನು ಪರಿಚಯಿಸಿ, ಅವರ ಮನೆಗೆ ಕರೆದುಕೊಂಡು ಹೋದಳು ಅರುಣಾದೇವಿ ಮತ್ತು ಲಿನ್ನಿ ಇಬ್ಬರು ಸಂಗೀತ ಪ್ರೇಮಿಗಳು.  ಮೊದಲೆ ಲಿನ್ನಿ ಧ್ವನಿ ಇಂಪು, ಮಧುರ. ನೀವು ಏಳು ಗಂಟೆಯವರೆಗೆ ಇದ್ದರೆ, ಅಣ್ಣ ಕೌಸಲ್ಯಾನಂದನನ್ನು ನೋಡಬಹುದು ಎಂದರು.  ಇಬ್ಬರು ಕೌಸಲ್ಯ ನಂದನನ್ನು ನೋಡುವ ಇಚ್ಚೆಯಿಂದ  ಒಪ್ಪಿದೆವು.  ಆದರೆ ಸಂಜೆ ೭ ಗಂಟೆಯಾದರು ಮನೆಗೆ ಬರದೆ ಇರುವುದನ್ನು ನೋಡಿ ಮರುದಿನ ಬರುವುದಾಗಿ ಹೇಳಿ ಹೊರಟರು,  ಮನೆಯ ಹೊರಜಗುಲಿಗೆ ಬಂದರೆ ಇಬ್ಬರು ಕುಳಿತ್ತಿದ್ದರು.  ಒಂದು ಗಂಟೆಯ ಹಿಂದೆಯೇ ಬಂದೆವು.  ಆದರೆ ನಾವೇನಾದರು ಒಳಗೆ ತಕ್ಷಣ ಬಂದರೆ ಸಂಗೀತ ಕೇಳುವ ಸುಯೋಗ ತಪ್ಪಿ ಹೋಗುತ್ತಿತ್ತು ಎಂದು ಇಲ್ಲೇ ಕುಳಿತುಬಿಟ್ಟೆವು ಎಂದರು. ಇಬ್ಬರನ್ನು ನಮಗೆ ಪರಿಚಯಿಸುವ ಹೊತ್ತಿಗೆ, ಮನೆಯೊಳಗಿನ ಆಳು ದೀಪ ತಂದ, ಆ ದೀಪದ ಬೆಳಕಿನಲ್ಲಿ ನೋಡಿದರೆ ಆಶ್ಚರ್ಯ! [೨]"ಕನ್ನಡಿಗರ ಒಲವಿನ ಕೌಸಲ್ಯಾನಂದನ – ಲಿನ್ನಿಯ ಮನವನ್ನು ಕದ್ದ ರಾಮು! ಕುಂಟ ರಾಮು"[೨]!!.

ಲಿನ್ನಿ ರಾಮು ಎಂದಳು ಅವಳ ಕೈ ಹಿಡಿದು ನನ್ನ ವಸಂತ ಎಂದ ನಾವೆಲ್ಲರು ಎಲ್ಲಿದ್ದೇವೆ? ಎಂಬುದನ್ನು ಮರೆತುಹೋದೆವು. ಇಲ್ಲಿ ಶಿಕ್ಷಣವನ್ನು ಕಲಿತ ಲಿನ್ನಿ ಎಷ್ಟೇ ಕಷ್ಟ ಬಂದರು ಎದೆಗುಂದಲಿಲ್ಲ ಎನ್ನುವುದು, ಕೊನೆಗೆ ಇದರಿಂದ ಅವಳ ಬದುಕು ಹೇಗೆ ಸುಖಾಂತ್ಯದಲ್ಲಿ ಪರಿಪೂರ್ಣಗೊಳ್ಳುತ್ತದೆ ಎಂದು ಕೊನೆಯವರೆಗೂ ಯಾವುದಕ್ಕೂ ಅಂಜದೆ ಅಳುಕದೆ, ಇತರರನ್ನು ದೂಷಿಸದೆ, ತನ್ನ ಬದುಕನ್ನು ಪರಿಪೂರ್ಣಗೊಳಿಸಿಕೊಂಡಳು ಎಂದರೆ, ಅದಕ್ಕೆ ಅವಳು ಕಲಿತ ಶಿಕ್ಷಣವೇ ಕಾರಣ.

ಇನ್ನು ಸೀತೆಯನ್ನು ತೆಗೆದುಕೊಂಡರೆ, ಅವಳಿಗೂ ಅಷ್ಟೇ ಅಧೈರ್ಯ, ಆತ್ಮ ವಿಶ್ವಾಸ ಎಲ್ಲವೂ ಶಿಕ್ಷಣದಿಂದಲೇ ಹಂತಹಂತವಾಗಿ ಮೈಗೂಡಿತು. ಈ ಕಥೆಯಲ್ಲಿ ಬರುವ ಡಾಕ್ಟರ್ ಅರುಣಾದೇವಿ. ಈ ಮೂರು ಪಾತ್ರಗಳನ್ನು ನೋಡಿದಾಗ, ಹೆಣ್ಣಿಗೆ ಶಿಕ್ಷಣವನ್ನು ಕೊಟ್ಟರೆ ಅವಳು ಬದುಕನ್ನು ಸಂಪೂರ್ಣವಾಗಿ ಹೇಗೆ ನಿಭಾಯಿಸುತ್ತಾಳೆ, ಇನ್ನೊಬ್ಬರ ಆಶ್ರಯವಿಲ್ಲದೆ, ಮತ್ತೊಬ್ಬರಿಗೆ ಅವಲಂಬಿತವಾಗದೆ, ತನ್ನ ಗುರಿಯನ್ನು ತಾನು ಹೇಗೆ ತಲುಪುತ್ತಾಳೆ,

[೨]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂ. ಪುಟ–೬೦

ಎನ್ನುವುದನ್ನು ಗೌರಮ್ಮನವರು ಈ ಕೌಸಲ್ಯಾನಂದನ ಕಥೆಯಿಂದ ತಿಳಿಸುತ್ತಾರೆ.

'ನಾಲ್ಕು ಘಟನೆಗಳು' ಎಂಬ ಕಾಗದದಲ್ಲಿ ಬರುವ ಕಥೆಯನ್ನು ನೋಡಿದಾಗ, ಸೀತಾ ರಾಮು ಇಬ್ಬರು ಗಂಡ ಹೆಂಡತಿಯರಾದರೂ ಅವರ ಸಂಬಂಧವನ್ನು ಸ್ನೇಹ ಸಂಬಂಧದಂತೆ ಚಿತ್ರಿಸಿರುವುದು ಹೊಸತನವನ್ನು ತಂದುಕೊಟ್ಟಿದೆ. ರಾಮು ಸೀತೆಗೆ ಬರೆದ ಕಾಗದದಲ್ಲಿ "ನಾನು ಕಾಗದ ಬರೆಯದಿದ್ದುದಕ್ಕೆ ಕ್ಷಮಿಸು, ನೀನು ಯೋಚಿಸಿರುವಂತೆ ಬರೆಯದಿದ್ದುದಕ್ಕೆ ಕಾರಣ ನಿನ್ನನ್ನು ಮರೆತದ್ದೂ ಅಲ್ಲ. ಹೊಸ ಸ್ನೇಹಿತರೂ ಅಲ್ಲ ನಿನಗಿಂತಲೂ ಹೆಚ್ಚಿನ ಸ್ನೇಹಿತರು ಹೊಸಬರಾಗಲು ಸಾಧ್ಯವೇ? ಕಾರಣ ಏನೆನ್ನಲಿ ಹೇಳುವುದಕ್ಕೆ ಯತ್ನಿಸುವುದಿಲ್ಲ ನೀನು ನನ್ನನ್ನು ನಂಬಬೇಕಾದರೆ ಕಾರಣಗಳ ಅಗತ್ಯವಿಲ್ಲ ನೀನು ನನ್ನನ್ನು ಬಲ್ಲೆ ಮತ್ತೇಕೆ ಹೆಚ್ಚಿನ ವಿಚಾರ" ಎಂದು ತಿಳಿಸುವುದರ ಮುಖಾಂತರವೇ ಗಂಡ ಹೆಂಡತಿಯ ಅನ್ಯೋನ್ಯತೆಯ ಸಂಬಂಧ ಸಮಾಜದಲ್ಲಿ ಹೇಗಿತ್ತು ? ಎನ್ನವುದನ್ನು ಇಲ್ಲಿ ತಿಳಿಯಬಹುದು.

• ಶಿಕ್ಷಣ ಪಡೆದ ದಂಪತಿಗಳ ಜೀವನ ಹೇಗೆ ಇರುತ್ತದೆ, ಎಂದು ಅವರ ಪತ್ರದ ಸಂಭಾಷಣೆಯ ಮುಖಾಂತರವೇ ತಿಳಿಯುತ್ತದೆ. ರಾಮು ಕೊಡುವ ಹೇಳಿಕೆ ಹೆಂಗಸರ ಉತ್ತೇಜನವಿದ್ದರೆ, ಗಂಡಸರು ಯಾವ ಕೆಲಸವನ್ನಾದರೂ ಮಾಡಬಲ್ಲರಂತೆ. ಹಿಂದೂ ದೇಶದ ಗಂಡಸರಿಗೆ ನನ್ನ ಸೀತೆಯಂತವರು ಇದ್ದಿದ್ದರೆ ಇಷ್ಟರಲ್ಲಿ ಇಡೀ ಭಾರತವು ಭಾಷೆಯಲ್ಲಿ ಒಂದಾಗಿ ಹೋಗುತ್ತಿತ್ತು. ಎಂದು ಹೇಳುವುದರ ಮುಖಾಂತರ ಗೌರಮ್ಮನವರು ರಾಮುವಿನ ಮುಖಾಂತರ ಸೀತೆಯನ್ನು ಸಮಾಜದ ಒಂದು ಆದರ್ಶ ಹೆಣ್ಣಾಗಿ ಕಾಣುವುದನ್ನು ನೋಡಬಹುದು. ಆ ಹೆಣ್ಣಿಗೆ ಸಮಾಜದಲ್ಲಿ ಎಂತಹ ಸ್ಥಾನಮಾನವನ್ನು ಕೊಡಿಸುತ್ತಾರೆ ಎಂಬುದನ್ನು ಮೇಲಿನ ಹೇಳಿಕೆ ನೋಡಿದರೆ ತಿಳಿಯುತ್ತದೆ. ಒಂದು ಮನೆಯೇ ಆಗಲಿ, ಕುಟುಂಬವೇ ಆಗಲಿ, ಸಮಾಜವೇ ಆಗಲಿ, ಸಮುದಾಯವೇ ಆಗಲಿ, ರಾಜ್ಯವೇ ಆಗಲಿ, ದೇಶವೇ ಆಗಲಿ ಅತ್ಯಂತ ಉತ್ತಮ ಮಟ್ಟದಲ್ಲಿ ಇರಬೇಕು ಎಂದರೆ ಅದಕ್ಕೆ ಹೆಣ್ಣೇ ಕಾರಣ ಎಂದು ಹೇಳುವ ಮುಖಾಂತರ ಒಂದು ಉತ್ತಮ ಸಮಾಜಕ್ಕೆ ಹೆಣ್ಣು ಎಷ್ಟು ಅನಿವಾರ್ಯ ಎಂದು ಹೇಳುತ್ತದೆ. ಅಂತಹ ಹೆಣ್ಣಿಗೆ ಶಿಕ್ಷಣವನ್ನು ನೀಡುವುದು ಅಷ್ಟೇ ಅನಿವಾರ್ಯ ಎಂದು ಹೇಳುತ್ತಾರೆ.

'ಎರಡನೆಯ ಘಟನೆಯಲ್ಲಿ' ರಾಮುವಿನ ಮುಖಾಂತರ ಸೀತೆಗೆ ಹೇಳುವ ವಿಚಾರವೆಂದರೆ ರಾಮು ಪ್ರತಿದಿನವೂ ಆಫೀಸಿಗೆ ಹೋಗುವ ರಸ್ತೆಯ ಬದಿಯಲ್ಲಿ, ಆಫೀಸಿನ ಜವಾನ ತಿಮ್ಮನ ಮನೆ ಇದೆ, ಆ ಕುಟುಂಬದಲ್ಲಿ ತಿಮ್ಮ ಅವನ ಹೆಂಡತಿ ಒಂದು ವರ್ಷದ ಮಗು, ಮೂರೇ ಜನರು ವಾಸಿಸುತ್ತಾರೆ. ತಿಮ್ಮನ ಮಗು ಯಾವಾಗಲೂ ಬೀದಿಯಲ್ಲೇ ಆಡುತ್ತಿರುತ್ತದೆ. ಮೈಮೇಲೆ ಮಸಿ ಹಚ್ಚಿದರೆ ಮಸಿಯೇ ಬಿಳಿಯಾಗಿ ತೋರಬಹುದಾದಷ್ಟು ಕಪ್ಪು. ಆ ಮಗು ಮೈ ಕಪ್ಪಾದರೇನು? ನಿಷ್ಕಲ್ಮಷವಾದ ಮುಖದ ಸೊಬಗೇ ಸಾಲದೆ?. ಇದು ಗಾಂಧೀಜಿಯವರ ವರ್ಣಭೇದ ನೀತಿಯನ್ನು ಎತ್ತಿತೋರಿಸುತ್ತದೆ. ಬಹಿರಂಗದ ಸೊಬಗಿಗಿಂತ ಅಂತರಂಗದ ನೋಟವೇ ಮುಖ್ಯವೆಂದು ಹೇಳುತ್ತಾರೆ. ಮೊನ್ನೆ ದಿನ ಅದೇ

---

ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು – ಪುಟ–೬೧

ರಸ್ತೆಯಲ್ಲಿ ರಾಮು ಕ್ಲಬ್‌ನಿಂದ ಹಿಂತಿರುಗುವಾಗ ೮ ಗಂಟೆಯಾಗಿತ್ತು ತಿಮ್ಮನ ಮನೆಯಲ್ಲಿ ಜೋರಾದ ಬಿರುಸುಮಾತುಗಳು ಕೇಳಿಬರುತ್ತಿತ್ತು. ಹತ್ತಿರ ಹೋಗಿ ನೋಡಿದರೆ ತಿಮ್ಮ ತನ್ನ ಹೆಂಡತಿಗೆ ಹೊಡೆಯುವ ದೃಶ್ಯ ನೆರೆಹೊರೆಯವರು ನೋಡುತ್ತಿದ್ದರೆ ಹೊರತು, ಮತ್ತೇನು ಮಾಡಲಿಲ್ಲ. ಇಲ್ಲಿ ಓದಿ ವಿದ್ಯಾವಂತರಾದ ರಾಮು ಮತ್ತು ಸೀತೆಯ ಬದುಕು ಹೇಗಿದೆ? ಶಿಕ್ಷಣದ ಗಾಳಿ ಗಂಧವಿಲ್ಲದ ತಿಮ್ಮ, ಆತನ ಹೆಂಡತಿಯನ್ನು ಯಾವ ರೀತಿಯಲ್ಲಿ ಶೋಷಣೆಗೆ ಗುರಿಮಾಡುತ್ತಿರುವನು ಎಂದು, ಆರ್ಥಿಕವಾಗಿ ಸ್ವಾವಲಂಬಿಯಾಗದೆ ಹೆಣ್ಣು ಸಮಾಜದಲ್ಲಿ ಎಷ್ಟು ಕಷ್ಟ ಕಾರ್ಪಣ್ಯಗಳನ್ನು ಪಡಬೇಕು ಎಂದು ತಿಳಿಯಬಹುದು, ತಿಮ್ಮನ ಹೆಂಡತಿಯ ಸ್ಥಿತಿಗತಿಗಳನ್ನು ನೋಡಿದಾಗ ಹೆಣ್ಣು ಮಕ್ಕಳಿಗೆ ಆರ್ಥಿಕ ಸ್ವಾತಂತ್ರ್ಯ ಎಷ್ಟರ ಮಟ್ಟಿಗೆ ಅನಿವಾರ್ಯ ಎಂಬುದು ತಿಳಿಯುತ್ತದೆ.

'ಮೂರನೆಯ ಘಟನೆ' ಯನ್ನು ನೋಡಿದಾಗ ನಾನು ಎಲ್.ಎ ಯಲ್ಲಿ ಹೆಣ್ಣು ಮಕ್ಕಳಿಗೂ ತಂದೆಯ ಆಸ್ತಿಯಲ್ಲಿ ಪಾಲು ದೊರೆಯಬೇಕೆಂದು ಮಸೂದೆ ತರಲಿರುವರು ನಾನು, ಅದಕ್ಕೆ ನೀನು ಚೇಷ್ಟೆ ಮಾಡಿದೆ. ನನಗೆ ತಂಗಿಯರಿದ್ದರೂ, ರಮಣಿಯರ ಆರ್ಥಿಕ ಸ್ವಾತಂತ್ರ್ಯಕ್ಕೆ ನಾನು ಶತ್ರುವಾಗಲಾರೆನೆಂದು ಎಂದು ನಾಯಕ ರಾಮುವಿನ ಮುಖಾಂತರ ಗೌರಮ್ಮನವರು ಹೇಳುತ್ತಾರೆ. ಹೆಣ್ಣಿಗೆ ಆರ್ಥಿಕ ಸ್ವಾತಂತ್ರ್ಯ ಎಂಬುದು ಅಮೂಲ್ಯವಾದದ್ದು- ಅದು ಎಲ್ಲ ಹೆಣ್ಣುಮಕ್ಕಳಿಗೂ ಬೇಕೆ ಬೇಕು. ಕೆಲವೊಬ್ಬರಿಗೆ ಮಾತ್ರ ಮೀಸಲಾಗಿರಬಾರದು ಎಂಬ ಗೌರಮ್ಮನವರ ಅನಿಸಿಕೆಯನ್ನು ಈ ಕಥೆಯಲ್ಲಿ ಗುರುತಿಸಬಹುದು. ಅಷ್ಟೇ ಅಲ್ಲದೆ ಸ್ತ್ರೀ ಸ್ವಾತಂತ್ರ್ಯ ಮತ್ತು ಹೆಣ್ಣು ಮಕ್ಕಳಿಗೆ ಆಸ್ತಿಯ ಹಕ್ಕಿನ ಪ್ರತಿಪಾದನೆಯನ್ನು ಮಾಡಿರುವುದು ಇಲ್ಲಿನ ವಿಶೇಷ. ಗೌರಮ್ಮನವರ ಕತೆಗಳಲ್ಲಿ ಹೆಣ್ಣಿಗೆ ಆಸ್ತಿಯ ಹಕ್ಕಿನ ವಿಷಯದ ಪ್ರಸ್ತಾವನೆಯಾಗಿರುವುದು ಇದೊಂದು ಸಂದರ್ಭಮಾತ್ರ ಎಂಬುದು ಗಮನಾರ್ಹ.

ಇದೇ ಘಟನೆಯಲ್ಲಿ ಬರುವ ಮತ್ತೊಂದು ದೃಶ್ಯವನ್ನು ನೋಡಿದಾಗ ರಾಮು ಮತ್ತೆ ಸೀತೆಯ ಹತ್ತಿರ ಪತ್ರದ ಮುಖಾಂತರ ತಿಳಿಸುವ ವಿಚಾರ ಏನೆಂದರೆ. ನಿನ್ನೆ ದಿನ ತೋಟಕ್ಕೆ ಹೋಗಿ ಬರುವಾಗ ಕತ್ತಲಾಗಿತ್ತು. ಈಗಿನ ಚಳಿಯಂತು ನಿನಗ ಪರಿಚಯವಿಲ್ಲದೆ ಇಲ್ಲ. ಆದರೆ ನಾನು ಆ ಚಳಿಯಲ್ಲಿ ಕೋಟು ಇಲ್ಲದೆ ತೋಟಕ್ಕೆ ಹೋಗಿ ನಂತರ ಮರಳಿ ನಡುಗುತ್ತಾ ಬರುವಾಗ ತೋಟಕ್ಕೆ ಹೋಗುವ ದಾರಿಯಲ್ಲಿ ನಂದಿಯ ಮರವಿದೆಯಲ್ಲ ಅದರ ಬುಡದಲ್ಲಿ ಯಾರೋ ಹೆಂಗಸು ಕುಳಿತ್ತಿದ್ದರು. ಅವಳ ಮಡಿಲಲ್ಲೊಂದು ಮಗು ನಿದ್ರೆ ಮಾಡುತ್ತಿತ್ತು. ತಾಯಿ ಚಳಿಯಿಂದ ನಡುಗುತ್ತಿದ್ದರು. ಮಗುವನ್ನು ಮಾತ್ರ ಸೆರಗಿನಲ್ಲಿ ಜೋಪಾನ ಮಾಡಿ ಆರೈಕೆ ಮಾಡಿದಳು. ತಾಯಿ ಆಶ್ರಯದಲ್ಲಿ ಇದ್ದ ಮಗು ನೆಮ್ಮದಿಯಿಂದ ನಿದ್ರೆ ಮಾಡುತ್ತಿತ್ತು. ಆ ಹೆಂಗಸನ್ನು ನೋಡಿದರೆ ತಕ್ಷಣ ತಿಳಿಯುತ್ತಿತ್ತು. ಅತ್ತು ಅತ್ತು ಕೆಂಪಾದ ಕಣ್ಣುಗಳು, ಕೆದರಿದ ಕೂದಲು, ಹರಿದಿರುವ ಸೀರೆ, ಇದನ್ನು ನೋಡಿ ಕಾರಣ ಏನೆಂದು ಹೆಂಗಸನ್ನು ಪ್ರಶ್ನಿಸಿದೆ, ಅನಾಥೆ ವಿಧವೆಯ ಜೊತೆ ಜಗಳವಾಡಿ ಮಗುವಿನೊಡನೆ ಮಧ್ಯ ರಾತ್ರಿಯನ್ನದೆ ಅವಳತ್ತೆ ಮನೆಯಿಂದ ಹೊರಗೆ ಹಾಕಿದ್ದಳಂತೆ [೪]"ಇದಕ್ಕೇನನ್ನುವೆ ಸೀತಾ? ಭಾರತೀಯ ರಮಣಿಯರಿಗೆ ಆರ್ಥಿಕ ಸ್ವಾತಂತ್ರ್ಯ ಇಲ್ಲದೆ ಎಷ್ಟೊಂದು ದುಷ್ಪರಿಣಾಮಗಳಾಗುತ್ತಿವೆ ಎಂದು

---

[೪]ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೬೫

ಈ ಒಂದು ಉದಾಹರಣೆಯಿಂದ ನೀನು ತಿಳಿದುಕೊಂಡರೆ ನಿಜವಾಗಿಯು ನನಗೆ ಸಂತೋಷವಾಗುವುದು. ಇನ್ನೇನು ಬರೆಯಲಿ"?

ರಾಮು ಸೀತೆ ಪಾತ್ರಗಳ ಮುಖಾಂತರ ಗೌರಮ್ಮನವರು ಆರ್ಥಿಕತೆ ಸ್ವಾತಂತ್ರವನ್ನು ಕುರಿತು ಮಾತನಾಡಿಸುತ್ತಾರೆ. ಈ ಕತೆಯಲ್ಲಿ ರಾಮು ಹೇಳುವಾಗ ಹೆಣ್ಣಿಗೆ ಆರ್ಥಿಕ ಸ್ವಾತಂತ್ರ್ಯ ಇಲ್ಲದಿದ್ದರೆ ಎಂತಹ ಸ್ಥಿತಿ ಬರುತ್ತದೆ ಎಂದು ಗಾಂಧೀಜಿಯವರ ರಾಮರಾಜ್ಯದ ಕನಸಿಗೂ ನಮ್ಮ ವಾಸ್ತವದ ಸ್ಥಿತಿಗೂ ಎಷ್ಟೋ ಅಂತರವಿದೆ ಎಂಬುದು, ಜೊತೆಗೆ ರಾಮು ಸೀತೆಗೆ ಈ ಒಂದು ಉದಾಹರಣೆಯಿಂದ ನೀನು ತಿಳಿದುಕೊಂಡರೆ ನಿಜವಾಗಿ ನನಗೆ ಸಂತೋಷ ಎನ್ನುವುದರ ಮುಖಾಂತರ ಸ್ತ್ರೀಗೆ ಶಿಕ್ಷಣ ಸಾತಂತ್ರ್ಯ, ಆರ್ಥಿಕತೆ, ಸ್ವಾವಲಂಬನೆ ಇದೆಲ್ಲವೂ ಸ್ತ್ರೀಜಗತ್ತು ಅರ್ಥೈಸಿಕೊಳ್ಳಬೇಕು ಎಂದು ಪಾತ್ರಗಳ ಮೂಲಕ ನಿರೂಪಿಸಿದ್ದಾರೆ.

'ಯಾರು'?

ಈ ಕಥೆಯಲ್ಲಿ ಮಹೇಶನ ಮುದ್ದಿನ ತಂಗಿ ಪಾಪಗೆ ೧೧ವರ್ಷ ತುಂಬುವ ವೇಳೆಗಾಗಲೆ ಬಾಲ್ಯ ವಿವಾಹ ನಡೆದು ಹೋಯಿತು. ಸೋದರತ್ತೆಯ ಮಗ ರಾಮರಾಯರಿಗೆ ಪಾಪನನ್ನು ಕೊಟ್ಟು ವಿವಾಹ ಮಾಡಲಾಯಿತು. ಜೊತೆಗೆ ಅವನ ಶಿಕ್ಷಣಕ್ಕೆ ದುಡ್ಡು ತೆರಲು ನಮ್ಮ ತಂದೆ ಒಪ್ಪಿದರು. ಮದುವೆ ಆದಾಗ ಮೆಟ್ರಿಕ್ ಪಾಸಾದ ರಾಮರಾಯ ಕಾಲೇಜು ಶಿಕ್ಷಣ ಬಿ. ಎ. ನಂತರ ಎಂ. ಎ ಯನ್ನು ಗುರಿ ಇಟ್ಟುಕೊಂಡು ಹೊರಟ ಆದರೆ, ರಾಮರಾಯ ಇಂಗ್ಲೆಂಡಿಗೆ ಹೋಗುವುದು ಪಾಪನಿಗೆ ಇಷ್ಟವಿರಲಿಲ್ಲ. ಅದರ ಸಲುವಾಗಿಯೇ ಅವಳು ರಾಮರಾಯನ ರೂಮಿಗೆ ಹೋಗಿ ಬಂದಳು. ಬರುವಾಗ ಅವಳ ಕಣ್ಣು ಕೆಂಪಾಗಿ ಹೋಯಿತು. ಆತ ಇಂಗ್ಲೆಂಡಿಗೆ ಹೋಗುವಾಗಲೂ ಅವನ ಎದುರು ಕಾಣಿಸಿಕೊಳ್ಳಲಿಲ್ಲ. ದಿನಗಳೆದಂತೆ ಪಾಪ ಬತ್ತಿಹೋದಳು. ಆದರೆ ಗಂಡ ಪರದೇಶಕ್ಕೆ ಹೋದ ವಿಚಾರಕ್ಕೆ ಇಷ್ಟು ಕೊರಗಬೇಕೆ? ಎಂದು ಅನ್ನಿಸಿತು. ನನ್ನ ಎಳೆತನದ ಗೆಳತಿ ಮುದ್ದಿನ ತಂಗಿಗೆ ಮೊದಲಿನ ನಗು ಎಲ್ಲವೂ ನಮ್ಮ ಜೀವನದಿಂದ ಹೊರಟೇ ಹೋಯ್ತು.

ಪಾಪನ ಗಂಡ ೨ ವರ್ಷವಾದ ನಂತರ ಸ್ವದೇಶಕ್ಕೆ ಬರುವ ವಿಚಾರ ತಿಳಿದೆವು. ಪಾಪನ ಮುಖದಲ್ಲಿಯೂ ಎಳೆಯ ನಗು ರಾಮರಾಯ ಬರುವ ರೈಲಿಗೆ ಹೋದವರು ನಾವು. ಅವನು ನಮ್ಮ ಜೊತೆ ಬರದೆ ಇರುವುದನ್ನು ಕಂಡು ಅವಳ ನಗುವು ಮಳೆಗಾಲದ ಬಿಸಿಲಿನಂತೆ ಮಾಯವಾಯಿತು. ಎರಡುವಾರ ಆದನಂತರವು ಅವನು ಬರಲಿಲ್ಲ. ಒಂದು ದಿನ ಪೇಪರ್‌ನಲ್ಲಿ ಅವರ ವಿಚಾರ ಬಂತು. ಪ್ರೊಫೆಸರಾಗಿ ನಿಯೋಜಿತರಾಗಿರುವುದನ್ನು ಅಭಿನಂದಿಸಿ, ೩ ತಿಂಗಳಾದರು ಅವನ ಸುಳಿವೇ ಇಲ್ಲ. ಕೊನೆಗೆ ಪಾಪನ ತಂದೆಯೇ ಪತ್ರ ಬರೆದರು ಆತನಿಂದ ಪ್ರತ್ಯುತ್ತರ ಬಂತು. ಈಗ ಬರಲು ಸಮಯವಿಲ್ಲ ಎಂದು, ಇದನ್ನು ನೋಡಿ ಪಾಪ ಕೊರಗಲಿಲ್ಲ ನೋವನ್ನು ತೋರಗೊಡಲಿಲ್ಲ. ಆದರೂ ಅಣ್ಣ ಮಹೇಶನಿಗೆ ಒಂದು ರೀತಿಯ ಭಯ, ಅವಳು ಏನಣ್ಣಾ ಬಾವಿಗೆ ಬೀಳುತ್ತೇನೆ ಎಂದು ಭಯವೋ ಎಂದು ನಕ್ಕಳು ""ಹಾಗೇನೂ ಇಲ್ಲ ಪಾಪ, ನೀನೊಬ್ಬಳೇ ಇದ್ದರೆ ಸುಮ್ಮನೆ ಚಿಂತಿಸಿ ಚಿಂತಿಸಿ ನೊಂದು ಕೊಳ್ಳುತ್ತಿ ಎಂದು ಹೇಳಿದ ಮಹೇಶ. ಅದಕ್ಕೆ ಪಾಪ ನೊಂದು ಕೊಂಡರೆ ತಾನೆ ಫಲವೇನು?

ಇದ್ದಿದ್ದರೆ ಈ ೨ ವರ್ಷದಲ್ಲಿ ಬರುತ್ತಿತ್ತು ಎಂದಳು. ಎರಡು ವರ್ಷಗಳ ಮೊದಲೇ ಹೀಗಾಗುವುದೆಂದು ನಿನಗೆ ಹೇಗೆ ಗೊತ್ತು ಪಾಪ? ಎಂದು ಪ್ರಶ್ನಿಸಿದ್ದಕ್ಕೆ ಅವಳು ಇಂಗ್ಲೆಂಡಿಗೆ ಹೋಗುವ ಸಲುವಾಗಿಯೇ ನಿನ್ನನ್ನು ಮದುವೆ ಆದೆ ಇಲ್ಲದಿದ್ದರೆ ಯಾರು ಮದುವೆ ಆಗುತ್ತಿದ್ದರು ನಿನ್ನ. ಪಾಪನ ಆನಂದವನ್ನು ಕೊಂದ ಮಾತುಗಳಿವು. ಆ ಮಾತುಗಳನ್ನು ನೆನೆದು ಕಳೆದ ೨ ವರ್ಷಗಳಿಂದ ಪಾಪ ಮಾತ್ರ ಕೊರಗುತ್ತಿದ್ದಳು. ಈಗ ನಮ್ಮನೆಯವರೆಲ್ಲಾ ಕೊರಗುತ್ತಾರೆ"[೨೧], ಅಷ್ಟೇ ಅಲ್ಲದೆ ಪತಿಯಿಂದ ತಿರಸ್ಕೃತೆಯಾದ ಪತ್ನಿ ಎಂದರೆ ಎಲ್ಲರಿಗೂ ಸಂಶಯ. ಸಮಾಜದ ಕ್ರೂರ ನಾಲಿಗೆ ಪಾಪನನ್ನು ಟೀಕಿಸದೆ ಬಿಡಲಿಲ್ಲ.

ಮತ್ತೆ ಕೆಲವು ತಿಂಗಳ ನಂತರ ಪಾಪನ ಬಲವಂತದಿಂದ ಅವನ (ರಾಮರಾಯನ) ಮನೆಗೆ ಬಿಡಲು ಹೋದೆ, ಮನೆಯವರು ಸಾವನ್ನ ಹಿಂಬಾಲಿಸುವ ದುಃಖಿಗಳಂತೆ ಸ್ಟೇಷನ್ ತನಕ ಬಂದರು. ನಾವು ಬರುವ ವಿಷಯ ತಿಳಿಸಿದ್ದರೂ ಸ್ಟೇಷನ್‌ಗೆ ಅವನು ಬಂದಿರಲಿಲ್ಲ. ರಜವಿದ್ದ ದಿನ ಮನೆಗೆ ಹೋದರು ಆತ್ಮೀಯವಾಗಿ ನಗಲಿಲ್ಲ. ನಿನ್ನ ಹೆಂಡತಿಯನ್ನು ಕರೆದುಕೊಂಡು ಬಂದಿದ್ದೇನೆ ಎಂದರೆ ಅದಕ್ಕಿಷ್ಟೊಂದು ಅವಸರವೇನಿತ್ತು ಎಂದ. ಮತ್ತೇ ನಿನ್ನ ತಂಗಿಯ ಜೊತೆ ಜೀವನ ನಡೆಸಲು ನನಗೆ ಇಷ್ಟವಿಲ್ಲ ಅದಕ್ಕೆ ಬೇಕಾದ ಖರ್ಚನ್ನು ನಾನೇ ಭರಿಸುತ್ತೇನೆ ಎಂದ.

ಪಾಪ ಅವನ ಕಾಲುಗಳಿಗೆ ಕಣ್ಣೀರಿನಿಂದ ತೊಳೆಯುತ್ತಾ ಸೇವಕಿಯಂತೆ ಇರಲು ಅವಕಾಶ ಮಾಡಿಕೊಡಿ ಎಂದು ಪ್ರಾರ್ಥಿಸಿದಳು. ಆ. ವೇಳೆಗಾಗಲೇ ಆಧುನಿಕ ಉಡುಗೆ ತೊಡುಗೆ ತೊಟ್ಟ ಮಾಲತಿ ರಾಮರಾಯನ ಹೆಂಡತಿ ಎಂದು ಪರಿಚಯಿಸಿದ ಆ ಮಾತನ್ನು ಆ ಹೆಣ್ಣು ನೋಡಿದ ಕ್ಷಣವೇ ಹಿಂದಿರುಗಿಯು ಸಹ ನೋಡದೆ ಹೊರಗೆ ನಡೆದಳು ಪಾಪ. ಇಲ್ಲಿ ರಾಮರಾಯ ವಿದ್ಯಾವಂತನಾಗಿದ್ದುಕೊಂಡು ಹೆಂಡತಿ ಇರಬೇಕಾದರೆ ಮತ್ತೊಂದು ಹೆಣ್ಣನ್ನು ತನ್ನವಳನ್ನಾಗಿ ಮಾಡಿಕೊಳ್ಳುವುದು ಎಷ್ಟರ ಮಟ್ಟಿಗೆ ನ್ಯಾಯ ಸಮ್ಮತವಾಗಿದೆ ಎಂಬುದನ್ನು ತಿಳಿಯಬಹುದು. ಅಷ್ಟೇ ಅಲ್ಲ ರಾಮರಾಯನಿಂದ ಪಾಶ್ಚಾತ್ಯ ಸಂಸ್ಕೃತಿಯ ಕಡೆ ವಾಲುತ್ತಿರುವ ಯುವ ಜನಾಂಗವನ್ನು ನೋಡಬಹುದು.

ಇಷ್ಟೆಲ್ಲಾ ನಡೆದು ೩ ವರ್ಷವಾಯಿತು. ಪಾಪನ ಆರೋಗ್ಯವು ಸುಧಾರಿಸಿತು. ಗಂಡನಿದ್ದರೂ ವಿಧವೆಯಂತೆ ಬಾಳಿದಳು. ತಂದೆ ತಾಯಿಯನ್ನು ಕಳೆದುಕೊಂಡೆವು ಸಾಲದಕ್ಕೆ ಪತಿಯಿಂದ ತಿರಸ್ಕೃತೆಯಾದ ಪತ್ನಿಯೆಂದರೆ ಎಲ್ಲರಿಗೂ ಸಂಶಯ ಸಮಾಜದ ಕ್ರೂರ ನಾಲಿಗೆ ಪಾಪನನ್ನು ಟೀಕಿಸದಿರಲಿಲ್ಲ. ಆಗಲೇ ಆರ್ಥಿಕ ಸ್ಥಿತಿಯು ಹದಗೆಟ್ಟಿತು. 'ಕೆಟ್ಟು ಪಟ್ಟಣ ಸೇರು' ಎಂಬಂತೆ ಊರು ಬಿಟ್ಟು ಬಂದೆವು

ಊರು ಬಿಡುವ ದಿನ ಬೇರೆನು ಕೆಲಸವಿಲ್ಲದೆ ಒಂದು ಸಾರ್ವಜನಿಕ ಸಭೆಗೆ ಹೋದಾಗ ಅಲ್ಲಿ ವಂದೇಮಾತರಂ ಗೀತೆಯನ್ನು ಹಾಡುವವರು ಬಂದಿರಲಿಲ್ಲ. ಪಾಪನೇ ಹಾಡಿದಳು. ಆ ಹಾಡು ನನ್ನ ತಂಗಿಯ ಜೀವನವನ್ನೇ ಸಂಪೂರ್ಣವಾಗಿ ಬದಲಾಯಿಸಿತು. ಈಗ ಅವಳು ಸುಪ್ರಸಿದ್ದ ಸಿನಿಮಾ ನಟಿ, ಅವಳ ಸ್ವರ್ಗೀಯ ಸಂಗೀತ ಕೇಳದ, ಅವಳ ಅಪೂರ್ವ

---

[೨೧] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೧೭–೧೮

ನಟನೆಯನ್ನು ನೋಡವ ಜನರಿಲ್ಲ. ಆದರೆ ಅವಳಿಗೆ ಸುಖವಾಗಲಿ, ಸಂತೋಷವಾಗಲಿ ಇಲ್ಲ ಎಂಬುದು ತಿಳಿದಿರುವುದು ನಾನೊಬ್ಬನಿಗೆ. ಅವಳ ಹಣದಿಂದ ಓದುವ ಆಸೆ ಇಲ್ಲದಿದ್ದರೂ, ಅವಳ ಹಠದ ಮುಂದೆ ನನ್ನದೇನು ನಡೆಯುವಂತಿಲ್ಲ ಎಂದು ಮಹೇಶ ತನ್ನ ಸ್ನೇಹಿತ ವಸಂತನಿಗೆ ಕಾಗದದ ಮುಖಾಂತರ ಎಲ್ಲ ವಿಚಾರ ತಿಳಿಸುತ್ತಾನೆ.

ಹೀಗೆ ಪಾಪ ಅಣ್ಣನ ಬೆಂಬಲದಿಂದ ಆರ್ಥಿಕವಾಗಿ ಸ್ವಾತಂತ್ರ್ಯವನ್ನು ಪಡೆದಳು. ಪಾಪ ಮಿಸ್ ಅರುಣಾದೇವಿ ಯಾದಳು ಎಂದು ಹೇಳುವುದರ ಮುಖಾಂತರ ಗೌರಮ್ಮನವರು ಸ್ತ್ರೀಗೆ ಎಷ್ಟೇ ಕಷ್ಟಗಳು ಇದ್ದರೂ ಅದನ್ನು ತಾಳ್ಮೆಯಿಂದ ಎದರಿಸಬೇಕೇ ಹೊರತು. ಕಷ್ಟಕ್ಕೆ ನಾವೇ ಹೆದರಬಾರದು, ಅಂಜಿ ಕುಳಿತುಕೊಳ್ಳಬಾರದು, ಇನ್ನೊಬ್ಬರನ್ನು ಅವಲಂಬಿಸಬಾರದು, ಬೇರೆಯವರಿಗೆ ಹೊರೆಯಾಗಿ ಬದುಕನ್ನು ದುರಂತಗೊಳಿಸಿಕೊಳ್ಳಬಾರದು. ನಮ್ಮ ಸಾಧನೆಗೆ ನಮ್ಮ ಅರಿವಿಗೆ, ಅಡ್ಡಿಯಾಗಿರುವ ಎಲ್ಲ ಸಮಸ್ಯೆಗಳನ್ನು ನಾವೇ ನಿವಾರಿಸಿಕೊಂಡು, ಆತ್ಮ ವಿಶ್ವಾಸದಿಂದ ಆರ್ಥಿಕತೆಯ ಸ್ವಾತಂತ್ರ್ಯದಿಂದ ಮಹಿಳೆ ದಿಟ್ಟತನದಲ್ಲಿ ಬದುಕಬೇಕು. ಇದಕ್ಕೆ ಪಾಪಳೇ ಸಾಕ್ಷಿ ಎಂದು ಚಿತ್ರಿಸುತ್ತಾರೆ. ಪಾಪ ಶಿಕ್ಷಣವನ್ನು ಪಡೆದು ತನ್ನಲ್ಲಿ ಇರುವ ಪ್ರತಿಭೆಯನ್ನು ತಾನು ಗುರುತಿಸಿಕೊಂಡು, ತಾನೇ ಅದನ್ನು ಬೆಳಕಿಗೆ ತರುವ ಪ್ರಯತ್ನವನ್ನು, ಅಣ್ಣ ಮಹೇಶನ ಸಹಾಯವನ್ನು ಪಡೆದು ದಿಟ್ಟತನದಿಂದ ಸಮಾಜದಲ್ಲಿ ಒಂದು ಸ್ಥಾನವನ್ನು ಹೇಗೆ ಗಳಿಸಿದಳು ಎಂಬುದಕ್ಕೆ, ಅವಳಲ್ಲಿ ಅಡಗಿರುವ ಶಿಕ್ಷಣದಿಂದಲೇ ಮಾತ್ರ ಇದು ಸಾಧ್ಯವಾಯಿತು ಎಂದು ಯಾವ ಮಹಿಳೆಗೆ ಶಿಕ್ಷಣ ದೊರೆಯುತ್ತದೆಯೋ ಆ ಮಹಿಳೆ ಹಂತ ಹಂತವಾಗಿ ಆರ್ಥಿಕ ಸ್ವಾತಂತ್ರ್ಯ ಪಡೆಯಲು ಇಚ್ಛಿಸುತ್ತಾಳೆ. ಪಾಪ ಮಿಸ್. ಅರುಣಾ ದೇವಿಯಾದ ಮೇಲೆ ತನ್ನ ಅಣ್ಣನ ಎಂ.ಬಿ.ಬಿ.ಎಸ್. ಖರ್ಚನ್ನು ತಾನೇ ವಹಿಸಿಕೊಂಡಿದ್ದು ನೋಡಿದರೆ ತಿಳಿಯುತ್ತದೆ. ಹೆಣ್ಣು ಅಬಲೆಯಲ್ಲ ಸಬಲೆ ಎಂದು.

'ಅಪರಾಧಿ ಯಾರು' : ಧರ್ಮ ರಕ್ಷಕನಿಂದ ಅತ್ಯಾಚಾರಕೊಳ್ಳಗಾಗಿ ಊರು ಮತ್ತು ಜಾತಿಯಿಂದ ಪಾರ್ವತಿ ಬಹಿಷ್ಕೃತಳಾಗುತ್ತಾಳೆ. ತನ್ನ ಮುದ್ದಾದ ಮಗು ಮತ್ತು ತಾನು ಇಬ್ಬರು ಸೇರಿ ಬಾವಿಗೆ ಹಾರಿ ಆತ್ಮಹತ್ಯೆಗೆ ಪ್ರಯತ್ನ ಪಡುತ್ತಾಳೆ. ಅಷ್ಟರಲ್ಲಿ ಗೈಬಿ ಅಲ್ಲಿಗೆ ಬಂದು ಬಲಾತ್ಕಾರದಿಂದ ತಾಯಿ ಮತ್ತು ಮಗುವನ್ನು ಎಳೆದು ಕೊಂಡು ಬಂದಿದ್ದಾಳೆ. ಇಲ್ಲದಿದ್ದರೆ, ತಾಯಿ ಮಗುವಿನ ಶವವನ್ನು ನೋಡುತ್ತಿದ್ದೆವು, ಎಂದು ಉನ್ನೀಸ ತನ್ನ ಅಣ್ಣನಿಗೆ ಪತ್ರ ಬರೆದು, ನಂತರ ಪಾರ್ವತಿಯನ್ನು ತನ್ನ ಧರ್ಮಕ್ಕೆ ಸೇರಿಸಿಕೊಂಡು ರಜಿಯಾಳನ್ನಾಗಿ ಮಾಡಿದಳು. ರಜಿಯ ಆದ ನಂತರ ಸಮಾಜ ಯಾವ ರೀತಿಯಲ್ಲಿ ಅವಳಿಗೆ ಪ್ರತಿಕ್ರಿಯಿಸಿತು. ಎಂಬುದನ್ನು ನಲಿನಗೆ ಲಕ್ಷ್ಮೀ ಒಬ್ಬಳೇ ಪತ್ರದ ಮುಖಾಂತರ ತಿಳಿಸುತ್ತಾಳೆ. ಆ ಲಕ್ಷ್ಮೀಯನ್ನು ಜನ ನಿಂದಿಸುವುದನ್ನು ನಾವಿಲ್ಲಿ ನೋಡುತ್ತೇವೆ. ಅದಕ್ಕೆ ಲಕ್ಷ್ಮೀ "ಅಪರಾಧಿ ಯಾರು ನಲಿನ? ಪಾರ್ವತಿ? ರಜಿಯಾ? ಆಗುವುದಕ್ಕೆ ಯಾರು ಹೊಣೆ ಅವಳೆ? ರಾಯರೆ? ಅಥವಾ ನಮ್ಮ ಕ್ರೂರ ಕಠೋರ ಸಮಾಜವೆ"[1]? ಎಂದು ಕೇಳುತ್ತಾಳೆ.

ಲಕ್ಷ್ಮಿ ಇಷ್ಟು ಪ್ರಶ್ನಿಸಬೇಕಾದರೆ ಹೆಣ್ಣಿಗೆ ಶಿಕ್ಷಣದ ಅಗತ್ಯ ಇರಲೇ ಬೇಕಾಗುತ್ತದೆ. ಹೀಗೆ ಇರದಿದ್ದರೆ, ಲಕ್ಷ್ಮಿಯಂತೆ ಧೈರ್ಯವಾಗಿ ಪ್ರಶ್ನಿಸಲು ಆಗುವ ಅನಾಹುತವನ್ನು ಕೇಳಲು

---

[1] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೮೭

ಯಾರು ಇರುತ್ತಿರಲಿಲ್ಲ. ಇನ್ನು ಪಾರ್ವತಿಯನ್ನು ನೋಡಿದಾಗ ಯಾವ ಹೆಣ್ಣಿಗೆ ಆರ್ಥಿಕ ಸ್ವಾತಂತ್ರ್ಯ ಇರುವುದಿಲ್ಲವೋ, ಆ ಹೆಣ್ಣು ಇಂತಹ ಅಧೋಗತಿಗೆ ಇಳಿಯುವುದನ್ನು ನಾವು ಕಾಣಬಹುದು, ಆದ ಕಾರಣದಿಂದಲೇ ಗೌರಮ್ಮನವರು ಆ ಕಾಲದಲ್ಲಿ ಪ್ರತಿಯೊಬ್ಬ ಹೆಣ್ಣಿಗೂ ಶಿಕ್ಷಣ ಮತ್ತು ಆರ್ಥಿಕ ಸ್ವಾತಂತ್ರ್ಯ ಅಗತ್ಯವಾಗಿ ಬೇಕೆ ಬೇಕು ಎಂದು ತಿಳಿಸುವಲ್ಲಿ ಸಫಲರಾಗುತ್ತಾರೆ. ಇಲ್ಲದಿದ್ದರೆ ಪಾರ್ವತಿಯಂತಹ ಅದೆಷ್ಟೋ ಪಾತ್ರಗಳು ನಮ್ಮ ಕಣ್ಮುಂದೆಯೇ ಬಲಿಯಾಗುವುದನ್ನು ನಾವು ಸಮಾಜದಲ್ಲಿ ಕಾಣಬಹುದು ಎಂಬುದನ್ನು ತಿಳಿಸುತ್ತಾರೆ. ಪಾರ್ವತಿಯು ಸಹಾ ಲಕ್ಷ್ಮಿಯ ಜೊತೆ ಶಿಕ್ಷಣವನ್ನು ಪಡೆದ ಹೆಣ್ಣೆ, ಆದರೆ ಹೆಣ್ಣಿಗೆ ಶಿಕ್ಷಣದ ಜೊತೆ ಜೊತೆಯೇ ಆರ್ಥಿಕ ಸ್ವಾತಂತ್ರ್ಯ ಇರಬೇಕು. ಶಿಕ್ಷಣ ಮತ್ತು ಆರ್ಥಿಕ ಸ್ವಾತಂತ್ರ್ಯ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಯಾವುದೇ ಒಂದನ್ನು ತ್ಯಜಿಸಿ ಬದುಕಲು ಬಹಳ ಕಷ್ಟವಾಗುತ್ತದೆ. ಆ ಕಾರಣದಿಂದಲೇ ಹೆಣ್ಣಿನ ಶಿಕ್ಷಣ ಮತ್ತು ಆರ್ಥಿಕ ಸ್ವಾತಂತ್ರ್ಯದ ಹಕ್ಕು ಎಲ್ಲರಿಗೂ ಕಡಾಖಂಡಿತವಾಗಿ ನೀಡಲೇಬೇಕಾದುದು. ಇಂದಿನ ಸಮಾಜದ ಹೊಣೆಗಾರಿಕೆಯಾಗಿದೆ, ಎಂಬ ಒಂದು ಅಮೂಲ್ಯವಾದ ಅಂಶವನ್ನು ಗೌರಮ್ಮನವರು ತಮ್ಮ ಕತೆಗಳಲ್ಲಿ ಚಿತ್ರಿಸುತ್ತಾರೆ.

'ಒಂದು ಚಿತ್ರ' ಕತೆಯ ಕೇಂದ್ರ ಪಾತ್ರ ರೋಹಿಣಿ. ಇಲ್ಲಿ ರೋಹಿಣಿ ದಿನೇಶನ ತಾಯಿಗೆ, ಮತ್ತು ದಿನೇಶನಿಗೆ ಇಬ್ಬರಿಗೂ ಮಗಳಾಗಿ, ತಂಗಿಯಾಗಿ, ಬೆಳೆಯುತ್ತಾಳೆ. ಆದರೆ ರೋಹಿಣಿಯ ತಂದೆ ತನ್ನ ಮಕ್ಕಳಾದ ಗೌರಿ, ಶೀಲಾ ಚಂದ್ರಾ ಎಲ್ಲರಿಗೂ ಬಾಲ್ಯದಲ್ಲೇ ಮದುವೆಮಾಡಿದ್ದರು. ಆದರೆ ರೋಹಿಣಿಗೆ ಮಾತ್ರ ಸರಿಯಾದ ಗಂಡುಸಿಕ್ಕಿ ವಿವಾಹದ ನಂತರವೂ ವಿದ್ಯಾಭ್ಯಾಸ ಮುಂದುವರೆಸಬಹುದೆಂಬ ಒಪ್ಪಿಗೆ ಕೊಟ್ಟರೆ ಮಾತ್ರ ಮದುವೆಯೆಂದು ನಿಶ್ಚಯವಾಯಿತು. ತಂದೆಯ ನಿರೀಕ್ಷೆಯಂತೆ ಮದುವೆಯಾಯಿತು, ರೋಹಿಣಿಯನ್ನು ಆ ಮದುವೆಯಾದಾತ ಶ್ರೀಮಂತರ ಒಬ್ಬನೇ ಮಗ. ಮುಂದಿನವಾರವೇ ಓದಿಗಾಗಿ ಯೂರೋಪಿಗೆ ಹೋಗುತ್ತಾನಂತೆ. ಯೂರೋಪಿನಲ್ಲಿ ಯಾವ ಹೆಣ್ಣಿನ ಬಲೆಗೆ ಬೀಳಬಾರದು ಎಂದು ಅವರ ತಂದೆ ನನಗೆ ರೂಪ–ಸೌಂದರ್ಯಗಳಿವೆಯಂತೆ ಇದರಿಂದ ತನ್ನ ಮಗನನ್ನು ಕಾಪಾಡಿಕೊಳ್ಳಬಹದು ಎಂದು, ಆತ ಯೂರೋಪಿನಿಂದ ಮರಳಿಬರುವವರೆಗೆ, ಇಲ್ಲಿ ನನ್ನೋದು ಸರಾಗವಾಗಿ ಸಾಗುತ್ತದೆ. ಆದರೆ ನನ್ನನ್ನು ಮದುವೆಯಾದಾತನು ಹೇಗೆ ಇರುವನು ಎಂದು ನೋಡುವ ಕುತೂಹಲವು ನನಗಿಲ್ಲ. ನಾನು ನೋಡಲೂ ಇಲ್ಲ ಅವನಿಗೂ ಅದೇ ಭಾವನೆ ಇರಬಹುದು ಎಂದು ತಂಗಿ ಚಿತ್ರ ಹೇಳಿದಳು.

ಆಗ ದಿನೇಶನ ತಾಯಿ, ಪತ್ರದಲ್ಲೇ ರೋಹಿಣಿಗೆ ಸಮಾಧಾನ ಮಾಡಿದರು. ಪಾಶ್ಚಾತ್ಯರಿಗೆ ಪ್ರೇಮದ ಅಂತ್ಯ ಮದುವೆ, ನಮಗೆ ಮದುವೆಯೇ ಮೊದಲನೆಯ ಪ್ರೀತಿಯ ಸೋಪಾನ ಎಂದು, ನಿನ್ನ ಬದುಕು ಇಲ್ಲಿಂದಲೇ ಆರಂಭ ಎಂದು ಹೇಳಿ ಅಕ್ಕಂದಿರ ಬದುಕಿನ ಸಂತೋಷದ ಹಾದಿಯನ್ನು ಉದಾಹರಣೆಯಾಗಿ ಕೊಟ್ಟರು.

ದಿನೇಶ ಜರ್ಮನಿಗೆ ಹೋಗಿ ೩ ವರ್ಷದ ನಂತರ ತನ್ನ ಸ್ನೇಹಿತ ಚಂದರ್ ಜೊತೆ ಮನೆಗೆ ಬಂದ. ಆದರೆ ಇವರು ಬರುವ ಮೊದಲೇ ರೋಹಿಣಿ ದಿನೇಶನ ಮನೆಗೆ ಬಂದಿದ್ದಳು. ಮೊದಮೊದಲು ಸಂಕೋಚದಿಂದ ವರ್ತಿಸುತ್ತಿದ್ದ ರೋಹಿಣಿ ಒಂದು

ವಾರದೊಳಗಾಗಿ ದಿನೇಶನಷ್ಟೆ ಸಲಿಗೆಯಿಂದ ಚಂದರ್ ಜೊತೆ ಚರ್ಚಿಮಾಡಲು ಪ್ರಾರಂಭಿಸಿದಳು. ಈ ಮೂವರು ೨ ವಾರಗಳ ಕಾಲ ಮನೆಯಲ್ಲಿ ಸದಾ ಕಾಲ ಮಾತು–ವಾದ ವಿವಾದದ ಕೋಲಾಹಲ ಇದರಲ್ಲೇ ಮೈಮರೆತು ಎರಡುವಾರ ಹೇಗೆ ಕಳೆಯಿತು ಎಂದು ಗೊತ್ತಾಗಲಿಲ್ಲ. ರೋಹಿಣಿಯ ನಿರ್ಮಲವಾದ ಮನಸ್ಸು ಸೌಂದರ್ಯಕ್ಕೆ ಅತ್ಯುತ್ತಮವಾದ ನಡವಳಿಕೆಗೆ ಚಂದರ್ ಮನವು ಸೋತಿತ್ತು. ಅವರು ಅಗಲುವಾಗಲೇ ಅವರ ಪ್ರೇಮದ ಅರಿವು ಆಗಿದ್ದು, ದಿನೇಶನ ತಾಯಿಗೆ ರೋಹಿಣಿಯ ತಾಯಿ ಪತ್ರ ಹಾಕಿದರು. ಗಂಡು ಸೀಮೆಯಿಂದ ಬಂದಿರುವನಂತೆ ನೀವುಗಳು ಖಂಡಿತ ಬರಬೇಕು ಎಂದು. ದಿನೇಶ ಮತ್ತು ಅವನ ತಾಯಿ ಇಬ್ಬರು ಹೊರಟರು. ರೋಹಿಣಿಯನ್ನು ಕರೆಸಿ ಏಕಾಂತವಾಗಿ ಮಾತನಾಡಬೇಕು ಎನ್ನುವಷ್ಟರಲ್ಲೇ, ತಂಗಿ ಚಿತ್ರ ಬಂದು ದಿನೇಶಣ್ಣ ನಿಮ್ಮನ್ನು ಕರೆಯುತ್ತಾರೆ. ದಿನೇಶಣ್ಣನ ಸ್ನೇಹಿತ ಚಂದರ್ ಬಂದಿದ್ದಾನೆ. ನೀನು ಬರಬೇಕಂತೆ ಎಂದಳು. ತಾಯಿಗೆ ಈತ ಏತಕ್ಕೆ ಈಗ ಬಂದ ಎಂದು ಆಲೋಚಿಸುತ್ತಿರುವಾಗಲೇ ತಂಗಿ ಬಂದು ನಿನಗೆ ಇವರ ಗುರುತು ಇಲ್ಲವೇನೋ ಎಂದು ಕೇಳಿದಳು ಪಾಪ ! [2]"ವ್ಯಂಗ್ಯವಾಗಿ ಅದಕ್ಕೂ ಮೊದಲು ಒಬ್ಬರೊಬ್ಬರು ನೋಡಿಯೇ ಇಲ್ಲ. ಎಂದಳು"[2]. ವಿವಾಹದ ಮಂಟಪದಲ್ಲಿ ಕಣ್ಣುಗಳು ಕುರುಡಾಗಿದ್ದವು ಎಂದನು ದಿನೇಶ. ಕುರುಡು ಅಕ್ಕ, ಭಾವ, ಎಂದು ನಕ್ಕಳು ತಂಗಿ. ದಿನೇಶನ ತಾಯಿ ಆಶ್ಚರ್ಯದ ಗುರಿ ತಲುಪುವಂತೆ, ರೋಹಿಣಿ ಚಂದರ್ ನಕ್ಕರು.

ಈ ಕತೆಯಿಂದಲೇ ತಿಳಿದುಬರುವುದೇನೆಂದರೆ, ರೋಹಿಣಿಯ ತಂದೆಯ ಮುಖಾಂತರ ತಾನು ತನ್ನ ಮೂರು ಮಕ್ಕಳಿಗೂ ಸರಿಯಾದ ಶಿಕ್ಷಣ ನೀಡಲಿಲ್ಲ ಎಂದು, ರೋಹಿಣಿಗೆ ಆ ರೀತಿ ಆಗಬಾರದು ಎಂದು, ತಂದೆ ಮೊದಲೇ ನಿರ್ಧರಿಸಿ ಅದಕ್ಕೆ ತಕ್ಕ ಸಿದ್ಧತೆ ಮಾಡುವುದನ್ನು ನೋಡಬಹುದು. ಇದರಿಂದಲೇ ಶಿಕ್ಷಣದ ಮಹತ್ವ ಎಷ್ಟು ಎಂದು ತಿಳಿಯುತ್ತದೆ. ಇಲ್ಲಿ ರೋಹಿಣಿಗೂ ಮೊದಲ ಗುರಿ ಶಿಕ್ಷಣ. ಅದಕ್ಕಾಗಿಯೋ ಮದುವೆಯ ದಿನ ತನ್ನ ಗಂಡನ ಸ್ವರೂಪವನ್ನು ಅವಳು ನೋಡಲಿಲ್ಲ. ವರನು ಸಹಾ ವಧುವನ್ನು ನೋಡಲಿಲ್ಲ, ಇಬ್ಬರಿಗೂ ಶಿಕ್ಷಣವೇ ಮುಖ್ಯ ಎಂದು ಗುರುತಿಸಬಹುದು.

ಸ್ತ್ರೀ ಪುರುಷ ಇಬ್ಬರ ನಡುವೆ ಯಾವುದೇ ರೀತಿಯ ತಾರತಮ್ಯ ಭಾವನೆಯನ್ನು ಇಟ್ಟುಕೊಳ್ಳದೆ, ಚರ್ಚೆಯಲ್ಲಿ ಪಾಲ್ಗೊಳ್ಳುವುದು. ಇವುಗಳು ಸ್ತ್ರೀ ಶಿಕ್ಷಣಾಭ್ಯಾಸದಿಂದ ಮಾತ್ರ ಮೂಡಲು ಸಾಧ್ಯವಾಯಿತು. ಇದರಿಂದ ಸಮಾಜದಲ್ಲಿನ ಸಮಾನತೆಯ ಅಂಶವನ್ನು ಸಾಧಿಸಬಹುದು ಎಂದು ಲೇಖಕಿ ಹೇಳುತ್ತಾರೆ. ಅಷ್ಟೇ ಅಲ್ಲದೆ ಸಮಾಜದಲ್ಲಿ ಹೆಣ್ಣಿನ ಶಿಕ್ಷಣದ ದೃಷ್ಟಿಕೋನವನ್ನು ಬದಲಾಯಿಸಬೇಕು ಮದುವೆಗೆ ಎಷ್ಟು ಬೇಕೋ ಅಷ್ಟು ಓದಿದರೆ ಸಾಕು ಎನ್ನುವ ಭಾವನೆಯನ್ನು ಮೊದಲಿಗೆ ತಾಯ್ತಂದೆಯರು ತೊರೆಯಬೇಕು ಎಂಬುದೇ ಗೌರಮ್ಮನವರ ಕಥೆಯ ನಿಲುವು.

ಸುಸಂಸ್ಕೃತ ತಾಯಂದಿರಿಂದ ಸುಸಂಸ್ಕೃತ ದೇಶದ ನಿರ್ಮಾಣ ಸಾಧ್ಯ ಎಂದು ಸ್ವಾಮಿ ವಿವೇಕಾನಂದರೆ ಹೇಳಿದ್ದಾರೆ. ಮೊದಲಿನಿಂದಲೂ ಸಾಹಿತ್ಯದಲ್ಲಿ ಸ್ತ್ರೀ ಶಿಕ್ಷಣದ ಬಗ್ಗೆ ಕಾಳಜಿ ಇರುವುದನ್ನು ನೋಡುತ್ತೇವೆ. ಸಂಚಿ ಹೊನ್ನಮ್ಮನ 'ಹದಿಬದೆಯ ಧರ್ಮದಲ್ಲಿ ಪೆಣ್ಣು

---

[2] ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ. ಬೆಂಗಳೂರು. ಪುಟ – ೧೮೫

ಪೆಣ್ಣೊಂದೇತಕೆ ಬೀಳುಗಳೆವರು, ಕಣ್ಣು ಕಾಣದ ಗಾವಿಲರು ಎಂದು ಅಲ್ಲಗಳೆದಿದ್ದಾರೆ. ಇಷ್ಟೆಲ್ಲಾ ತಿಳಿದು ಇಂದಿನ ತಂದೆ ತಾಯಂದಿರು ಏಕೆ ಬದಲಾಗುತ್ತಿಲ್ಲ ಎಂಬುದೇ ಗೌರಮ್ಮನವರ ಪ್ರಶ್ನೆ. ಇವರ ಕಥೆಗಳನ್ನು ನೋಡಿದರೆ ಸ್ತ್ರೀ ನೆಲೆಯಿಂದ ಸ್ತ್ರೀವಾದಿ ನೆಲೆಯತ್ತ ಸಾಗಿದಂತೆ ಕಾಣುತ್ತದೆ.

ಆಕರ ಗ್ರಂಥ :

ಕೊಡಗಿನ ಗೌರಮ್ಮ, ಕಂಬನಿ ಮತ್ತು ಚಿಗುರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಯಲ, ಬೆಂಗಳೂರು. ಪುಟ : ೨೧-೩೧, ೬೧-೬೭, ೮೨-೮೮, ೧೦೮-೧೨೪, ೧೭೪-೧೮೫,

ಪರಮರ್ಶನ ಗ್ರಂಥಗಳು :

ಡಾ. ಗೀತಪ್ರಸಾದ್ : ಆಧುನಿಕ ಮಹಿಳಾ ಅಭಿವ್ಯಕ್ತಿ, ದಾತ್ರಿ ಪುಸ್ತಕ, ಬೆಂಗಳೂರು. ಪುಟ : ೧೫೩, ೧೫೪, ೧೫೯, ೧೬೦, ೧೬೬, ೧೭೨

# ಆಕರ ಗ್ರಂಥ

## ವಿಶ್ವ ಕನ್ನಡ ಸಮ್ಮೇಳನ

# ಕಂಬನಿ ಮತ್ತು ಚಿಗುರು

(ಸಣ್ಣ ಕತೆಗಳ ಸಂಕಲನ)

**ಕೊಡಗಿನ ಗೌರಮ್ಮ**

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
೧೪-೩ಎ, ನೃಪತುಂಗರಸ್ತೆ
ಬೆಂಗಳೂರು-೫೬೦ ೦೦೨

೧೯೮೫ರ ಪ್ರಕಟಣೆ

# ಪರಾಮರ್ಶನ ಗ್ರಂಥಗಳು


**ಅಸ್ಮಿತೆ**
ಡಾ॥ ಗೀತಾಪ್ರಸಾದ್
ಡಾ॥ ಎಸ್. ಪ್ರಸಾದಸ್ವಾಮಿ
ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿ.
ಬೆಂಗಳೂರು. ೨೦೧೧ರ ಪ್ರಕಟಣೆ

**ಆಧುನಿಕ ಮಹಿಳಾ ಅಭಿವ್ಯಕ್ತಿ**
ಡಾ॥ ಗೀತಾಪ್ರಸಾದ್
ಧಾತ್ರಿ ಪುಸ್ತಕ, ಬೆಂಗಳೂರು.
೨೦೦೯ರ ಪ್ರಕಟಣೆ

**ಉತ್ತರ ದಕ್ಷಿಣ**
**ರಾಮಮನೋಹರ ಲೋಹಿಯಾ ಬರಹಗಳು**
ಸಂಪುಟ ಎರಡು
ಸಂಪಾದಕರು
ಪ್ರೊ. ಕಾಳೇಗೌಡ, ನಾಗವಾರ,
ನಟರಾಜ್ ಹುಳಿಯಾರ್,
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ,
ಬೆಂಗಳೂರು–೧೯೮ ಪ್ರಕಟಣೆ

**ಕಲ್ಪಿತ ವಾಸ್ತವ, ಕನ್ನಡ ಸಣ್ಣಕತೆ**
ಡಾ॥ ಗಿರಡಿ ಗೋವಿಂದರಾಜ
ಸಾಹಿತ್ಯ ಪ್ರಕಾಶನ,
ಹುಬ್ಬಳ್ಳಿ ೨೦೦೯ನೇ ಪ್ರಕಟಣೆ

**ಕನ್ನಡ ಲೇಖಕಿಯರ ನೆಲೆ–ಬೆಲೆ**
ಬಿ. ಎಸ್. ವೆಂಕಟಲಕ್ಷ್ಮಿ
ಎನ್.ಟಿ. ಶ್ಯಾಂ ಪ್ರಕಾಶನ ಬೆಂಗಳೂರು.
೧೯೭ನೇ ಪ್ರಕಟಣೆ

**ಕನ್ನಡ ಸಾಹಿತಿ ದರ್ಶನ**
ಎಸ್.ವಿ. ಶ್ರೀನಿವಾಸರಾವ್
ಸೌರಭ ಪ್ರಕಾಶನ,
ಬೆಂಗಳೂರು–೪೯೮೯ ಪ್ರಕಟಣೆ

**ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ**
ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
೨೦೦೬ರ ಪ್ರಕಟಣೆ

**ಕನ್ನಡ ಸಾಹಿತ್ಯ ಸಮೀಕ್ಷೆ**
ಜಿ.ಎಸ್. ಶಿವರುದ್ರಪ್ಪ
ತುಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ
ಮೈಸೂರು-೧೯೭೫ರ ಪ್ರಕಟಣೆ

**ಕನ್ನಡ ಸಾಹಿತ್ಯ ಹಿನ್ನೆಲೆ ಪ್ರೇರಣೆ ಮತ್ತು ಪ್ರಭಾವ**
(ಸಾಹಿತ್ಯ ಪ್ರವೃತ್ತಿಗಳು, ಮಹಿಳಾ ಸಾಹಿತ್ಯ)
ಮೈಸೂರು, ವಿಶ್ವವಿದ್ಯಾಲಯ, ೨೦೦೪

**ಕನ್ನಡ ಸಾಹಿತ್ಯ ಕೋಶ**
ರಾಜಪ್ಪ ದಳವಾಯಿ

**ಕನ್ನಡ ವಿಶ್ವಕೋಶ**
(ಕನ್ನಡ ಅಧ್ಯಯನ ಸಂಸ್ಥೆ ಮೈಸೂರು)

**ಜೀವನದಿ**
ಡಾ॥ ಗೀತಾಪ್ರಸಾದ್
ವಿಶ್ವಾಸ್ ಪ್ರಿಂಟ್ಸ್
ಬೆಂಗಳೂರು.
೨೦೦೯ರ ಪ್ರಕಟಣೆ

**ನಿಲುವು**
ಹೆಚ್.ಎಸ್. ರಾಘವೇಂದ್ರರಾವ್
ಕ್ರೈಸ್ಟ್ ಕಾಲೇಜ್. ಬೆಂಗಳೂರು.

**ನಡುವೆ ಸುಳಿವ ಆತ್ಮ**
ಸ್ತ್ರೀ ಸಂಕಥನದ ಚಹರೆಗಳು
ಎಂ.ಎಸ್. ಆಶಾದೇವಿ
'ಅಹರ್ನಿಶಿ' ಪ್ರಕಾಶನ.
ಶಿವಮೊಗ್ಗ. ೨೦೧೧ನೇ ಪ್ರಕಟಣೆ

**ಪರಂಪರೆ ವಿಕ್ಷಿಪ್ತತಿ**
ಡಾ॥ ಎಸ್. ಪ್ರಸಾದಸ್ವಾಮಿ
ಕಣ್ವ ಪ್ರಕಾಶನ, ಬೆಂಗಳೂರು.
೨೦೧೦ರ ಪ್ರಕಟಣೆ

**ಯುಗಧರ್ಮ ಮತ್ತು ಸಾಹಿತ್ಯ**
ಕೀರ್ತಿನಾಥ ಕುರ್ತುಕೋಟಿ

**ವಿಬಾಷೆ–ವಿಮರ್ಶೆ ಲೇಖನಗಳು**
ಡಾ॥ ಎಸ್.ವಿ. ವಿದ್ಯಾಶಂಕರ
ಪ್ರಿಯದರ್ಶಿನಿ ಪ್ರಕಾಶನ,
ಬೆಂಗಳೂರು.

**ವಿಭಾವ**
ಎಲ್.ಸಿ. ಸುಮಿತ್ರಾ
ಅಕ್ಷರ ಪ್ರಕಾಶನ
ಹೆಗ್ಗೋಡು (ಸಾಗರ) ಕರ್ನಾಟಕ
೧೯೭೭ರ ಪ್ರಕಟಣೆ

**ಪುಸ್ತಕ ಪ್ರೀತಿ**
ಟಿ.ಪಿ. ಅಶೋಕ್

**ಸ್ತ್ರೀವಾದಿ ಸಾಹಿತ್ಯ**
ಶ್ರೀಮತಿ ನಿರಂಜನೆ ಸಂಪಾದನೆ
ಕ್ರೈಸ್ಟ್ ಕಾಲೇಜು. ಬೆಂಗಳೂರು.

**ಸ್ತ್ರೀವಾದ**
ಬಿ.ಎಂ. ಸುಮಿತ್ರಬಾಯಿ
ಕನ್ನಡ ಸಾಹಿತ್ಯ ಅಕಾಡೆಮಿ,
ಬೆಂಗಳೂರು

**ಸ್ತ್ರೀವಾದಿ ಸಾಹಿತ್ಯ ಚಳುವಳಿ**
ಮಲ್ಲಿಕಘಂಟೆ ಸಂಪಾದನೆ
ಕನ್ನಡ ಸಾಹಿತ್ಯ ಅಕಾಡೆಮಿ

**ಸಣ್ಣಕತೆ**
ಡಾ॥ ಎಸ್. ಪ್ರಸಾದಸ್ವಾಮಿ

**ಸ್ತ್ರೀವಾದದ ಪ್ರಸ್ತುತತೆ,**
ಡಾ॥ ಎಸ್.ವಿ. ಪ್ರಭಾವತಿ
ಭಾರತೀಯ ಸಂಸ್ಕೃತಿ ವಿದ್ಯಾಪೀಠ ೨೦೦೦

**ಸಾಹಿತ್ಯ ವಾಣಿಜ್ಯ ಮತ್ತು ಮಹಿಳಾ ಪ್ರಜ್ಞೆ**
ಡಾ॥ ಧರಣೀದೇವಿ ಮಾಲಾಗಿತ್ತ
ರಾಜ ಪ್ರಕಾಶನ, ಬೆಂಗಳೂರು

**ಸಾಹಿತ್ಯ ಸಂವಾದ**
ಸಂಪಾದಕ
ಡಾ॥ ಎಚ್.ಎಸ್. ರಾಘವೇಂದ್ರರಾವ್
ನವಕರ್ನಾಟಕ ಪ್ರಕಾಶನ ೧೯೭೭ನೇ ಪ್ರಕಟಣೆ.

**ಸಾಹಿತ್ಯ ಮತ್ತು ಮಹಿಳಾ ಸಂವೇದನೆ**
ಡಾ॥ ದರಣಿದೇವಿ ಮಾಲಾಗಿತ್ತ
ರಾಜ ಪ್ರಕಾಶನ, ಬೆಂಗಳೂರು

**ಹೊಸಗನ್ನಡದ ಅರುಣೋದಯ**
ಶ್ರೀನಿವಾಸ ಹಾವನೂರು

**ಹೊಸಗನ್ನಡ ಸಾಹಿತ್ಯ ಚರಿತ್ರೆ**
ಎಲ್. ಎಸ್. ಶೇಷಗಿರಿರಾವ್